# ಕಸ್ತೂರಿ

## ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕರು:

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಬಾ ಚಿನ್ನಾ...

**

ಛಾಯಾಚಿತ್ರ :

ಮಹಾಂತೇಶ ಮೊರಬದ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KUSTURI. August 1986


# ಬೆಳಕಿಂಡಿ

ಹೇಳಬಾರದದ್ದೇನಾದರೂ ಈ ಜಗತ್ತಿನಲ್ಲಿ ನಿಜವಾಗಿಯೂ ಹೇಳದೆ ಉಳಿದೆಯೆ ಎಂಬ ಬಗ್ಗೆ ಸಂಶಯು ನನಗೆ.

—ಲಾರ್ಕ್ ಬ್ರ್ಯಾಗ್

ಕೇಳಿಸಿಕೊಂಡದ್ದು: ಸ್ತ್ರೀಯರಿಗೆ ಸಮಾನ ಹಕ್ಕುಗಳು! ಹದಿ ಹರಯದವರಿಗೆ ವೋಟಿನ ಹಕ್ಕು!! ಯಾವುದಾದರೂ ಕಾರು ಸಿಕ್ಕಿದರೆ ಈಗಿಂದೀಗಲೇ ಊರು ಬಿಟ್ಟು ಓಡಿಹೋಗುತ್ತೇನೆ. —ಜಾನ್ ಸ್ಪಿಯರ್ಸ್

*

ಮನೆಯೆ ಮೊದಲ ಪಾಠಶಾಲೆಯೇನೋ ನಿಜ. ಆದರೆ ಶಬ್ದಮಾಲಿನ್ಯದ ಮೂಲ ಸ್ರೋತವೂ ಅದು ಎನ್ನುವುದನ್ನು ನಾವು ಮರೆಯುವಂತಿಲ್ಲ. —ಅನಾಮಿಕ

*

ಫ್ಯಾಮಿಲಿ ಪ್ಲ್ಯಾನಿಂಗಿನವರ ಒಂದು ಘೋಷಣಾವಾಕ್ಯ: "ಪ್ರತಿಯೊಂದು ಮಗುವೂ ಒಂದು ಎಚ್ಚರಿಕೆಯ ಸಂಕೇತ."

—'ಕಸ್ತೂರಿಮೃಗ'

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದ ಚಂದಾದಾರರು ತಮ್ಮ ಟಪಾಲುಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

## ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

**ಬೆನ್‌ಹರ್**

ಜೂನ್-ಜುಲೈ ೮೬ ರ 'ಕಸ್ತೂರಿ'ಯಲ್ಲಿ ಹರಿದುಬಂದ ಪುಸ್ತಕ ವಿಭಾಗದ 'ಬೆನ್ ಹರ್' ಒಂದು ಅತ್ಯುತ್ತಮ, ಸಾರ್ವಕಾಲಿಕ ಕಲಾಕೃತಿ. ಮೂಲ ಕೃತಿಯ ಲೇಖಕ 'ಲೂ ವ್ಯಾಲೇಸ್ ರ ಆಶಯಕ್ಕೆ ಯಾವ ಧಕ್ಕೆಯೊದಗದಂತೆ, ಶ್ರೀಯುತ ಕೆ. ಪುಟ್ಟಸ್ವಾಮಿಯವರು ಸಂಗ್ರಾಹಾನುವಾದ ಮಾಡಿದ್ದಾರೆ. ಈಕೃತಿ ಇಂಗ್ಲಿಷಿನಲ್ಲಿಯೂ ಚಲಚಿತ್ರವಾಗಿಯೂ ಅತ್ಯಂತ ಜನಪ್ರಿಯವಾಗಿದೆಯಲ್ಲದೆ, ೧೧ ಆಸ್ಕರ್ ಪ್ರಶಸ್ತಿಗಳನ್ನು ತನ್ನದಾಗಿಸಿಕೊಂಡ ಹೆಮ್ಮೆಗೆ ಪಾತ್ರವಾಗಿದೆ.

ಬಾಗಲಕೋಟ — ಅಶೋಕರಾಜ ಮಜ್ಜಿಗೆ

**ಏಳನೇ ಎಡ್ವರ್ಡ್**

ನಿಮ್ಮ ಮೇ ಸಂಚಿಕೆಯಲ್ಲಿ ಬಂದ 'ಧೂಮಕೇತು ದರ್ಶನದ ಫಲಶ್ರುತಿ' (ಜಿ. ಟಿ. ನಾರಾಯಣರಾವ್) ಸೊಗಸಾಗಿದೆ. ಆದರೆ ೬೪ನೆಯ ಪುಟದಲ್ಲಿ, ೧೯೧೦ರಲ್ಲಿ ಧೂಮಕೇತು ಆಗಮಿಸಿದಾಗ ಇಹಲೋಕ ಯಾತ್ರೆ ಪೂರೈಸಿದವರು ಎಂಟನೆಯ ಎಡ್ವರ್ಡ್ ಅಲ್ಲ, ಏಳನೆಯ ಎಡ್ವರ್ಡ್. ಎಂಟನೆಯ ಎಡ್ವರ್ಡ್ ರಾಜ್ಯತ್ಯಾಗ (೧೯೩೬-೩೭ರಲ್ಲಿ?) ಮಾಡಿ ಕೆಲವು ವರ್ಷಗಳ ಹಿಂದೆಯಷ್ಟೇ ಕಾಲವಾದರು.

ಮಂಗಳೂರು — ಸಾಂಪಯ್ಯ ಭಟ್

**'ಆಂಗ್ಲ ಕವಿತಾಸಾರ'ವೆನ್ನುವುದು ಸರಿಯಲ್ಲ**

ಜೂನ್ ೧೯೮೬ರ 'ಕಸ್ತೂರಿ'ಯಲ್ಲಿ ಶತಮಾನದ ಕೃತಿ ನೂರು ಲೇಖನದಲ್ಲಿ ಹಟ್ಟಿಯಂಗಡಿ ನಾರಾಯಣರಾಯರ 'ಆಂಗ್ಲ ಕವಿತಾವಳಿ'ಯನ್ನು ಲೇಖಕರು 'ಆಂಗ್ಲ ಕವಿತಾಸಾರ' ಎಂದು ತಪ್ಪಾಗಿ ಉಲ್ಲೇಖಿಸಿದ್ದಾರೆ. 'ಆಂಗ್ಲ ಕವಿತಾವಳಿ'ಯನ್ನು ಮೂಲ ಇಂಗ್ಲಿಷ್ ಕವನಗಳ ಸಹಿತ ನಾನು ಸಂಪಾದಿಸಿ ಪ್ರಕಟಿಸಿದ್ದೇನೆ. ಅದರ ವಿಮರ್ಶೆ 'ಸಂಯುಕ್ತ ಕರ್ನಾಟಕ'ದಲ್ಲೂ ಪ್ರಕಟವಾಗಿದೆ. ಓದುಗರ ಗಮನಕ್ಕೆ ನಾರಾಯಣರಾಯರ ಕೃತಿ 'ಆಂಗ್ಲ ಕವಿತಾವಳಿ' ಎನ್ನುವುದು ಸ್ಪಷ್ಟವಾಗಿ ತಿಳಿಯುವಂತಾಗಲಿ ಎಂದು ಈ ಪತ್ರ ಬರೆಯುತ್ತಿದ್ದೇನೆ.

ಮೈಸೂರು — ಎಂ. ಎನ್. ವಿ. ಪಂಡಿತಾರಾಧ್ಯ

**ಬಿ. ಎಂ. ಶ್ರೀ. ಸರಿ**

'ಕಸ್ತೂರಿ' ಜುಲೈ ಸಂಚಿಕೆಯ ೫೭ನೇ ಪುಟದಲ್ಲಿರುವ ಶ್ರೀ ವಿಶ್ವನಾಥ ಭೂಸನೂರುಮಠರವರ 'ನನ್ನ ವಿದ್ಯಾರ್ಥಿ ಜೀವನ ಸ್ವಾರಸ್ಯಗಳು' ಲೇಖನದ ೫೫ನೇ ಪುಟದಲ್ಲಿ ಪಿಲಾನಿ ಕರ್ನಾಟಕ ಸಂಘದ ಸಭೆಯ ಕಲಾಪದಲ್ಲಿ ಲೇಖಕರು ಹೇಳಿರುವಂತೆ "ನೀನು ಎಲ್ಲಾದರೂ ಇರು ಎಂತಾದರೂ ಇರು" ಶ್ರೀಯವರದ್ದು– ಬಿ. ಎಂ. ಶ್ರೀಕಂಠಯ್ಯನವರದ್ದು, ಕುವೆಂಪುರವರದ್ದಲ್ಲ.

ಮೈಸೂರು — ಕಿ. ನ. ಸೀತಾರಾಂ

**ಅವಶ್ಯಕವಲ್ಲ, ಅವಶ್ಯಕ ಪೀಡೆ**

ಜುಲೈ 'ಕಸ್ತೂರಿ'ಯಲ್ಲಿ ವಿಶ್ವನಾಥ ಭೂಸನೂರಮಠರು ಬರೆದ 'ನನ್ನ ವಿದ್ಯಾರ್ಥಿ ಜೀವನದ ಸ್ವಾರಸ್ಯಗಳು' ಎಂಬ ಲೇಖನ ಓದಿದೆ. ಇಂಥ ಅನುಭವಗಳನ್ನು ಹಂಚಿಕೊಳ್ಳುವುದರಿಂದ ಇತರರಿಗೂ ತಮ್ಮ ತಿಳುವಳಿಕೆಯನ್ನು ವಿಸ್ತರಿಸಿಕೊಳ್ಳಲು ಸಹಕಾರಿಯಾಗುತ್ತದೆ.

ಆದರೆ "ರ್‍ಯಾಗಿಂಗ್ ಒಂದು ಅವಶ್ಯಕ ಪೀಡೆ" ಎಂಬ ಲೇಖಕರ ಅಭಿಪ್ರಾಯ ಸರ್ವಥಾ ಒಪ್ಪತಕ್ಕದ್ದಲ್ಲ. ಇದು ಅವರು ಎಂದಂತೆ ಮನೋವಿಕಾಸದ ಬದಲಾಗಿ ಮನೋವೈಕಲ್ಯಕ್ಕೆ ಕಾರಣವಾದದ್ದು ನನ್ನ ಬಂಧುವರ್ಗದೊಳಗೆ ನೋಡಿ ನನಗೆ ಗೊತ್ತಿದೆ. ಇಂಜನಿಯರಿಂಗ್ ವಿದ್ಯಾರ್ಥಿಯೊಬ್ಬ ಆರು ತಿಂಗಳಲ್ಲೇ ಕಾಲೇಜಿಗೆ ಶರಣು ಹೊಡೆದು ಮನೋರೋಗಿಯಾಗಿ ಈಗಲೂ ತಿರುಗಾಡುತ್ತಿದ್ದಾನೆ. ದಾವಣಗೆರೆಯ ದಂತವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಯೊಬ್ಬ ಆತ್ಮಹತ್ಯೆ ಮಾಡಿಕೊಂಡದ್ದನ್ನು ನಾವೆಲ್ಲ ಓದಿದ್ದೇವೆ. ರ್‍ಯಾಗಿಂಗ್ ಪ್ರತಿಬಂಧಿಸುವ ಕಾಯಿದೆಯಿದ್ದರೂ ಈ ಮೂರ್ಖ ಸಂಪ್ರದಾಯ ಇನ್ನೂ ಆಗೀಗ ಅಲ್ಲಿ ಇಲ್ಲಿ ತಲೆಯೆತ್ತುತ್ತಿದೆ ಎಂಬುದು ವೈದ್ಯಕೀಯ ಕಾಲೇಜಿನಲ್ಲಿ ಓದುತ್ತಿರುವ ನನ್ನ ಮಗನ ಮುಖಾಂತರವೂ ತಿಳಿದುಬಂದಿದೆ.

ಸಂಪ್ಪೆ. ಕೊಡಗು — ಎಸ್. ಆರ್. ಭಟ್ಟ

**ಪಾರು**

'ಕಸ್ತೂರಿ'ಯ ಜುಲೈ ಸಂಚಿಕೆಯಲ್ಲಿ ಪ್ರಕಟವಾದ

'ಪಾರಂವನ್ನು ಬಳಸಿಕೊಳ್ಳಿ' ಲೇಖನವು ಸಮಯೋಚಿತವಾಗಿದೆ. ಇದು ಪ್ರಸ್ತುತ ತೀವ್ರತರ ಸಮಸ್ಯೆಗಳಲ್ಲೊಂದಾದ ಇಂಧನದ ಸಮಸ್ಯೆಗೆ ಪರಿಹಾರವನ್ನೊದಗಿಸುವುದಲ್ಲದೆ, ದೇಶದ ನೈಸರ್ಗಿಕ ಸಂಪತ್ತಾದ ಅರಣ್ಯಗಳನ್ನು ವಿನಾಕಾರಣ ನಾಶಗೊಳಿಸುವುದನ್ನು ನಿಲ್ಲಿಸಿ, ಸದುಪಯೋಗ ಪಡಿಸಿಕೊಳ್ಳುವ ದಿಶೆಯಲ್ಲಿ ಮಾರ್ಗದರ್ಶಿಯಾಗಿದೆ.

ಬೆಂಗಳೂರು —ಮು. ರಮೇಶ

### ಒಡೆಯದ ಒಗಟೆ?

ನಮಗೆ ಉಪಲಬ್ಧವಿರುವ ವಾಲ್ಮೀಕಿ ರಾಮಾಯಣವೊಂದನ್ನೇ ನೋಡಿದರೆ, ಶ್ರೀ ಗೌರೀಶ ಕಾಯ್ಕಿಣಿಯವರು ಹೇಳುವಂತೆ ('ಕಸ್ತೂರಿ'ಜುಲೈ ೮೬) ಲಂಕೆ ಒಡೆಯದ ಒಗಟೇನೂ ಅಲ್ಲ. ಅದು ಇಂದಿನ ಲಂಕೆಯೇ ಎಂದು ನಾನು ಅನೇಕ ವರ್ಷಗಳ ಹಿಂದೆಯೇ 'ಕನ್ನಡ ಪ್ರಭಾ' ಪತ್ರಿಕೆಯಲ್ಲಿ ವಿವರಿಸಿದ್ದೇನೆ. ಹದಿನಾಲ್ಕು ವರ್ಷಗಳ ವನವಾಸದಲ್ಲಿ ರಾಮ-ಲಕ್ಷ್ಮಣರು ಕ್ರಮಿಸಿದ ದಾರಿಯನ್ನೆಲ್ಲಾ ಗುರುತಿಸದೆ ಲಂಕೆಯನ್ನೊಂದೇ ಹುಡುಕುವುದರಲ್ಲಿ ಅರ್ಥವಿಲ್ಲವೆಂದೂ ಆ ದಾರಿಯನ್ನು ಇಂದಿನ ಅಟ್ಲಾಸುಗಳಲ್ಲಿ ಕೂಡ ವಾಲ್ಮೀಕಿ ರಾಮಾಯಣದ ಸಹಾಯದಿಂದ ಗುರುತಿಸಬಹುದೆಂದೂ ತೋರಿಸಿದ್ದೇನೆ.

ವಾಲ್ಮೀಕಿ ರಾಮಾಯಣದಲ್ಲಿ ಸಿಂಹಳವೆಂಬ ಹೆಸರಿನ ಪ್ರಸ್ತಾಪವೇ ಇಲ್ಲ. ಅಲ್ಲಿರುವ ಹೆಸರುಗಳು ಸುವೇಲಮ್ ಮತ್ತು ಲಂಕಾ. ಭಾರತದ ತೀರದಿಂದ ಸಮುದ್ರವನ್ನು ದಾಟಿದವರು ತಲುಪುವ ಪ್ರದೇಶವೇ ಸುವೇಲಮ್ = ಸುಗಮವಾದ ಕಡಲ ಕರೆ. ಅದೇ ಅರಬ ಮತ್ತು ಪೋರ್ತುಗೀಜರ ಬಾಯಲ್ಲಿ ಸೀಲೋನ್ ಆಯಿತು. ಲಂಕಾ ಅದರ ದಕ್ಷಿಣಕ್ಕಿರುವ ಗುಡ್ಡಗಾಡು ಪ್ರದೇಶ. ಅವೆರಡೂ ಒಂದೇ ದ್ವೀಪದ ಭಾಗಗಳು.

ಇಂದು ಸಿಂಹಳೀಯರೆಂದುಕೊಳ್ಳುವ ಜನ ಅಲ್ಲಿಯ ಮೂಲನಿವಾಸಿಗಳಲ್ಲ. ಅವರು ಬಂಗಾಲ ಬಿಹಾರಗಳ ದಕ್ಷಿಣ ಪ್ರದೇಶಗಳಿಂದ ಬಂದವರು, ಅವರ ಮೂಲ ದೇಶದ ಹೆಸರು ಸುಹ್ಮ ಎಂದಿತ್ತು. ಅಲ್ಲಿಯ ಜನರೇ ಸುಹ್ಮಲರು. ಅವರು ಹೋಗಿ ನೆಲೆಸಿದ ದೇಶ ಸುಹ್ಮಲವೇ ಅರಬರ ಬಾಯಲ್ಲಿ ಸಿಂಹಲವಾಯಿತು.

ಇಂದಿನ ಶ್ರೀಲಂಕೆ ಎಂದು ಹೆಸರು ಇಟ್ಟವರು ಬಹುಶಃ ಅದನ್ನು ಸೀಲೋನಿನ ಸಂಸ್ಕೃತ ರೂಪವೆಂದು ಭಾವಿಸಿರಬಹುದು.

ಬೆಂಗಳೂರು —ಪಿ. ವಿ. ಜೋಶಿ

### ಸರಿಪಡಿಸಿರಿ

ನಿಮ್ಮ ಜುಲೈ ಸಂಚಿಕೆಯಲ್ಲಿ ಬಂದ ನನ್ನ ಲೇಖನದ ತಲೆಕಟ್ಟು ದೋಷಪೂರ್ಣವಾಗಿದೆ. ಅದು 'ದೇವರು ಯಾರು? ಪ್ರಜ್ಞಾಪ್ರಕಾಶದ ಮುಕ್ತ ಮನಸ್‌ತತ್ತ್ವ' ಎಂದಿರುವುದು ತಪ್ಪು. ಅದು '...ಪ್ರಜ್ಞಾಯುಕ್ತ ಮನಸ್‌ತತ್ತ್ವ' ಎಂದಾಗಬೇಕು.

ಧಾರವಾಡ —ಶಂ. ಬಾ. ಜೋಶಿ

### ಬೆಚ್ಚಗಿಡುವುದು ಹೀಗೆ

ಜುಲೈ 'ಕಸ್ತೂರಿ'ಯಲ್ಲಿ ಉಣ್ಣೆಯ ಉಡುಪು ನಮ್ಮನ್ನು ಬೆಚ್ಚಗಿಡುವುದೇಕೆ? ಎಂಬ ಲೇಖನದಲ್ಲಿ ಬರೆದ ವಿವರಣೆ ಸಮರ್ಪಕವಲ್ಲ. "ಉಣ್ಣೆಯ ನೂಲುಗಳು ಒಂದಕ್ಕೊಂದು ಅತಿ ಹತ್ತಿರವಾಗಿ ಕೂಡಿಕೊಂಡಿರುತ್ತವೆ. ಗಾಳಿಯು ಶಾಖವಾಹಕವಲ್ಲವಾದ್ದರಿಂದ ಉಣ್ಣೆಯ ವಸ್ತ್ರವನ್ನು ತೊಟ್ಟಾಗ ನೂಲುಗಳ ಸಂದಿಯಲ್ಲಿರುವ ಗಾಳಿಯು ನಮ್ಮ ದೇಹದ ಶಾಖವು ಹೊರ ಹೋಗದಂತೆ ತಡೆಯುತ್ತದೆ. ಹೀಗೆ ನಮ್ಮನ್ನು ಬೆಚ್ಚಗಿಡುತ್ತದೆ" ಅಂದಿದ್ದಾರೆ, ಇದು ಸರಿಯಲ್ಲ. ಗಾಳಿಯು ಶಾಖವಾಹಕವಲ್ಲ ಎಂಬುದು ಸರಿಯಲ್ಲ. ಥರ್ಮಾಸ್‌ನಲ್ಲಿ ನಿರ್ವಾತ ವ್ಯವಸ್ಥೆ ಮಾಡಿರುವುದು ಗಾಳಿ ಉಷ್ಣವಾಹಕ ಎಂದು. ಭೂಮಂಡಲದ ಹವಾಮಾನ ಬದಲಾವಣೆ ಗಾಳಿಯು ಶಾಖವಾಹಕವಾಗಿರುವುದರಿಂದಲ್ಲವೆ? ಉಣ್ಣೆ ಬಟ್ಟೆ ಮೈಯನ್ನು ಬೆಚ್ಚಗಿರಿಸಲು ಮುಖ್ಯ ಕಾರಣ, ಅದು ಉಷ್ಣವಾಹಕ ಅಲ್ಲದಿರುವುದು. ಈ ಗುಣ ಹತ್ತಿ ಬಟ್ಟೆಗಿಂತಲೂ ಹೆಚ್ಚು ಇದೆ. ಕಠಿಣ ಚಳಿಯಲ್ಲೂ ಉಣ್ಣೆ ಬಟ್ಟೆ ಶೀತಗೊಳ್ಳದೆ ಯಥಾಸ್ಥಿತಿಯಲ್ಲಿರುತ್ತದೆ.

ಪುಣಚ, ದ. ಕ. —ಗಣೇಶ ರೈ

ಕಸ್ತೂರಿ

ವರ್ಷ : ೩೦ ಅಗಸ್ಟ್, ೧೯೮೬ ಸಂಚಿಕೆ : ೧೨

# ಶರೀರದ ಬೆಲೆ

**ಪ. ರಾಮಕೃಷ್ಣ ಶಾಸ್ತ್ರಿ**

ಅಷ್ಟಾವಕ್ರ ಜನಿಸುವಾಗಲೇ ವಕ್ರ ಶರೀರದವನಾಗಿದ್ದರೂ ಮಹಾಪಂಡಿತನೂ ಜ್ಞಾನಿಯೂ ಆಗಿದ್ದ. ಒಂದು ಸಲ ಅವನು ದೇವೇಂದ್ರನ ಸಭೆಗೆ ಹೋದ. ಅವನನ್ನು ಕಾಣುತ್ತಲೇ ಇಂದ್ರ ಸಭೆಯಲ್ಲಿ ಕುಳಿತಿದ್ದ ಹಲವು ಮಂದಿ ಋಷಿಗಳೂ ದಿಕ್ಪಾಲಕರೂ ಅವನ ವಕ್ರ ಶರೀರಕ್ಕಾಗಿ ನಗಲಾರಂಭಿಸಿದರು. ಅವರನ್ನು ನೋಡಿ ಅಷ್ಟಾವಕ್ರ ನಾಚಿಕೊಳ್ಳುವ ಬದಲು ತಾನೂ ಗಹಗಹಿಸಿ ನಗುವುದಕ್ಕೆ ಆರಂಭಿಸಿದ.

ಆಗ ಋಷಿಗಳು ಅಷ್ಟಾವಕ್ರನೊಂದಿಗೆ "ಎಲವೋ ಅಷ್ಟಾವಕ್ರ, ನೀನೇಕೆ ನಗುತ್ತಿರುವೆ ಹೇಳು; ಸರಿಯಾದ ಕಾರಣ ಹೇಳದಿದ್ದರೆ ನಮ್ಮ ಶಾಪಕ್ಕೆ ಗುರಿಯಾಗಬೇಕಾದೀತು," ಎಂದರು.

"ನೀವು ನಕ್ಕ ಕಾರಣ ಕೇಳಬಹುದೇ?" ಎಂದು ಪ್ರಶ್ನಿಸಿದ ಅಷ್ಟಾವಕ್ರ.

"ನಿನ್ನ ಶರೀರ ಎಷ್ಟೊಂದು ವಕ್ರವಾಗಿದೆಯಲ್ಲ! ಜೋಲು ಬಿದ್ದ ಚರ್ಮ, ಅಂಕುಡೊಂಕು ಮೂಳೆ ಯಾರು ಕಂಡರೂ ನಕ್ಕಾರು; ನಮಗೂ ನಗು ಬಂದಿತು. ಆದರೆ ನೀನು ಯಾಕೆ ನಕ್ಕೆ ಅನ್ನುವುದಕ್ಕೆ ಏನಾದರೂ ಕಾರಣವುಂಟೆ?" ಎಂದರು ಋಷಿಗಳು.

"ದೇವೇಂದ್ರನ ಪಾವನವಾದ ಸಭೆಯಲ್ಲಿ

ನಿಮ್ಮಂತಹ ಚಾಂಡಾಲರೂ ಚಮ್ಮಾರರೂ ಪ್ರವೇಶಿಸಿ, ಅಪವಿತ್ರಗೊಳಿಸಿರುದನ್ನು ಕಂಡು ನಕ್ಕುಬಿಟ್ಟೆ"ಎಂದ ಅಷ್ಟಾವಕ್ರ.

ಋಷಿಗಳೂ ದಿಕ್ಪಾಲಕರೂ ಕೋಪದಿಂದ ಕೆರಳಿದರು. "ಎಲಾ ಸೊಟ್ಟ ಶರೀರದವನೆ, ನಮ್ಮನ್ನು ಹಾಗೆ ಕರೆಯಲು ನಿನಗೆಷ್ಟು ಧೈರ್ಯ?" ಎಂದು ಗುಡುಗಿದರು.

ಅಷ್ಟಾವಕ್ರ ಮುಗುಳ್ನಕ್ಕ, "ಅಣ್ಣಂದಿರೆ, ಸಿಟ್ಟಿಗೇಳಬೇಡಿ. ಸಿಟ್ಟು ಬರುವುದರಿಂದ ನಿಮ್ಮನ್ನೇ ನೀವು ಅಸ್ಪೃಶ್ಯಗೊಳಿಸಿಕೊಂಡಂತೆ. ಇರಲಿ, ನಿಮ್ಮನ್ನು ಚಮ್ಮಾರರೆಂದೂ ಚಾಂಡಾಲರೆಂದೂ ಕರೆದುದಕ್ಕೆ ನಿಮಗೆ ಕೋಪ ಬಂದಿತಲ್ಲವೆ? ನೀವು ನನ್ನ ಬಾಹ್ಯ ಶರೀರ ವಕ್ರವಾಗಿರುವುದನ್ನು ನೋಡಿ ನಗೆಯಾಡಿದಿರಿ. ಈ ಶರೀರದೊಳಗಿರುವ ಪರಮಾತ್ಮನೆಂಬ ಆತ್ಮವನ್ನು ನೀವು ನೋಡಲಿಲ್ಲ. ಆದ್ದರಿಂದ ಕೇವಲ ಚರ್ಮಕ್ಕೆ ಬೆಲೆ ಕಟ್ಟಿದವರನ್ನು ಚಮ್ಮಾರರೆಂದೂ ಮೂಳೆಗಳನ್ನು ಎಣಿಸಿದವರನ್ನು ಚಾಂಡಾಲರೆಂದೂ ಕರೆದೆ. ತಪ್ಪೇನಿದೆ? ಶರೀರ ನೋಡಬೇಡಿ, ಜಾತಿ ನೋಡಬೇಡಿ, ಒಳಗಿರುವ ಆತ್ಮ ಪರಿಶುದ್ಧವಾಗಿಯೋ ಇಲ್ಲವೋ ಎಂಬುದನ್ನು ನೋಡಿ," ಎಂದು ಗಂಭೀರವಾಗಿ ಹೇಳಿದ.

ಋಷಿಗಳ ತಲೆ ತಗ್ಗಿತು. ✿




## ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ/ ಬಿರುದಂತೆಂಬರ ಗಂಡ/ ಸತ್ತವರ ನೆರಳು

**ದೇಶಪಾಂಡೆ ಸುಬ್ಬರಾಯ**

೧೫

## ಕರ್ಕಿ ವೆಂಕಟರಮಣ ಶಾಸ್ತ್ರಿ/ ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ

ತನ್ನ ಸಮಾಜದ ನ್ಯೂನ್ಯತೆಗಳು, ದೌರ್ಬಲ್ಯ-ಗಳು ದೂರವಾಗಬೇಕು, ಅನಿಷ್ಟ, ಅನೈಸರ್ಗಿಕ ರೂಢಿ, ಸಂಪ್ರದಾಯಗಳು ತೊಲಗಬೇಕು, ಆಚಾರ, ವಿಚಾರ, ವ್ಯವಹಾರಗಳಲ್ಲಿ ವಿವೇಕ ಮೂಡಿ ಬರಬೇಕು; ಒಟ್ಟಾರೆ, ಸಾಮಾಜಿಕವಾಗಿ ಆರ್ಥಿಕವಾಗಿ, ಮಾನವೀಯವಾಗಿ, ತನ್ನ ಸಮಾಜ ಒಂದು ಹಿತಮಯ ಹಂತಕ್ಕೆ ಬಂದು ನಿಲ್ಲಬೇಕು ಎಂಬ ಕಳಕಳಿಯಿಂದ, ಹವ್ಯಕ ಹಿತೇಚ್ಛು ಗಳೊಬ್ಬರು ಬರೆದ ನಾಟಕ; 'ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ!'

೧೮೮೭ರಲ್ಲಿ ಎಂದರೆ, ಈಗ ಸರಿ ಸುಮಾರು ಒಂದು ನೂರು ವರುಷಗಳ ಹಿಂದೆ— ಮುಂಬಯಿಯ ಭಾರತೀ ಛಾಪಖಾನೆಯಲ್ಲಿ ಮುದ್ರಣಗೊಂಡು, ಮೊದಲ ಬಾರಿ ಪ್ರಕಟವಾದ ಈ ಕೃತಿಯು ಆಗಿನ ಹೊದಿಕೆ ಪತ್ರ ತಿಳಿಸುವಂತೆ, "ಈ ಪುಸ್ತಕವು ಹವ್ಯಕ ಹಿತೇಚ್ಛು ಒಬ್ಬ ವಿದ್ವಾಂಸರಿಂದ ರಚಿಸಲ್ಪಟ್ಟಿದ್ದು" ಎಂದು ಮುಖಂ ಆಗಿ ಮುದ್ರಿಸಲ್ಪಟ್ಟಿದ್ದರೂ, ಇದರ ಕೃತಿಕಾರರ ನಿಜನಾಮಧೇಯ ಕರ್ಕಿಯ ನೂರಿ ವೆಂಕಟರಮಣ ಶಾಸ್ತ್ರಿಗಳು * ಎಂಬ ಸತ್ಯ ಈಗ ಸರ್ವಸಮ್ಮತವಾಗಿದೆ.

ಈ ನಾಟಕದ ಹಂದರ ಹೀಗಿದೆ:

ಎರಡನೆಯ ಸಲ ವಿಧುರನಾದ ೬೦ ವರುಷದ ಇಗ್ಗಪ್ಪ ಹೆಗಡೆಯ ಎರಡನೆಯ ಹೆಂಡತಿ ಸತ್ತ ೧೯ನೇ ದಿನ ಆತನ ಮೂರನೆಯ ಮದುವೆಯ ಮಾತುಕತೆ ನಡೆಯುತ್ತಿರುವಾಗ ನಾಟಕ ಆರಂಭ-ವಾಗುತ್ತದೆ. ಈ ಮಾತುಗಳ ಫಲವಾಗಿ, ಈ ವರೆಗಿನ ೨ ಮದುವೆಗಳಿಗಾಗಿ ರಾಯರಲ್ಲಿ, ಅರ್ಧ ಅಡವಿಟ್ಟ ಜಮೀನಿನೊಂದಿಗೆ ಉಳಿದರ್ಧವನ್ನೂ ಅಡವಿಟ್ಟು, ಕನ್ಯಾಶುಲ್ಕ ತೆತ್ತು, ಚಿಕ್ಕ ಬಾಲಿಕೆ ಸಾವಿತ್ರಿಯೊಂದಿಗೆ ವಿವಾಹವಾಗುತ್ತಾನೆ ಇಗ್ಗಪ್ಪ. ಅಷ್ಟೇ ಅಲ್ಲ, ಮದುವೆಯಾದ ಕೆಲವೇ ದಿನಗಳಲ್ಲಿ ಕಾಮಣಿ ರೋಗದಿಂದ ಸತ್ತೂ ಹೋಗುತ್ತಾನೆ. ಈ ಮಧ್ಯೆ ಮುದಿ ಹದ್ದಾದ ತಾನೇ ಸಾವಿತ್ರಿ

---

* ನೋಡಿ: 'ಕರ್ಕಿ ವೆಂಕಟರಮಣ ಶಾಸ್ತ್ರಿಗಳು' (ಡಾ. ಶ್ರೀನಿವಾಸ ಹಾವನೂರ) ಕಸ್ತೂರಿ, ಮೇ ೧೯೭೧

ಯನ್ನೂ ಕುಟುಕಿದಂತೆ, ಇತರ ಅನೇಕ ಹವ್ಯಕ ಹದ್ದುಗಳು ಇಗ್ಗಪ್ಪನನ್ನೂ ವಿಧ ವಿಧವಾಗಿ ಸುಲಿಯುತ್ತವೆ. ಈಗಾಗಲೇ, ಜಮೀನಿನ ಅಡವಿನ ಜುಟ್ಟಿನಿಂದ ಆತನನ್ನು ಕಚ್ಚಿ ಹಿಡಿದ ರಾಯರಂತೂ ಸರಿಯೇ, ಮೂರನೆಯ ಮದುವೆ ಮಾಡಿಸುವುದಕ್ಕೆಂದು ಮಧ್ಯೆ ಓಡಾಡಿದ ಗಣೇಶ-ಭಟ್ಟ ಒಂದೆಡೆಗೆ ಕುಕ್ಕಿದರೆ, ಇನ್ನೊಂದೆಡೆಗೆ ಇಗ್ಗಪ್ಪನ ಸ್ವತಃ ಭಾವನೇ ಆದ ವಾಸಪ್ಪ ಹೆಗಡೆಯೂ ತನ್ನ ಬಡ್ಡಿ ಹಣದ ಬಲೆಯಲ್ಲಿ ಇಗ್ಗಪ್ಪನನ್ನು ಹಿಡಿಯುತ್ತಾನೆ. ಮುಂದೆ, ಇದೇ ವಾಸಪ್ಪ ಹೆಗಡೆಯಿಂದಾಗಿ ಬಸಿರೂ ಆಗಿದ್ದಲ್ಲದೆ, ಗಂಡ ಸತ್ತ ಹದಿಮೂರನೆಯ ದಿನ ತನ್ನ ಸಮಸ್ತ ಆಸ್ತಿಯನ್ನು ಕಳೆದುಕೊಂಡು, ಕೊನೆಗೆ, ಬೇಡದ ಬಸಿರನ್ನು ಕಿತ್ತೊಗೆದ 'ಗರ್ಭ ಖೂನಿ' ಅಪರಾಧಕ್ಕಾಗಿ ಎಳೆಯ ಸಾವಿತ್ರಿಗೆ ಸೆರೆ ಮನೆ ಶಿಕ್ಷೆಯಾಗುವ ಹಂತದಲ್ಲಿ ನಾಟಕ ಮುಗಿಯುತ್ತದೆ.

ಈ ನಾಟಕದ ಹೆಸರು 'ಪ್ರಹಸನ' ಎಂದಿದ್ದರೂ ಒಂದು ಪ್ರಹಸನವನ್ನು ಎಷ್ಟೋ ಪಟ್ಟು ಮಿಕ್ಕುವ, ಅಥವಾ ಅದಕ್ಕೆ ವಿರುದ್ಧವೆನ್ನ-ಬಹುದಾದ ಎಷ್ಟೋ ಗಂಭೀರ ಮುಖಗಳು ಈ ನಾಟಕದ ಕಟ್ಟಡದಲ್ಲಿವೆ. ಒಂದು ಸಮಾಜ, ತನ್ನ ಅನೇಕ ಮುಖಗಳಲ್ಲಿ ತೀರ ಕೆಳಗಿಳಿದು ಹೋದುದರ ಬಗ್ಗೆ ಕಳವಳವಿದೆ, ಹೀಗಾಯಿತಲ್ಲ ಎಂಬ ನೋವಿದೆ. ಇದು ಬದಲಾಗಬೇಕೆಂಬ ಕಳಕಳಿ ಇದೆ. ಈ ಎಲ್ಲವನ್ನೂ ವ್ಯವಸ್ಥಿತವಾಗಿ ವಿಶ್ಲೇಷಿಸುವ ವಿವೇಕವಿದೆ. ಮತ್ತು ಮುಖ್ಯ ವಾಗಿ ಈ ವಿಶ್ಲೇಷಣೆಗಳನ್ನು ಅನೇಕ ಸಲ ಮುಖಕ್ಕೆ ಹೊಡೆದಷ್ಟು ಸ್ಪಷ್ಟವಾಗಿ ಹೇಳಿ ಬಿಡುವ ನಿಷ್ಠುರತೆಯೂ ಇದೆ. ಒಂದು ದೃಷ್ಟಿ ಯಿಂದ ಬಹುಶಃ ಇಲ್ಲಿಯ ಬರಹದಲ್ಲಿಯ ನಿಷ್ಠುರ ಗುಣವೇ ಈ ನಾಟಕಕ್ಕೆ ಒಂದು ಗಟ್ಟಿಯಾದ ತಳಪಾಯವನ್ನು ಹಾಕಿದೆ ಎಂದು ಹೇಳಬಹುದೇನೋ.

ಕನ್ಯಾ ವಿಕ್ರಯದಂಥ ಒಂದು ಅನಿಷ್ಟ ಪದ್ಧತಿಯನ್ನು ಒಳಗೊಂಡ ಇಲ್ಲಿಯ ಸಮಾಜ-ದಲ್ಲಿ, ಒಂದು ಕನ್ಯೆಯನ್ನು ಕುರಿತು ಮಾತಾಡು-ವಾಗ, ವ್ಯಾಪಾರಕ್ಕಿರುವ ಯಾವುದೋ ಒಂದು ದನವನ್ನು ಕುರಿತು ಮಾತನಾಡುವಂತಹ ಅಸಭ್ಯತೆಯತ್ತ, ಅಸಂಸ್ಕೃತಿಯತ್ತ ಒತ್ತು ಕೊಡುವುದರಿಂದಲೇ ನಾಟಕ ಮೊದಲಾಗುತ್ತದೆ. ("ಹಾಗದ್ರೆ ಅದರ ಇತ್ಲಾಗಿ ತಿರಗಸೂ ಯತ್ನಾ ಮಾಡಿ ನೋಡೋ" / "ಮತ್ಯಾ ರಾದ್ರೂ ಗಂಟುಬಿದ್ದು ತಿರಿಗ್ಸಿ ಹೊಡದ್ರೂ ಹೊಡದೋ") ಎಂದರೆ ಈ ಸಮಾಜದಲ್ಲಿ, ಒಂದು ಹೆಣ್ಣು ಮತ್ತು ಹೆಣ್ಣಿನ ಮದುವೆ, ಒಂದು ದನ ಮತ್ತು ದನದ ವ್ಯವಹಾರ ಮಾತ್ರ ವಾಗಿಹೋಗಿದೆ ಎಂಬುದನ್ನು ತಿಳಿಯುವ ಉದ್ದೇಶ ಈ ಮಾತುಗಳಿಗಿರಬಹುದು.

ಹಾಗೆಯೇ, ಮುಖಸ್ತುತಿಗೆ ಮರಳಾಗುವ ಹವ್ಯಕರ ದೌರ್ಬಲ್ಯ ಕುರಿತು, "ಹುಂ ಹೆಗ ಡೇರೇ ಬರಬೇಕೂ! ಯಂತ ಮಂದ ತುಸೂ ಏರಿಸಿ ಮಾತ್ನಾಡಿಸಿದರೆ ತೀರಿತು, ಹೆಗಡೇರ ಮುಕ್ಕಳಿ ಅಟ್ಟಕ್ಕೇರಿತೇ! ಅವರು ಯತೇಚ್ಛ... ಮಾಡಿ ಕಳುಹಿಸುತ್ತಾರೆ," ಎಂದು ತೀರ ಖಾರ ವಾಗಿಯೇ ಬರೆಯುತ್ತಾರೆ ಶಾಸ್ತ್ರಿಗಳು.

ಈ ಎಲ್ಲ ಮಾತುಗಳಿಗೂ ಕಳಸವಿಟ್ಟಂತೆ, ನಾಟಕದ ಕೊನೆಯಲ್ಲಿ, ಜಜ್ಜರ ಬಾಯಿಯಿಂದ, ಹಾದರ, ಶಿಶು ಭ್ರೂಣಹತ್ಯೆ ಇತ್ಯಾದಿ ಕುರಿತು ಹೇಳಿಸುತ್ತ, ಈ ಬಗೆಯ ವ್ಯವಹಾರ ಬಾಕಿ ಸರ್ವಜಾತಿಗಳಲ್ಲಿ ಅಲ್ಪ ಸ್ವಲ್ಪ ನಡೆದೇ ಇರು ತ್ತಿದ್ದರೂ, "ಹವ್ಯಕ ಬ್ರಾಹ್ಮಣ ವಿಧವೆಯರಲ್ಲಿ ನಡೆಯುವಷ್ಟು ಮತ್ಯಾರಲ್ಲಿಯೂ ನಡೆಯುವ ದಿಲ್ಲ" ಎಂದಿರುವ ಮಾತಂತೂ ನಿಷ್ಠುರ ಪ್ರಾಮಾಣಿಕತೆಯ ಪರಾಕಾಷ್ಠೆಯೇ ಆಗಿದೆ. ಇಂದಿಗೂ ಯಾವುದೇ ಜಾತಿಯ ಬರಹಗಾರ, ತನ್ನ ಜಾತಿಯ ವಿಶ್ಲೇಷಣೆಯಲ್ಲಿ ಆಡಿರ ಲಾರದಂತಹ, ನೈತಿಕ ತಳಪಾಯದ ಒಂದು ಅತ್ಯಂತ ಕಟುವಾದ ಮಾತನ್ನು, ಈಗ ಒಂದು ನೂರು ವರುಷಗಳಷ್ಟು ಹಿಂದೆಯೇ ಆಡಿದ ಶಾಸ್ತ್ರಿಗಳ ಧೈರ್ಯವನ್ನು ಮೆಚ್ಚಲೇಬೇಕು.

ಆದರೆ, ಇನ್ನೊಂದು ಮಾತನ್ನೂ ಇಲ್ಲಿ ಗಮ ನಿಸಬೇಕು. ಮೇಲಿನಂತಹ ಮಾತುಗಳನ್ನು ಆಡುವುದಕ್ಕೆ ಎಷ್ಟು ದೊಡ್ಡ ಗೈರತ್ತು ಬೇಕೋ, ಅಷ್ಟೇ ದೊಡ್ಡ ಗೈರತ್ತು ಅದನ್ನು ಎದುರಿಸು ವವನಿಗೂ ಬೇಕಾಗುತ್ತದೆ. ಆದ್ದರಿಂದ, ಈ

ಸಂದರ್ಭದಲ್ಲಿ, ಈ ಮಾತುಗಳನ್ನು ಬರೆದ ವೆಂಕಟರಮಣಶಾಸ್ತ್ರಿಗಳು ಎಷ್ಟೋ ಅಷ್ಟೇ ಮಟ್ಟಿಗೆ, ಈ ಮಾತುಗಳನ್ನು ಎದುರಿಸಿದ ಅಂದಿನ ಹವ್ಯಕ ಸಮಾಜವೂ ಅಭಿನಂದನೆಗೆ ಪಾತ್ರವಾಗುತ್ತದೆ.

ಇದು ಒಂದು ಪ್ರಹಸನವೆಂದುಕೊಂಡಿರುವುದರಿಂದ, ಪ್ರಹಸನದ ಮುಖ್ಯ ಗುಣವಾದ ವ್ಯಂಗ್ಯ, ಲೇವಡಿಯೂ ಇಲ್ಲಿ ಆಗೀಗ ಕಂಡುಬರುತ್ತದೆ. ಮದುವೆಯ ಮಾತುಕತೆಗಳಲ್ಲಿ, ಕೊಡು ತೆಗೆದು ಕೊಳ್ಳುವ ವ್ಯವಹಾರದಲ್ಲಿ, ವ್ಯವಹಾರದ ಚಾಪೆ ರಂಗೋಲೆಗಳ ನುಸುಳುವಿಕೆಗಳಲ್ಲಿ, ಹೊಂದದ ಜಾತಕವನ್ನು ಹೇಗಾದರೂ ಮಾಡಿ, ಕೊನೆಗೆ ಜೋಯಿಸನ ಕೈಯಲ್ಲಿ ಒಂದೈವತ್ತಾದರೂ ಹಾಕಿ ಹೊಂದಿಸಿಬಿಡಬೇಕೆಂದು ಮಾತಾಡುವಲ್ಲಿ, ತನ್ನ ಮೂರನೆಯ ಮದುವೆಗಾಗಿ ಇಡಿಯ ಆಸ್ತಿಯನ್ನೇ ಅಡವಿಟ್ಟ ಇಗ್ಗಪ್ಪನ 'ದೊಡ್ಡ ಮನೆತನ' ಉಳಿಸುವದಕ್ಕೇ ಮದುವೆ ಎಂದು ಕೊಚ್ಚುವುದರಲ್ಲಿ ಸಮಾಜದ 'ಟೊಳ್ಳುತನ'ಗಳ ಹರಿತ ಲೇವಡಿ ಇದೆ.

ಹಣಕಾಸಿನ ಪ್ರಶ್ನೆ ಬಂದಾಗ ಜನಗಳು ತೋರುವ ಸಣ್ಣ ಬುದ್ಧಿಯನ್ನೂ ಶಾಸ್ತ್ರಿಗಳು ಎತ್ತಿ ತೋರಿಸುತ್ತಾರೆ. ಮದುವೆಯ ಮಧ್ಯಸ್ಥಿಕೆ ವಹಿಸಿದ ಗಣೇಶಭಟ್ಟ, ಕನ್ಯಾಶುಲ್ಕ ಮೊದಲ್ಗೊಂಡು ಚಪ್ಪರದ ಖರ್ಚಿನ ವರೆಗಿನ ರಕಮಿನಲ್ಲಿ ಮಧ್ಯವೇ ತಿಂದು ಹಾಕುವ ಸಂದರ್ಭವನ್ನೂ, ಇಗ್ಗಪ್ಪನ ಮದುವೆಗಾಗಿ ಆತನ ಸ್ವಂತ ಭಾವನೇ ಆತನಿಗೆ ಸಾಲ ಕೊಟ್ಟದ್ದಲ್ಲದೆ ಅದಕ್ಕೆ ಬಡ್ಡಿಯನ್ನು ಕೊಡಬೇಕೆಂದು ಹೇಳಿಬಿಡುವ ಸಂದರ್ಭವನ್ನೂ ಇಲ್ಲಿ ಗಮನಿಸಬೇಕು.

ಹಾಗೆಯೇ, ಯಾವ ಸಮಾಜದಲ್ಲಿಯೇ ಆಗಲಿ, ಎಂಥ ಅಪರಾಧಗೈದರೂ, ಹಣದ ಬೆಂಬಲವುಳ್ಳವ ಸಿಕ್ಕಿ ಬೀಳಲಾರ ಎಂಬ ಕಟು ಸತ್ಯವನ್ನು ಇಲ್ಲಿ ಒಂದೆಡೆಗೆ ಚಿತ್ರಿಸುತ್ತಾರೆ. ಸಾವಿತ್ರಿಯ ಹಾಗೆಯೇ ಹಾದರ ಮತ್ತು ಗರ್ಭಖೂನಿಯ ಅಪರಾಧಗೈದೂ 'ದೊಡ್ಡ ದೊಡ್ಡ' ಹೆಗಡೆಗಳ ಬೆಂಬಲದಿಂದ ಸಿಕ್ಕಿ ಬೀಳದ ಕಾವೇರಿಯ ಪ್ರಸ್ತಾಪವನ್ನು ಇಲ್ಲಿ ನೋಡಬೇಕು.

ಹಣಕಾಸು ಎಂದಾಗ ನೆನಪಾಯಿತು! ಈ ನಾಟಕ ಓದುತ್ತಿದ್ದಂತೆ, ಒಂದು ಕುತೂಹಲಕರ ಪ್ರಶ್ನೆ ಎದುರಾಗುತ್ತದೆ. ನೂರು ವರುಷಗಳಷ್ಟು ಹಿಂದೆ ಪ್ರಕಟವಾದ ಈ ನಾಟಕದಲ್ಲಿ ತಿಳಿಸಿದಂತೆ, ೧) ಒಬ್ಬ ಸಾಮಾನ್ಯ ಹವ್ಯಕ ಬ್ರಾಹ್ಮಣ ತನ್ನ ಮದುವೆಗಾಗಿ ಆಗಿನ ಕಾಲದಲ್ಲಿ, ಎರಡೂವರೆ ಸಾವಿರ ರೂ. ಕನ್ಯಾ ಶುಲ್ಕವನ್ನು, ತೆರಬಲ್ಲವನಾಗಿದ್ದ; ೨) ಇಲ್ಲಿಯ ಒಂದು ಪಾತ್ರದ ಮುಖೇನ ಹೇಳಿದಂತೆ, ಇಗ್ಗಪ್ಪನ ಮನೆಯ ಎಲ್ಲ ಖರ್ಚು ರೂ. ೫೦೦/- ಎಂದಿಟ್ಟುಕೊಂಡರೂ ಆತನ ವಾರ್ಷಿಕ ವರಮಾನ ಮಾತ್ರ ರೂ. ೩-೪ ಸಾವಿರದಷ್ಟಿತ್ತು. ಎಂದರೆ, ಅಂದಿನ ಹವ್ಯಕ ಬ್ರಾಹ್ಮಣರ ಆರ್ಥಿಕ ಮಟ್ಟವಾದರೂ ಆಗ ಯಾವ ಎತ್ತರದಲ್ಲಿತ್ತು, ಎಂಬುದೇ ಆ ಪ್ರಶ್ನೆ.

ಹವ್ಯಕ ಬ್ರಾಹ್ಮಣರ ಆಡುಮಾತಿನಲ್ಲಿಯೇ ಬರೆಯಲ್ಪಟ್ಟ ಇದು, ಆಧುನಿಕ ಕನ್ನಡ ಸಾಹಿತ್ಯದ ಮೊಟ್ಟಮೊದಲನೆಯ, ಬರಹದಲ್ಲಿಯ ನಾಟಕ ಕೃತಿ ಎಂಬುದನ್ನು ಅನುಲಕ್ಷಿಸಿ, ಒಂದು ಮಾತನ್ನು ಹೇಳಬೇಕು. ನಮ್ಮ ಇಂದಿನ ಸಂದರ್ಭದ ನಾಟಕ ಬರಹಗಳಲ್ಲಿ ಕೂಡ ಕಾಣುವಂತಹ ಯಾವುದೇ ನಾಟಕೀಯ ತಂತ್ರ, ಚಮತ್ಕಾರ, ನಿರ್ದೇಶನಾದಿ ರಂಗ ವಿವರಾದಿಗಳನ್ನು ಬಳಸದೆ, ಒಂದೆರಡೇ ಸೂಚನೆಗಳಿಂದ, ಆದರೆ ಉದ್ದಕ್ಕೂ ಸಾಗುವ ಲವಲವಿಕೆಯ ಸಂಭಾಷಣೆ ಮಾತ್ರದಿಂದಲೇ ನಾಟಕತ್ವದ ಬಹಳಷ್ಟು ಗುಣಗಳನ್ನು ಮೈಗೂಡಿಸಿಕೊಂಡದ್ದು ಈ ಕೃತಿಯ ಸಾಧನೆಯಾಗಿದೆ.

ಈ ನಾಟಕಕಾರ, ತಾನು ಯಾವ ಹವ್ಯಕ ಸಮಾಜದ ಊನ ಕೆಲವುಗಳನ್ನು ಕುರಿತು ನಾಟಕದುದ್ದಕ್ಕೂ ಆನುಷಂಗಿಕವಾಗಿ ಗೇಲಿ ಮಾಡುತ್ತಾನೋ, ನಿಷ್ಠುರವಾಗಿ ವಿಶ್ಲೇಷಿಸುತ್ತಾನೋ, ಆ ದೌರ್ಬಲ್ಯ ಕೆಲವನ್ನು ಕುರಿತು ಒಂದು ರೀತಿಯ ನೊಂದ ಶೈಲಿಯಲ್ಲಿ ಆದರೆ Matter of fact ರೀತಿಯಲ್ಲಿ (ಹಿತೇಚ್ಛುವಾಗಿ) ಎರಡು ಕಡೆ ಸುದೀರ್ಘವಾಗಿ ಉಲ್ಲೇಖಿಸುತ್ತಾರೆ. ಸಮಾಜದ ಆರ್ಥಿಕ ರಂಗದ ಅವನತಿ ಕುರಿತಂತೆ ನಾಡಿಗರ ಮಾತಿನಲ್ಲಿ ಒಡಮೂಡಿಸಿದ್ದರೆ, ಸಾಮಾಜಿಕ ಅವನತಿ ಕುರಿತು ಜಜ್ಜರ ತೀರ್ಪಿನಲ್ಲಿ ಹೇಳಿಸಿದ್ದಾರೆ. ಆದರೆ ಈ ಎರಡೂ ಸಂದರ್ಭಗಳಂ

ನಾಟಕದ ಒಟ್ಟು ಚೌಕಟ್ಟಿಗೆ ಪೂರ್ತಿ ಹೊಂದಿಕೊಂಡು ನಿಂತಿವೆ ಎಂಬುದೇ ಇಲ್ಲಿಯ ಒಂದು ಮುಖ್ಯ ನಾಟಕೀಯ ಗೆಲುವಾಗಿದೆ.

ಆದರೆ, ಈ ಇಡಿಯ ನಾಟಕವನ್ನು ಓದಿದ ನಂತರ ಒಂದು ಮಾತನ್ನು ನಾವು ನೆನಪಿಡಬೇಕು: ಈ ಎಲ್ಲ ನಿಷ್ಠುರಗಳ ಹಿಂದಿನ ನೋವನ್ನು, ಎಲ್ಲ ವಿಶ್ಲೇಷಣಗಳ ಹಿಂದಿರುವ ವಿವೇಕವನ್ನು, ಎಲ್ಲ ಕಟಕಿಯ ಹಿಂದಿರುವ ಕಳಕಳಿಯನ್ನು ನಾವು ಗುರುತಿಸದೆ ಹೋದರೆ, ಈ ಇಡಿಯ ಕೃತಿಯನ್ನು ಕೃತಿಯ ಸಂದರ್ಭವನ್ನು, ಅದರ ಸಮಸ್ತ ಆಶಯವನ್ನು ನಾವು ಅಪಾರ್ಥ ಮಾಡಿಕೊಳ್ಳುವ ಸಾಧ್ಯತೆಯೇ ಹೆಚ್ಚಾಗುತ್ತದೆ.

ಒಂದು ಸಮಾಜದ ಒಂದು ಸನ್ನಿವೇಶದ ಬಗ್ಗೆ, ಅದರ ಸಮಸ್ಯೆಗಳ ಬಗ್ಗೆ, ಅದರ ದುರಂತಗಳ ಬಗ್ಗೆ, ನಿಟ್ಟುಸಿರಿನೊಂದಿಗೆ ಹೇಳುವುದನ್ನೇ ನಗೆ ವ್ಯಂಗ್ಯ ಮತ್ತು ನಿಷ್ಠುರತೆಗಳ ಮಧ್ಯೆ ಹೇಳಿದ್ದಾರೆಂಬುದನ್ನು ನೆನಪಿಟ್ಟುಕೊಂಡರೆ ಮಾತ್ರ ನಾವು ಕೃತಿಗೆ ಹತ್ತಿರ ಬರಬಹುದಷ್ಟೇ.

ಕನ್ನಡದ ಯಾವ ಸಂದರ್ಭದಲ್ಲೂ, ಯಾವುದೇ ಪ್ರಾಮಾಣಿಕ ಕೃತಿಯ ಪಕ್ಕದಲ್ಲೂ, ಯಾವತ್ತೂ ನಿಲ್ಲಬಹುದಾದ ಕೃತಿ 'ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ'.

## ೧೬

## ಸಂಸ/ಬಿರುದಂತೆಂಬರ ಗಂಡ

೧೮೯೮ರ ಜನೆವರಿಯಲ್ಲಿ, ಯಳಂದೂರು ತಾಲ್ಲೂಕಿನ ಅಗರದಲ್ಲಿ ಹುಟ್ಟಿದ ಎ. ಎನ್. ಸಾಮಿವೆಂಕಟಾದ್ರಿ ಅಯ್ಯರ್, ೧೯೧೪ರವರೆಗೂ ವಿದ್ಯಾಭ್ಯಾಸ ಮಾಡಿ ಎಸ್. ಎಸ್. ಎಲ್. ಸಿ. ಯಲ್ಲಿ ಅನುತ್ತೀರ್ಣರಾದರು. ನಂತರ ಕೆಲ ಕಾಲ ಮೈಸೂರಿನ ಶಾರದಾ ವಿಲಾಸ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿದ್ದರು. ಇದೇ ಅವಧಿಯಲ್ಲಿ ಕ್ರಮೇಣವಾಗಿ ಬವಣೆಗೆಯೂ ಆರಂಭವಾಯಿತು. ನಂತರ ಕೆಲಕಾಲ ಧಾರವಾಡದಲ್ಲಿಯೂ ವಾಸವಾಗಿದ್ದ ಇವರು ೧೯೩೩ ರಿಂದ ೫೯ರ ಮಧ್ಯೆ ಅನೇಕ ಮಹತ್ವದ ಕೃತಿಗಳನ್ನು ರಚಿಸಿದರು. ಈ ಮಧ್ಯೆ, ಆತ್ಮಘಾತ ಪ್ರವೃತ್ತಿ (ಸೆಲ್ಫ್ ಪರ್ಸಿಕ್ಯೂಶನ್ ಕಾಂಪ್ಲೆಕ್ಸ್) ಎಂಬ ಮನೋರೋಗದಿಂದ ತೀವ್ರವಾಗಿ ಬಳಲುತ್ತ ಮಾನಸಿಕವಾಗಿ ಛಿದ್ರ ವಿಚ್ಛಿದ್ರರಾಗಿ ಎರಡು ಸಲ ವಿಷಪ್ರಾಶನ ಮಾಡಿ, ೧೯೫೯ರಲ್ಲಿ ತೀರಿಯೂ ಹೋದರು

ಇವರು ರಚಿಸಿದ ಕೃತಿಗಳ ಸಂಖ್ಯೆ ಒಟ್ಟು ಸುಮಾರು ೨೪–೨೫ ಆದರೂ ಇದ್ದಿರಬಹುದೆಂದೂ ಆದರೆ ತಮ್ಮ ಹುಚ್ಚಿನ ತೀವ್ರ ಗಳಿಗೆಗಳಲ್ಲಿ ಬಹಳಷ್ಟು ಕೃತಿಗಳನ್ನು ಸುಟ್ಟು ಹಾಕಿದ್ದರಿಂದ ಕೆಲವೇ ಕೆಲವು ಮಾತ್ರವೇ ಉಳಿದುಕೊಂಡವೆಂದೂ ಹೇಳಲಾಗುತ್ತದೆ. ಹೀಗೆ ಉಳಿದುಕೊಂಡ ಕೆಲವೇ ಅಪರೂಪದ ಕೃತಿಗಳಲ್ಲಿ ಒಂದು 'ಬಿರುದಂತೆಂಬರ ಗಂಡ.'

ಪ್ರಸ್ತುತ ನಾಟಕ ಮೊದಲ್ಗೊಂಡು, ಸಾಮಿ ವೆಂಕಟಾದ್ರಿ ಅಯ್ಯರ್ ಅವರ ಎಲ್ಲ ನಾಟಕಗಳೂ 'ಸಂಸ' ಎಂಬ ಕಾವ್ಯನಾಮದಲ್ಲಿ ಪ್ರಕಟವಾಗಿವೆ.

ವಿಚಿತ್ರವೆನ್ನಬಹುದಾದ ಯಾವುದೋ ಕಾರಣಗಳಿಂದಾಗಿ, ಕೆಲವರ ಹೆಸರುಗಳು, ಇನ್ನಷ್ಟು ವಿಚಿತ್ರ ರೀತಿಯಿಂದ ಬದಲಾವಣೆ ಹೊಂದಿ ಹಾಗೇ ಚಲಾವಣೆಯಲ್ಲಿ ಉಳಿದು ಬಿಟ್ಟ ಉದಾಹರಣೆಗಳಿವೆ. 'ಸಂಸ' ಕೂಡ ಅಂಥದರಲ್ಲಿ ಒಂದು. ತಮ್ಮ ಮೊದಲ ಪ್ರಕಟಿತ ನಾಟಕ 'ವಿಗಡ ವಿಕ್ರಮರಾಯ' ವನ್ನು ಪ್ರಕಟನೆಗಾಗಿ, ಪ್ರಬುದ್ಧ ಕರ್ನಾಟಕಕ್ಕೆ ಕೊಡುವಾಗ ಅಯ್ಯರ್ ಅವರು ತಮ್ಮ ಕಾವ್ಯನಾಮವನ್ನು 'ಕಂಸ' ಎಂದಿಟ್ಟುಕೊಂಡು ಕೊಟ್ಟಿದ್ದರಂತೆ. ಆದರೆ ಮುದ್ರಣ ದೋಷದಿಂದಾಗಿ 'ಕಂಸ' ಇದ್ದದ್ದು 'ಸಂಸ' ಎಂದಾಗಿಬಿಟ್ಟಿತ್ತು.

(ಆನುಷಂಗಿಕವಾಗಿ, ಇಲ್ಲಿ, 'ರುದ್ರಭಟ'ನ ಪ್ರಕರಣ ನೆನೆದುಕೊಳ್ಳಬಹುದು. ತನ್ನ ಬದುಕಿನ ಒಂದು ಅವಧಿಯಲ್ಲಿ, ಯಾವುದೋ ಕಾರಣಕ್ಕಾಗಿ, ತನ್ನ ಹೆಸರಿನ ಮಧ್ಯದ 'ಭ' ಅಕ್ಷರವನ್ನು ಒತ್ತೆ ಇಟ್ಟದ್ದರಿಂದ. ಆತ, ತನ್ನ ನಂತರದ ಬರಹಗಳನ್ನು 'ರುದ್ರಟ' ಎಂಬ ಅಂಕಿತದಲ್ಲಿಯೇ ಬರೆದ.)

ಸಂಸರು ಬರೆದ ಎಲ್ಲ ನಾಟಕಗಳ ಹಾಗೆಯೇ 'ಬಿರುದಂತೆಂಬರ ಗಂಡ' ಕೂಡ ಐತಿಹಾಸಿಕ

ನಾಟಕವಾಗಿದೆ. ಸಂಸರಿಗಿಂತ ಮುಂಚೆ, ಆಧುನಿಕ ಕನ್ನಡ ಸಂದರ್ಭದಲ್ಲಿ ಸ್ವತಂತ್ರ ಐತಿಹಾಸಿಕ ನಾಟಕಗಳನ್ನು ಬರೆದು ಪ್ರಕಟಿಸಿದವರಿದ್ದರು. ಈ ದೃಷ್ಟಿಯಿಂದ ಪ್ರಕಟವಾದ ಮೊದಲ ನಾಟಕ, ಹೊಸಕೆರೆ ಚಿದಂಬರಯ್ಯನವರ ಗದ್ಯ ನಾಟಕ 'ಶ್ರೀಕೃಷ್ಣ ಮಹೇಶ್ವರಿ' (೧೯೧೦). ನಂತರದ ಮುಖ್ಯ, ಉಲ್ಲೇಖನೀಯ ಕೃತಿ, ಡಿ. ವಿ ಜಿ. ಅವರು ಬರೆದ 'ವಿಜಯ ವಿದ್ಯಾರಣ್ಯ' ನಾಟಕ (೧೯೨೬). ಈ ಎರಡು ಉಲ್ಲೇಖನೀಯ ಪ್ರಕಟನೆಗಳ ನಂತರವೇ ತಮ್ಮ ಬರಹಗಳನ್ನು ಆರಂಭಿಸಿದ್ದರೂ, ಆಧುನಿಕ ಐತಿಹಾಸಿಕ ಕನ್ನಡ ನಾಟಕಗಳ ಸಂದರ್ಭದಲ್ಲಿ ಒಂದು ಹೊಸ ಸಂಪ್ರದಾಯವನ್ನೆ ತೆರೆದ ಕೀರ್ತಿ ಸಂಸರಿಗಿದೆ.

ಹಾಗೆ ನೋಡಿದರೆ ಸಂಸರು, ನಾಟಕವನ್ನು ಮಂಡಿಸುವ ರೀತಿ, ಪರಿಕರಗಳನ್ನು ಬಳಸುವ ರೀತಿ ತೀರ ಬೇರೆಯಾದುದು, ಸುಲಭಸಾಧ್ಯವಾಗಿ ಯಾರೂ ಅನುಕರಿಸಲಾರದಂತಹದು. ಎಲ್ಲಕ್ಕೂ ಮುಖ್ಯವಾಗಿ ಗಾಢವಾದ ನಾಟಕ ಪ್ರಜ್ಞೆ, ಭಾಷಾ ಪ್ರೌಢಿಮೆ, ಇತಿಹಾಸದ ಆಳ ಅಭ್ಯಾಸ ಮತ್ತು ನಿಷ್ಠೆ ಮಾತ್ರದಿಂದಲೇ ಬರುವಂತಹದು. ನಾಟಕದ ಒಂದು ಹೊರ ನೋಟದಲ್ಲಿಯೇ ನೋಡಿದರೆ, ಸೂತ್ರಧಾರನ ಪ್ರವೇಶದ ಔಚಿತ್ಯ ಮತ್ತು ಮಿತಿ, ವೃತ್ತಗಳಲ್ಲಿರುವ ನಾಂದಿ ಮತ್ತು ಭರತವಾಕ್ಯಗಳ ಪ್ರಯೋಗ, ಉಚಿತ ರೀತಿಯಲ್ಲಿ ಬರುವ ಕಂದ ಪದ್ಯಗಳು, ಮತ್ತು ಎಲ್ಲಕ್ಕೂ ಮಿಗಿಲಾಗಿ ಸಾದ್ಯಾಂತ ಹಳೆಗನ್ನಡ ಭಾಷೆಯ ಉಪಯೋಗ ಇವೆಲ್ಲವು-ಗಳಿಂದಾಗಿ, ಬರಿಯ ಐತಿಹಾಸಿಕ ವಸ್ತುವಿನಿಂದ ಮಾತ್ರವಲ್ಲ, ನಾಟಕದ ಒಟ್ಟು ಕಟ್ಟುವಿಕೆಯ ದೃಷ್ಟಿಯಿಂದ ಕೂಡ, ಸಂಸರು ಎಲ್ಲ ನಾಟಕಕಾರರಿಗಿಂತ ಭಿನ್ನವಾಗಿಯೇ ನಿಲ್ಲುತ್ತಾರೆ.

ಹಳೆಗನ್ನಡ ಭಾಷೆಯ ಇವರ ಪ್ರಯೋಗ 'ಮಿತ್ರವಿಂದಾ ಗೋವಿಂದ'ದ ಪ್ರಯೋಗಕ್ಕೆ ಸಮೀಪವೆನಿಸಿದರೂ, ಸ್ವಯಂ ಕನ್ನಡ ಪಂಡಿತರೂ ಆಗಿದ್ದ ಸಂಸರು ತಮ್ಮ ಅಪ್ರತಿಮ ಪ್ರತಿಭೆಯಿಂದ, ಹಳೆಗನ್ನಡ ಭಾಷೆಯನ್ನು ಕೂಡ ತುಂಬ ಸಮರ್ಥವಾಗಿ ಮತ್ತು ಅಷ್ಟೇ ಮಟ್ಟಿಗೆ ಉಚಿತವಾಗಿ ಬಳಸಿಕೊಂಡಿದ್ದಾರೆ. ಒಂದು ದೃಷ್ಟಿಯಿಂದ, ಇವರು ಆಯ್ದುಕೊಂಡ ಐತಿಹಾಸಿಕ ಪರಿಸರಗಳ ಘನತೆಗೂ ಮತ್ತು ಹಳೆಗನ್ನಡದ ವಿಶಿಷ್ಟ ಪ್ರೌಢಿಮೆಗೂ ಎಲ್ಲಿಯೋ ಪರಸ್ಪರ ಹೊಂದಾಣಿಕೆಯಾಗುತ್ತಿರಬಹುದು ಎಂದೂ ಅನಿಸುತ್ತದೆ. ಹಾಗಿದ್ದೂ ಇತಿಹಾಸ ಮತ್ತು ಹಳೆಗನ್ನಡಗಳ ಹಿನ್ನಲೆಯಲ್ಲಿಯೂ ಇವರ ನಾಟಕಗಳು ಆಧುನಿಕರ ಗಮನ ಸೆಳೆಯಲು ಮುಖ್ಯ ಕಾರಣವೆಂದರೆ, ಈ ನಾಟಕಗಳ ಅದ್ಭುತ ಕ್ರಿಯಾತೀವ್ರತೆಗಳು ಮತ್ತು ನಾಟಕೀಯ ತಿರುವುಗಳು. ವಾಚನ ಮಾಧ್ಯಮಕ್ಕಿಂತ ದೃಶ್ಯ ಮಾಧ್ಯಮದಲ್ಲಿಯೇ ಅದ್ಭುತ ಪರಿಣಾಮ ಬೀರಬಲ್ಲ ಇವರ ನಾಟಕಗಳು, ದೃಶ್ಯ ಮಾಧ್ಯಮದ ಯಶಸ್ವಿ ನಾಟಕಗಳು ಹೇಗಿರಬೇಕು, ಎಂಬುದಕ್ಕೆ ಉದಾಹರಣೆಗಳಾಗಬಲ್ಲವು.*

ಒಂದು ದೃಷ್ಟಿಯಿಂದ ಈ ನಾಟಕ (ಬಿರುದಂತೆಂಬರ ಗಂಡ) ಮೂರು ಹಂತಗಳಲ್ಲಿ ಸಾಗುತ್ತದೆ. ಅಭ್ಯಾಸದ ಅನುಕೂಲಕ್ಕಾಗಿ ಈ ಮೂರು ಹಂತಗಳನ್ನು, ಭೂಮಿಕೆ, ಪೌರುಷ ಮತ್ತು ಉದಾತ್ತ ಎಂದು ಗುರುತಿಸಬಹುದೇನೋ.

ಸಾಂಪ್ರದಾಯಕವಾಗಿ, ಪೂರ್ವ ರಂಗದಿಂದ ಕೂಡಿದ ನಾಟಕ ಇದು. ಆದ್ದರಿಂದ ಮೊದಲು ಸೂತ್ರಧಾರ ಪ್ರವೇಶಿಸಿ, 'ವನ್ದಿಸಿ' ಶಾರ್ದೂಲ ವಿಕ್ರೀಡಿತದಲ್ಲಿಯ ಒಂದು ವೃತ್ತವನ್ನೂ ಒಂದು ಕಂದ ಪದ್ಯವನ್ನೂ ಹಾಡಿ ನೇಪಥ್ಯಕ್ಕೆ ತೆರಳುವನು. ತದನಂತರ ನಾಟಕದಾರಂಭ.

ಮೊದಲ ಹಂತದಲ್ಲಿ ನಾವು ನೋಡುವುದು, ನಂಜನಗೂಡಿನ ನಂಜುಂಡೇಶ್ವರ ದೇವಾಲಯದ ಮಹಾದ್ವಾರದ ಈಶಾನ್ಯ ಮೂಲೆಯ ದೃಶ್ಯ. ಜಾತ್ರೆಯ ಸಡಗರ, ನಾನಾ ವೇಷಭೂಷಣಗಳ ಜನ, ಈ ಗಲಿಬಿಲಿಗಳ ಮಧ್ಯೆ ನಂಜಶೆಟ್ಟಿಯ

---

* ಉದಾಹರಣೆಗೆ ಪ್ರಸ್ತುತ 'ಬಿರುದಂತೆಂಬರ ಗಂಡ' ನಾಟಕದ ರಂಗಪ್ರಯೋಗವನ್ನೇ ನೆನೆದುಕೊಳ್ಳಬಹುದು. ೧೯೭೦ರಲ್ಲಿ, ಈ ನಾಟಕವನ್ನು ನಿರ್ದೇಶಿಸಿ ರಂಗಕ್ಕೆ ತಂದ ಬಿ. ವಿ. ಕಾರಂತರ ರಂಗಪ್ರಯೋಗ, ಅದ್ಭುತ ಪರಿಣಾಮದ ದೃಷ್ಟಿಯಿಂದ, ಬಹಳ ದಿನ ದಾಖಲೆಗಳಲ್ಲಿ ಉಳಿಯುವಂತಹದು.

(ಮಹಿಷೂರಿನ ಬೇಹಾರಿಗ) ಪ್ರವೇಶ. ಇಲ್ಲಿಯೇ ಕ್ರಮೇಣವಾಗಿ, ನಂಜಶೆಟ್ಟಿ- ಆತನ ಸಹಚರರು ಮತ್ತು ಪಾಳೆಯಗಾರರ ಮಧ್ಯೆ, ಪರಾಕುಗಳ ಚಕಮಕಿ (ಈ ದೃಶ್ಯ ತುಂಬ ನಾಟಕೀಯವಾಗಿ ಮೂಡಿ ಬಂದಿದೆ), ಕ್ರಮೇಣವಾಗಿ ಖಡ್ಗಗಳ ಖಾಡಾಖಾಡಿಯೂ ಆಗುತ್ತದೆ. ಈ ಮಧ್ಯೆ ಮಹಾರಾಜನ ಪ್ರವೇಶದೊಂದಿಗೆ ಮೊದಲ ಹಂತದ ಮುಕ್ತಾಯ.

ನಾಟಕದ ಎರಡನೆಯ ಹಂತ ತುಂಬ ಮಹತ್ವದ್ದು. ನಾಟಕದ ವಸ್ತು ಮತ್ತು ನಾಟಕೀಯ ಬೆಳವಣಿಗೆ ಈ ಎರಡೂ ದೃಷ್ಟಿಗಳಿಂದ, ಇಲ್ಲಿ ಅದ್ಭುತ ಕ್ರಿಯಾ ತಿರುವುಗಳನ್ನೂ, ಚಟುವಟಿಕೆ ಅನಿರೀಕ್ಷಿತಗಳ, ಆದರೆ, ನಾಟಕದ ದೃಷ್ಟಿಯಿಂದ ಸುಸಂಬದ್ಧವಾದ ಬೆಳವಣಿಗೆಯನ್ನು ನೋಡಬಹುದು.

ಇಲ್ಲಿ ಈಗಾಗಲೇ ನಿಂತಿರುವ, ಮಹಾರಾಜನ ಪರಿವಾರದ ಮಧ್ಯೆ ಪ್ರವೇಶಿಸುವ ಉಮ್ಮತ್ತೂರ ಮಹಾರಾಣಿಗೆ ಸಿಟ್ಟು ಬರುವ ಸನ್ನಿವೇಶ. ತನ್ನ ಮೊದಲು ನುಡಿಗಳಿಗೆ ಎದುರಾಗಿ ಅತ್ಯಂತ ಶಾಂತವಾಗಿ ಉತ್ತರಿಸುವ ಮಹಾರಾಜನ ಸಹಿಷ್ಣುತೆಯಿಂದಾಗಿ ಇನ್ನಷ್ಟು ಕೆರಳಿದ ಆಕೆ ಆತನ ಉಷ್ಣೀಷವನ್ನೇ ಹಾರಿಸಿ ಕೆಡವಿ ಬಿಡುತ್ತಾಳೆ. ಇಲ್ಲಿಯೂ ತಾಳ್ಮೆಗೈಯುವ ಮಹಾರಾಜ, ಮುಂದೆ ತನ್ನನ್ನು ಖಾಡಾಖಾಡಿಗೆ ಆಹ್ವಾನಿಸಿದ ವೀರಮಲ್ಲನೊಡನೆ ಕಾದಿ ಗೆಲ್ಲುತ್ತಾನೆ. ಉಮ್ಮತ್ತೂರಿನ ಮಹಾರಾಣಿ ಮೊದಲಿಸಿದ 'ಮೊನೆಗಾರ' ಬಿರುದನ್ನು ಸಾರ್ಥಕಪಡಿಸಿಕೊಳ್ಳುತ್ತಾನೆ.

ಆದರೆ. ಈ ಎರಡೂ, ಹಂತಗಳಿಗೆ ಕಿರೀಟಪ್ರಾಯವಾದದ್ದು ಮೂರನೆಯ ಹಂತ. ಇಲ್ಲಿಯೇ ಸಂಸರು ಅಂದುಕೊಂಡಂತಹ ನಾಯಕ ಧೀರನಿಂದ, ಉದಾತ್ತನೂ ಆಗುವುದು. ತನ್ನನ್ನು ಅವಮಾನಿಸಿದ ರಾಣಿಯದೇ, ತನ್ನ ಮಾತು ಮಾತ್ರದಿಂದಲೇ ಅವಮಾನ ಮಾಡಿದನೆಂದು, ತನ್ನ ಊಳಿಗದವನೇ ಆದ ನಂಜಶೆಟ್ಟಿಯನ್ನು ಮಹಾರಾಜ ದಂಡಿಸುತ್ತಾನೆ. ಇಲ್ಲಿಗೆ 'ಅಂತೆಂಬರ ಗಂಡ' ಬಿರುದು ಸಾರ್ಥಕವಾಗುತ್ತದೆ.

ಈ ಇಡಿಯ ನಾಟಕದಲ್ಲಿ, ಸಂಸರ ರಾಜನಿಷ್ಠೆ ಅಗತ್ಯಕ್ಕಿಂತ ಹೆಚ್ಚಾಗಿದೆ ಎಂದು ತೋರಿದರೂ, ನಾಟಕ ಬರಹದ ದೃಷ್ಟಿಮಾತ್ರದಿಂದ ನೋಡುವುದಾದಲ್ಲಿ, ನಾಟಕದುದ್ದಕ್ಕೂ ಅವರು ತೋರಿಸುವ ಭಾಷೆಯ ಲವಲವಿಕೆ, ಸಂಭಾಷಣೆಗಳ ಮೊನೆಗಾರಿಕೆ (ಇಲ್ಲಿ, ಮೊದಲ ಹಂತದಲ್ಲಿಯ, ನಂಜಶೆಟ್ಟಿಯ ಒಂದೆರಡು ಮಾತುಗಳನ್ನು ಉತ್ತಮ ಉದಾಹರಣೆಗಾಗಿ ನೋಡಬಹುದು.), ನಾಟಕದಲ್ಲಿ ಹೇಳಬೇಕೆಂದಿರುವ ಪ್ರತಿಯೊಂದು ಸಂಗತಿಯನ್ನೂ ನಾಟಕೀಯ ತಂತ್ರದಿಂದಲೇ ಹೇಳಿದ ಹೆಗ್ಗಳಿಕೆ, ಎಲ್ಲಕ್ಕೂ ಮುಖ್ಯವಾಗಿ, ನಾಟಕವನ್ನು ಹಂತದಿಂದ ಹಂತಕ್ಕೆ ಕ್ರಿಯಾತ್ಮಕವಾಗಿ ಬೆಳೆಸಿಕೊಂಡು ಹೋಗುವ ರೀತಿ ಅನನ್ಯಾದೃಶವಾಗಿವೆ.

ಬಹುಶಃ ಈ ಕೆಲವಾದರೂ ಕಾರಣಗಳಿಂದಾಗಿ ಈ ನಾಟಕ ಪ್ರಾಯಶಃ ಇಂದಿಗೂ ನಮಗೆ ಪ್ರಸ್ತುತವೆನಿಸುತ್ತದೆ.

## ೧೭

## ಜಡಭರತ/ಸತ್ತವರ ನೆರಳು

ಮನುಷ್ಯ ಕಟ್ಟಿದ ಮತ್ತು ಮನುಷ್ಯನನ್ನು ಕಟ್ಟಿದ, ಅಷ್ಟೇ ಅಲ್ಲ, ಮನುಷ್ಯ ಮನುಷ್ಯನನ್ನು ಕಟ್ಟಿದ, ಅತ್ಯಂತ ವಿಸ್ಮಯಕರ ಮತ್ತು ಅಷ್ಟೇ ಪ್ರಬಲ ಪ್ರಪಂಚವೊಂದರ ದ್ವಂದ್ವ, ಸಂಘರ್ಷ, ಅಸಂಗತತೆ, ವಿಷಮತೆ, ತರ್ಕ ಮಂಥನ, ನಿಷ್ಠೆ, ನಂಬಿಕೆ, ಈ ಎಲ್ಲವುಗಳ ಸುತ್ತ ಕಟ್ಟಿದ ನಾಟಕ, 'ಜಡಭರತ'ರ 'ಸತ್ತವರ ನೆರಳು'.

ಮಠ ಇಲ್ಲಿಯ ಕೇಂದ್ರ ಬಿಂದು. ಲೌಕಿಕ ಮತ್ತು ಪಾರಲೌಕಿಕ ಇವೆರಡರನ್ನೂ ಒಟ್ಟೊಟ್ಟಿಗೇ ಮೇಳವಿಸಿಕೊಂಡ ಕೇಂದ್ರ. ಈ ಮೇಳವನ್ನು ಮೂರು ಕೋನಗಳಲ್ಲಿ ನಿರ್ವಹಿಸಿ ಸರಳಗೊಳಿಸಿ ಅದಕ್ಕೊಂದು ಅರ್ಥ ಮತ್ತು ಸಾರ್ಥಕವನ್ನು ತಂದುಕೊಳ್ಳಬೇಕಾಗಿದೆ. ೧) ವೈಯಕ್ತಿಕತೆ ಮತ್ತು ಧರ್ಮ ೨) ಧರ್ಮ, ಮತ್ತು ಸಾಮೂಹಿಕತೆ, ೩) ಸಾಮೂಹಿಕತೆ ಮತ್ತು ವೈಯಕ್ತಿಕತೆ ಇವೇ ಆ ಮೂರು ಕೋನಗಳು. ಇವುಗಳಿಗೆ ತರ್ಕ ಮತ್ತು ಜ್ಞಾನಗಳ ವಿಶಿಷ್ಟ ಮುಖಗಳೂ ಇವೆ. ಆದರೆ ಸ್ವಯಂ ಸ್ಪಷ್ಟವಾಗದ ಪರಸ್ಪರ ಪೂರಕವಾಗದ, ಹೊಂದಾಣಿಕೆಯಾಗದ ಈ ಕೋನ

ಮತ್ತು ಮುಖಾದಿ ಪರಿಕರಗಳ ಅಪೂರ್ಣತೆಗಳೇ ಇಡಿಯ ಕೇಂದ್ರದ ಅರ್ಥವನ್ನು, ಸಾರ್ಥಕ್ಯಕ್ಕೆ ವಿರುದ್ಧವಾಗಿ ಅನರ್ಥದೆಡೆಗೆ ಒಯ್ಯುತ್ತವೆ.

'ಜೀವದ ಸುತ್ತ ಕಟ್ಟಿದ ದೇಹದ ಸುತ್ತ ವೃಂದಾವನ, ವೃಂದಾವನದ ಸುತ್ತ ಮಠ, ಮಠದ ಸುತ್ತ ಸಮಾಜ,' ಈ ಶಿಲ್ಪದ ಅರ್ಥವನ್ನು ಅರಿಯದ ಧಾರ್ಮಿಕರು, ಜವಾಬ್ದಾರಿಯುತ ಬದುಕಿನಲ್ಲಿದ್ದರೂ ಬದುಕಿಗೆ ಕಲ್ಲಾದ ಬದುಕು ಬಿಟ್ಟು ಊರಿಗೆ ಒಕ್ಕಲಾಗದಿದ್ದರೂ ಸುಡುಗಾಡಿಗೆ ಹೆಣವಾಗದ ವಿದ್ವಾಂಸ ವ್ಯಕ್ತಿಗಳು, ಮಠ ಕಟ್ಟಿದರೆ ವೃಂದಾವನ ಕಟ್ಟುವ, ವೃಂದಾವನ ದೊಂದಿಗೇ ಕಥೆಯನ್ನೂ ಕಟ್ಟುವ ಮುಗ್ಧ ಸಮೂಹ, 'ನಮ್ಮದು ನಮಗೆ ಖರೆ ಇನ್ನೊಬ್ಬ-ರದು ಸುಳ್ಳು' ಎನ್ನುವ ಇವರ ನಿಲುಮೆ, ಕೇವಲ ಕಲ್ಲು ಮಣ್ಣು ಇಟ್ಟಿಗೆಯಾಗಿರುವ ಅಥವಾ ಬಳಸದೆ ಗುನಿಗಡಿದು ಹೋಗಿರುವ ಜ್ಞಾನ, ಮಾತಿಗೆ ಮಾತು ತಿಕ್ಕಿದಾಗ ಸತ್ಯದ ಬದಲು ರಕ್ತ ಹೊರತರುವ ತರ್ಕ ಇವು ಮಾತ್ರವೇ ಪರಿಕರಗಳಾಗಿರುವಲ್ಲಿ, ಹೇಗೆ ತಾನೇ ಒಂದು ಕೇಂದ್ರ ಅರ್ಥವನ್ನು ಪಡೆದುಕೊಳ್ಳು ವುದು ಸಾಧ್ಯ?

ಈ ಪರಿಕರಗಳಿಂದ ಸಾಧ್ಯವಾಗುವುದು ಮಠ ಕಟ್ಟುವುದು ಮಾತ್ರ, ವೃಂದಾವನ ಕಟ್ಟುವುದು ಮಾತ್ರ. ಈ ನಾಟಕದಲ್ಲಿಯ ಕಾವ್ಯಮಯ ಭಾಷೆಯಲ್ಲಿಯೇ ಹೇಳಬಹುದಾದರೆ, ಹರಿಯೊ ಮನಸ್ಸು, ಆಡೋ ಬಾಯಿ, ಕೂಡೊ ಕೈ ದಿಕ್ಕು, ಕಲ್ಲು, ಉಸಿರು, ಉರಿ, ಇತಿಹಾಸ, ಸಂಪ್ರದಾಯ ಈ ಎಲ್ಲವನ್ನೂ ಕಟ್ಟುವುದಕ್ಕೆ ಮಾತ್ರ ಸಾಧ್ಯ. ಆದರೆ, ಪರಿಪೂರ್ಣ ಮನುಷ್ಯನನ್ನು, ಪರಿ ಪೂರ್ಣ ಸಮಾಜವನ್ನು, ಒಟ್ಟಾರೆ ಮಾನವತೆ ಯನ್ನು ಕಟ್ಟುವುದು ಮಾತ್ರ ಸಾಧ್ಯವಾಗುವು ದಿಲ್ಲ. ಕೊನೆಗೂ ಇಲ್ಲಿ ವೃಂದಾವನಸ್ಥವಾಗುವುದು ಮನುಷ್ಯತ್ವ ಮಾತ್ರ. ಇದೇ ಈ ಸಮಾಜದ, ಈ ಕೇಂದ್ರಬಿಂದುವಿನ ದೊಡ್ಡ ದುರಂತ.

ಒಂದು ದೃಷ್ಟಿಯಿಂದ ಈ ನಾಟಕ, ಮನು ಷ್ಯನ ಪ್ರಾಮಾಣಿಕತೆ ಮತ್ತು ನೇರ ದಾರಿಗಳ ಮಿತಿ ಮತ್ತು ದುರಂತವನ್ನು ಹೇಳುತ್ತಿರ ಬಹುದೇನೋ ಎಂದೂ ಅನಿಸುತ್ತದೆ. ಈ ದಿಕ್ಕಿನಲ್ಲಿ ಆಲೋಚಿಸಿದಾಗ, ಪ್ರಾಮಾಣಿಕ ಮಾರ್ಗದಲ್ಲಿ ಸಾಗಿದ, ಮೂರು ಜೀವಗಳ, ಒಂದಿಲ್ಲೊಂದು ಬಗೆಯ ದುರಂತವನ್ನು ಇಲ್ಲಿ ಕಾಣುತ್ತೇವೆ.

ಒಂದೇ ಪೀಠದಲ್ಲಿ ಕುಳಿತುಕೊಂಡಿದ್ದರೂ, ವಿದ್ಯಾನಿಧಿತೀರ್ಥರು ಎದುರಿಸುವ ದುರಂತ ಒಂದು ಬಗೆಯದಾದರೆ, ಗುಣನಿಧಿತೀರ್ಥರು/ ನಾರಾಯಣ ಎದುರಿಸುವ ದುರಂತ ಇನ್ನೊಂದು ಬಗೆಯದು. ಹಾಗೆಯೇ, ಮಠ ಪೀಠಗಳ ಪ್ರಪಂಚದ ಸಕಲ ಸತ್ವಕ್ಕೂ ಸಾತ್ವಿಕತೆಗೂ ಸ್ಪಂದಿಸಿದ ಹಿರೇ ಆಚಾರ್ಯರು ಎದುರಿಸುವ ದುರಂತ ಮತ್ತೊಂದು ಬಗೆಯದೇ.

ಯೋಗ್ಯ ಸ್ಥಳಕ್ಕೆ ಯೋಗ್ಯ ವ್ಯಕ್ತಿಯೇ ಬರ ಬೇಕೆಂಬ ಹಿರೇ ಸ್ವಾಮಿಗಳ ಆಸೆ, ಪ್ರಯತ್ನ ಪರದಾಟ. ಯಾವುದೂ ಕೈಗೂಡುವದಿಲ್ಲ. ಬದಲಾಗಿ, ಅವರು ಮಾನಸಿಕವಾಗಿ, ದೈಹಿಕ ವಾಗಿ, ಎಲ್ಲ ರೀತಿಯಿಂದಲೂ ಹಿಂಸೆಯನ್ನು ಅನುಭವಿಸುತ್ತಲೇ ಮುಕ್ತರಾಗಬೇಕಾಗುತ್ತದೆ. ಅವರ ಇಚ್ಛೆಗನುಗುಣವಾದ, ಪೀಠ ಯೋಗ್ಯ ರಾದ ವ್ಯಕ್ತಿ ಇನ್ನೆಲ್ಲಿಯೋ ಇದ್ದು ಇನ್ನಷ್ಟು ದೂರವೇ ಹೋಗಿಬಿಡಬೇಕಾಗುತ್ತದೆ.

ಇದಕ್ಕೆ ಇನ್ನೊಂದು ಬಗೆಯ ಮುಖವೇ ಎನ್ನ ಬಹುದಾದ ದುರಂತ ನಾರಾಯಣ/ಗುಣನಿಧಿ ತೀರ್ಥರದು. ಇದ್ದರೆ ಪೀಠ, ಸತ್ತರೆ ವೃಂದಾವನ. ಈ ಎರಡನ್ನೂ ಬಿಟ್ಟು ಮೂರನೆಯ ದಾರಿಯೇ ಇಲ್ಲದ ಮಠದ ಉಸಿರುಗಟ್ಟಿಸುವ ವಾತಾವರಣ ದಿಂದ ಆತ ಕೊಸರಿಕೊಂಡು ಓಡುತ್ತಾನೆ. ಆದರೆ ಓಡಿ ಹೋದವರು ಗುಣನಿಧಿತೀರ್ಥರೂ ಅಲ್ಲ, ನಾರಾಯಣನೂ ಅಲ್ಲ. ಏಕೆಂದರೆ, ಅವರು ಇಲ್ಲಿ, ಈಗಾಗಲೇ ವೃಂದಾವನಸ್ಥರಾಗಿದ್ದಾರೆ. ಅವರು ತಿರುಗಿ ಬಂದಾಗಲೂ ನೋಡುವುದು ತಮ್ಮ ವೃಂದಾವನವನ್ನೇ. ಅದಕ್ಕೂ ಮುಖ್ಯವಾಗಿ, ಅತಂತ್ರವಾಗಿ, ಬಹುಶಃ ಪ್ರೇತವಾಗಿ ಹೋದ ತಮ್ಮನ್ನೇ. ಇಲ್ಲಿಯ ಬಹು ದೊಡ್ಡ ದುರಂತವಿದು.

ಇವೆರಡಕ್ಕೂ ಭಿನ್ನವಾದರೂ, ಇದಕ್ಕೇನೂ ಕಡಿಮೆ ಇಲ್ಲದ ದುರಂತ ಹಿರೇ ಆಚಾರ್ಯರದು. ಬದುಕಿನುದ್ದಕ್ಕೂ ಶ್ರದ್ಧೆ, ನಂಬಿಕೆ, ಸಾತ್ವಿಕತೆ ಮತ್ತು ಮುಖ್ಯವಾಗಿ ಯೋಗ್ಯತೆಗಳಿಂದ ಬದುಕಿ,

ಮಠದ ಪೀಠವನ್ನು ಅಲಂಕರಿಸುವ ಯೋಗ್ಯತೆ-ಯುಳ್ಳ ಈ ವ್ಯಕ್ತಿಗೆ ಕೊನೆಗೂ ದೊರೆಯುವುದು ಬಹಿಷ್ಕಾರ. ಹಿರೇ ಆಚಾರ್ಯರಂಥವರ ಬದುಕಿಗೆ ಸಾವಿಗಿಂತಲೂ ತೀವ್ರವಾದ ನೋವು, ದುರಂತ ಇದು.

ಇವರೆಲ್ಲರಂಥವರಿಗೆ ವಿರುದ್ಧವಾಗಿ, ವ್ಯವಹಾರ ಪ್ರಪಂಚದ ಎಲ್ಲ ಏರಿಳಿವುಗಳನ್ನೂ ಎಳೆಗಳನ್ನೂ ಬಲ್ಲ, ಮತ್ತು ಸಂದರ್ಭಾನುಸಾರವಾಗಿ ಅವುಗಳ ಪ್ರಯೋಜನವನ್ನು ಪರಿಣಾಮವನ್ನೂ ಪಡೆಯ-ಬಲ್ಲ ವ್ಯಕ್ತಿಗಳು, ವ್ಯಾವಹಾರಿಕ ಬದುಕಿನಲ್ಲಿ ಯಾವತ್ತೂ ಯಶಸ್ವಿಯೇ ಆಗುತ್ತಾರೆ. ಇದು, ಕೇವಲ ಒಂದು ಮಠ ಮಾತ್ರವಲ್ಲ, ಇಡಿಯ ಪ್ರಪಂಚಕ್ಕೆ ಅನ್ವಯಿಸುವ ಮಾತು. ಪ್ರಸ್ತುತ ಮಠದ ಸಂದರ್ಭದಲ್ಲಿಯೇ ಹೇಳಬಹುದಾದರೆ ದಿವಾನ್ ಕೃಷ್ಣಾಚಾರ್ಯರು ಅಂಥವರು.

ನಿಸ್ವಾರ್ಥಕ್ಕೆ ವಿಸ್ಮೃತಿಯಾದಾಗ ಸ್ವಾರ್ಥದಲ್ಲಿ ಅದ್ಭುತ ಜಾಗೃತಿ ಉಂಟಾಗುತ್ತದೆ. ಪ್ರಾಮಾಣಿಕತೆ ಅಶಕ್ತವಾದಾಗ, ಅಪ್ರಾಮಾಣಿಕತೆ ಅಸಾಮಾನ್ಯ ಶಕ್ತಿಯಿಂದ ಓಡಾಡುತ್ತದೆ. ದಿವಾನ್ ಕೃಷ್ಣಾಚಾರ್ಯರ ಈ ಬಗೆಯ ಚಟುವಟಿಕೆಗಳು ವಿಶೇಷವಾಗಿ, ಹಿರೇ ಸ್ವಾಮಿಗಳ ಅವಸಾನ ಕಾಲದಲ್ಲಿಯೂ, ನಾರಾಯಣನನ್ನು ತಂದು ಪೀಠದಲ್ಲಿ ಕೂಡಿಸುವ ಕಾಲದಲ್ಲಿಯೂ ಅಪ್ರತಿಮವಾಗಿ ಎದ್ದು ಕಾಣುವಂತಹವು. ಅಪ್ರಾಮಾಣಿಕತೆ ಮತ್ತು ಸ್ವಾರ್ಥ ಕೊಡಬಹುದಾದ ಎಲ್ಲ ಬಗೆಯ ಕೀಳುತನ ಕುಟಿಲತೆ, ಮತ್ತು ಸಮಯಸಾಧಕತೆ ಈ ಎಲ್ಲವನ್ನೂ ಈ ಸಂದರ್ಭಗಳಲ್ಲಿ ಕಾಣಬಹುದಾಗಿದೆ. ಅಷ್ಟೇ ಏಕೆ, ಇದು ಸಂದರ್ಭಾನುಸಾರ ಭಂಡತನವೂ ಆಗಬಲ್ಲದು ಎಂಬುದಕ್ಕೆ ಒಂದು ಅತ್ಯಂತ ಚಿಕ್ಕ ಉದಾಹರಣೆ: ಹಡಪದ ಅಡವಿಯೇ ಸ್ವತಃ ಆತಂಕ ವ್ಯಕ್ತಪಡಿಸಿದರೂ ತಮ್ಮ ಸ್ವಾರ್ಥಸಾಧನೆಗಾಗಿ, ಮುಂದೆ ಪೀಠವೇರಲಿರುವ ಸ್ವಾಮಿಯ ಪ್ರಥಮ ಕಾರ್ಯವಿಧಿಯಾಗಿ ಮುಂಡನವನ್ನೂ ಮಾಡಿಸುತ್ತಾರೆ; ಅಮಾವಾಸ್ಯೆ ಕರಿಯ ದಿನ.

ಅಷ್ಟೇ ಅಲ್ಲ, ಸಂದರ್ಭಾನುಸಾರವಾಗಿ, ತಮ್ಮ ಸ್ವಾರ್ಥಸಾಧನೆಗಾಗಿ ಉಳಿವಿನ ಅನುಕೂಲಕ್ಕಾಗಿ, ವ್ಯಾವಹಾರಿಕ ತರ್ಕದ ಮಂಡನೆಯ ಪ್ರಯೋಜನವನ್ನು ಕೂಡ ಹೇಗೆ ಪಡೆಯಬಲ್ಲರು ಎಂಬುದಕ್ಕೆ, ಕೊನೆಗೆ ಈ ಮಠವನ್ನು ಕೆಡವಲೆಂದೇ ಬಂದ ನಾರಾಯಣನನ್ನೂ ಒಪ್ಪಿಸಿ, ಆತನನ್ನು ಹೊರಗಟ್ಟಿದ ಪ್ರಸಂಗವೇ ಸಾಕ್ಷಿ. ಆದರೆ, ಹೀಗೆ ಎರಡನೆಯ ಸಲ ಮಠವನ್ನು ಬಿಟ್ಟು ನಾರಾಯಣ ಹೊರಗೆ ನಡೆಯುವುದು, ಎಷ್ಟು ಮಟ್ಟಿಗೆ ಕೃಷ್ಣಾಚಾರ್ಯರ ವ್ಯಾವಹಾರಿಕ ಗೆಲುವೋ, ಅದಕ್ಕೂ ಎಷ್ಟೋ ಪಟ್ಟು ಮಿಗಿಲಾಗಿ ನಾರಾಯಣನ ಸೋಲಾಗುತ್ತದೆ. ಸೋಲಿಗೂ ಮುಖ್ಯವಾಗಿ ದೊಡ್ಡ ದುರಂತವಾಗುತ್ತದೆ.

ಇಷ್ಟೆಲ್ಲವೂ ನಾಟಕದ ವಸ್ತುವಿನ ಬಗೆಗಿನ ಮಾತಾದರೂ, ನಾಟಕ ಶಿಲ್ಪ ಕುರಿತಂತೆಯೂ ಒಂದೆರಡು ಮಾತುಗಳನ್ನು ಹೇಳಬೇಕು. ವಸ್ತು ವಿವರಣೆ, ಪಾತ್ರವರ್ಗ, ಪರಿಸರ, ಭಾಷೆ, ಬಂಧ, ಎಲ್ಲ ದೃಷ್ಟಿಗಳಿಂದಲೂ ತುಂಬ ಹೆಚ್ಚಿನ ಹರಹನ್ನು ಹೊಂದಿದ ನಾಟಕವಿದು. ಉದಾಹರಣೆಗೆ, ಇಲ್ಲಿಯ ಭಾಷೆಯನ್ನೇ ಗಮನಿಸೋಣ. ಸಂಸ್ಕೃತ, ಕನ್ನಡ–ಶಿಷ್ಟ ಕನ್ನಡ, ಆಡು ಕನ್ನಡ, ಹಡಪದ ಅಡವಿಯ ಗ್ರಾಮ್ಯ ಕನ್ನಡ, ಬ್ರಾಹ್ಮಣ ಹೆಂಗಳೆಯರ ವಿಶಿಷ್ಟ ಕನ್ನಡ ಹೀಗೆ, ಭಾಷೆಯ ಅನೇಕ ಪದರುಗಳೇ ಇಲ್ಲಿರುವುದನ್ನು ಕಾಣುತ್ತೇವೆ. ಹಾಗೆಯೇ, ನಾಟಕದ ಇತರ ಪರಿಕರಗಳಲ್ಲಿಯು ವ್ಯಾಪ್ತಿ. ಆದರೆ, ಈ ಎಲ್ಲ ಪರಿಕರಗಳ ಎಲ್ಲ ವ್ಯಾಪ್ತಿಗಳನ್ನೂ ಅತ್ಯಂತ ಸಮರ್ಥವಾಗಿ, ನಾಟಕೀಯವಾಗಿ ಕಟ್ಟಿಕೊಂಡು ಹೋದ ಇಲ್ಲಿಯ ಲೇಖಕರ ನಾಟ್ಯ ಪ್ರತಿಭೆಯನ್ನು ಮೆಚ್ಚಬೇಕು. ವಾಚನದಲ್ಲಿಯಷ್ಟೆ ರಂಗದಲ್ಲಿಯೂ ತೃಪ್ತಿ ಕೊಡಬಲ್ಲ ಕೃತಿ ಇದು.*

'ಸತ್ತವರ ನೆರಳು', ನಮ್ಮ ಪ್ರತಿಭಾವಂತ ಬರಹಗಾರನೊಬ್ಬನ ಜೀವಂತಿಕೆಯ ಬೆಳಕಾಗಿದೆ.

✡

---

* ಬಿ. ವಿ. ಕಾರಂತರ ನಿರ್ದೇಶನದಲ್ಲಿ, ಅತ್ಯಂತ ಜನಪ್ರಿಯವಾಗಿ ಪ್ರಯೋಗಿತವಾಗಿರುವ ಈ ನಾಟಕ ನೂರಕ್ಕೂ ಹೆಚ್ಚು ರಂಗ ಪ್ರಯೋಗಗಳನ್ನು ಕಂಡು, ಇತ್ತೀಚಿನ ರಂಗಭೂಮಿಯ ಇತಿಹಾಸದಲ್ಲಿ ಒಂದು ಹೊಸ ದಾಖಲೆಯನ್ನೇ ನಿರ್ಮಿಸಿದೆ.

ರಶಿಯದ ಒಂದು ಮಹಾನಗರದಲ್ಲಿ ಒಂದು ಭಾರಿ ಕಟ್ಟಡದಲ್ಲಿ ಟೆಲಿಪತಿ ಪ್ರದರ್ಶನ ನಡೆದಿತ್ತು. ಪ್ರದರ್ಶನ ನೀಡುತ್ತಿದ್ದಾತ ಪ್ರೇಕ್ಷಕರಿಂದಲೇ ಆರಿಸಲ್ಪಟ್ಟ ಒಬ್ಬನನ್ನು ವೇದಿಕೆಗೆ ಆಹ್ವಾನಿಸಿದ. "ಏನನ್ನಾದರೂ ಮನಸ್ಸಿನಲ್ಲಿ ಅಂದುಕೋ" ಎಂದ. ಆತ ಮನಸ್ಸಿನಲ್ಲೇನನ್ನೊ ನಿರ್ಧರಿಸಿದ ಮೇಲೆ ಆತನನ್ನು ತೀಕ್ಷ್ಣವಾಗಿ ದೃಷ್ಟಿಸಿ ಕೂಡಲೆ ವೇದಿಕೆಯಿಂದಿಳಿದುಬಂದು ಪ್ರೇಕ್ಷಕರ ನಡುವೆ ಕುಳಿತಿದ್ದ ಒಬ್ಬಳ ತೊಡೆಯ ಮೇಲಿದ್ದ ಮೂರು ವರ್ಷದ ಬಾಲಕನನ್ನು ಎತ್ತಿಕೊಂಡುಬಂದು ಆತನಿಗೆ ಕೊಟ್ಟ. ಕೂಡಲೆ ಆತ ಆಶ್ಚರ್ಯದಿಂದ ಹಸ್ತಲಾಘವವನ್ನಿತ್ತ. ಒಂಬತ್ತನೇ ಸಾಲಿನ ಪ್ರೇಕ್ಷಕರ ಮಧ್ಯದಲ್ಲಿ ಕುಳಿತಿದ್ದ ತನ್ನ ಪತ್ನಿಯ ಕೈಯಲ್ಲಿರುವ ಮಗುವನ್ನು ವೇದಿಕೆಯ ಮೇಲೆ ತರಬೇಕೆಂದು ಮನಸ್ಸಿನಲ್ಲಿ ಅಂದುಕೊಂಡ ಪ್ರಕಾರ ತಂದಿದ್ದಾನೆಂದು ಆತ ಪ್ರೇಕ್ಷರಿಗೆ ಹೇಳಿದ.

ಇಂಥ ಅನೇಕ ಚಮತ್ಕಾರಗಳನ್ನು ಪ್ರದರ್ಶಿಸುತ್ತಿರುವಾಗಲೇ ಇಬ್ಬರು ಪೋಲೀಸ್ ಅಧಿಕಾರಿಗಳು ಹಠಾತ್ತನೆ ವೇದಿಕೆಗೆ ಬಂದು ಆತನನ್ನು ಹಿಡಿದರು. ಮತ್ತೊಬ್ಬ ಅಧಿಕಾರಿ ಧ್ವನಿವರ್ಧಕದ ಬಳಿಗೆ ಬಂದು ಪ್ರದರ್ಶನವನ್ನು ಅರ್ಧಕ್ಕೇ ನಿಲ್ಲಿಸುತ್ತಿರುವುದಕ್ಕಾಗಿ ವಿಷಾದಿಸಿ ಎಲ್ಲರೂ ಅಲ್ಲಿಂದ ಹೊರಟುಹೋಗುವಂತೆ ಕೇಳಿಕೊಂಡ.

ಆ ಪ್ರದರ್ಶನಕನ ಹೆಸರು ವೋಲ್ಫ್ ಮೆಸ್ಸಿಂಗ್. ಪ್ರಪಂಚದಲ್ಲೆಲ್ಲ ಪ್ರಖ್ಯಾತನಾಗಿದ್ದ ಟೆಲಿಪತಿ ನಿಪುಣ. ಅದುವರೆಗಾಗಲೆ ಎಷ್ಟೋ ಮಂದಿ ತಜ್ಞರು ಆತನನ್ನು ಪರೀಕ್ಷಿಸಿ ಅದರಲ್ಲಿ ಯಾವ ಮೋಸವೂ ಇಲ್ಲವೆಂದು ಸಾರಿದ್ದರು.

ಆಲ್ಬರ್ಟ್ ಐನ್‌ಸ್ಟೈನ್, ಸಿಗ್ಮಂಡ್ ಫ್ರಾಯಿಡ್, ಮಹಾತ್ಮಾ ಗಾಂಧಿ ಮುಂತಾದವರಿಂದ "ಮಹಾಮೇಧಾವಿ" ಎಂಬ ಪ್ರಶಂಸೆಗೆ ಪಾತ್ರನಾಗಿದ್ದ ವ್ಯಕ್ತಿ ವೋಲ್ಫ್ ಮೆಸ್ಸಿಂಗ್.

ಪೋಲೀಸರು ಮೆಸ್ಸಿಂಗನನ್ನು ಜೀಪಿನಲ್ಲಿ ತಳ್ಳಿದರು. ಸ್ವಲ್ಪ ಹೊತ್ತು ದಿಗ್ಭ್ರಾಂತನಾದ ಆತ ಏನನ್ನೋ ಕೇಳಲು ಹೊರಟಾಗ ಸುಮ್ಮನೆ ಕುಳಿತಿರುವಂತೆ ಅಧಿಕಾರಿ ಎಚ್ಚರಿಸಿದ

ಜೀಪು ನೇರವಾಗಿ ಹೋಗಿ ಒಂದು ದೊಡ್ಡ ಭವನದ ಮುಂದೆ ನಿಂತಿತು. ಪೋಲೀಸಿನವರು

# ಹಿಟ್ಲರನನ್ನು ದಂಗುಬಡಿಸಿದ ವ್ಯಕ್ತಿ

ಅಜ್ಜಂಪುರ ಸೂರಿ

ಆತನನ್ನು ಆ ಭವನದಲ್ಲಿದ್ದ ಒಬ್ಬ ಮೀಸೆಯುವನೆದುರಿಗೆ ನಿಲ್ಲಿಸಿದರು. ಮೆಸ್ಸಿಂಗ್ ಆತನನ್ನು ಕಾಣುತ್ತಲೆ ಈತನೇ 'ಸ್ಟಾಲಿನ್' ಎಂದುಕೊಂಡ.

ಮೆಸ್ಸಿಂಗನ ವಿಚಾರಗಳನ್ನೆಲ್ಲ 'ಸ್ಟಾಲಿನ್' ಕೇಳಿ ತಿಳಿದಿದ್ದನಾದರೂ ರಾಜಕೀಯ ಚಟುವಟಿಕೆಗಳ ಒತ್ತಡದಿಂದಾಗಿ ಆತನ ಪ್ರದರ್ಶನವನ್ನು ವೀಕ್ಷಿಸಲು ಸಮಯವೇ ದೊರಕಿರಲಿಲ್ಲ.

ಪೋಲಂಡಿನ ನಾಯಕರು ರಶಿಯದ ವಿರುದ್ಧ ಸಂಚು ನಡೆಸುತ್ತಿರುವ ಸುದ್ದಿ ಬಂದಿತ್ತು. ಆದರೆ ಆ ಸಂಚಿನ ವಿವರ ತಿಳಿಯಬೇಕಾಗಿತ್ತು.



ಸ್ಟಾಲಿನ್ ಅದಕ್ಕಾಗಿಯೇ ಮೆಸ್ಸಿಂಗನನ್ನು ಕರೆಸಿಕೊಂಡಿದ್ದ.

ಸ್ಟಾಲಿನ್ನನ ಅಪೇಕ್ಷೆಯಂತೆ ಮೆಸ್ಸಿಂಗ್ ಎಲ್ಲವನ್ನೂ ವಿವರಿಸಿ ಹೇಳಿದ. ಅಲ್ಲಿಗೇ ಬಿಡದ ಸ್ಟಾಲಿನ್ ಕಠಿಣವಾದ ಪರೀಕ್ಷೆಗಳಿಗೀಡುಮಾಡಿದ. ಮೆಸ್ಸಿಂಗ್ ಎಲ್ಲದರಲ್ಲೂ ವಿಜಯಿಯಾದ.

ರಶಿಯಾದ ಗಂಗೋರಾಕಲ್ವಾರಿಯನ್ ಪಟ್ಟಣದಲ್ಲಿ ೧೮೯೯ರಲ್ಲಿ ಹುಟ್ಟಿದ ಮೆಸ್ಸಿಂಗ್ ಪರಮ ನಾಸ್ತಿಕನಾಗಿದ್ದ. ಆತನ ತಂದೆ ತಾಯಿಗಳು ಮಾತ್ರ ಆಸ್ತಿಕರು. ಕೇವಲ ಹನ್ನೊಂದನೇ ವಯಸ್ಸನ್ನು ದಾಟುವಷ್ಟರಲ್ಲಿ ಮೆಸ್ಸಿಂಗ್ ಈ ಲೋಕದ ಬಗ್ಗೆ ಬಹಳಷ್ಟು ತಿಳಿದಿದ್ದ. ಅಪ್ಪ ಅಮ್ಮನ ಜೊತೆಗಿದ್ದರೆ ತಾನೆಲ್ಲಿ ಆಸ್ತಿಕನಾಗಿಬಿಡುತ್ತೇನೋ ಎಂದು ಹೆದರಿ ರಾತ್ರೋರಾತ್ರಿ ಯಾರಿಗೂ ಹೇಳದೆ ಬರ್ಲಿನ್ ಕಡೆಗೆ ಹೊರಟಿದ್ದ ರೈಲನ್ನು ಹತ್ತಿದ. ಟಿಕೆಟ್ ಕೊಳ್ಳುವಷ್ಟು ಹಣ ತನ್ನಲ್ಲಿರಲಿಲ್ಲವಾಗಿ ಪ್ರಯಾಣಿಕರು ಕುಳಿತಿದ್ದ ಬೆಂಚಿನ ಕೆಳಗೆ ಅವಿತುಕೊಂಡ.

ಸ್ವಲ್ಪಹೊತ್ತಿಗೆ ಟಿಕೆಟ್ ಕಲೆಕ್ಟರ್ ಬಂದು ಎಲ್ಲರ ಟಿಕೆಟ್‌ಗಳನ್ನೂ ಪರೀಕ್ಷಿಸತೊಡಗಿದ. ಯಾರದೊ

ಟಿಕೆಟ್ ಕೈ ಜಾರಿ ಕೆಳಗೆ ಬಿತ್ತು. ಟಿಕೆಟ್ ಕಲೆಕ್ಟರ್ ಅದನ್ನೆತ್ತಿಕೊಳ್ಳಲು ಬಗ್ಗಿದಾಗ ಆತನ ಕಣ್ಣಿಗೆ ಮೆಸ್ಸಿಂಗ್ ಕಂಡುಬಿಟ್ಟ. ಕೂಡಲೆ ಆತನನ್ನು ಹೊರಕ್ಕೆಳೆದು ಟಿಕೆಟ್ ಕೇಳಿದ ಅಷ್ಟೆ! ಅದೊಂದೇ ಕ್ಷಣ ಮೆಸ್ಸಿಂಗನ ಜೀವನವನ್ನೇ ಬದಲಾಯಿಸಿ-ಬಿಟ್ಟಿತು. ತಕ್ಷಣ ಜೇಬಿನಲ್ಲಿದ್ದ ಹಳೇ ವಾರ್ತಾ ಪತ್ರಿಕೆಯ ಒಂದು ಚೂರನ್ನು ಹರಿದು ಟಿಕೆಟ್ ಕಲೆಕ್ಟರನ ಕೈಗೆ ಕೊಟ್ಟ. ಆತ ಅದನ್ನು ಅತ್ತಿತ್ತ ತಿರುಗಿಸುತ್ತಾ ಪರೀಕ್ಷಿಸಿ ರುಜುಮಾಡಿ ಮೆಸ್ಸಿಂಗನ ಕಡೆ ಕೊಡುತ್ತ "ಟಿಕೆಟ್ ಕೊಂಡಿದ್ದೂ ಕೆಳಗೇಕೆ ಅವಿತುಕೊಂಡಿದ್ದೆ?" ಎಂದು ಕೇಳಿ ಹೊರಟು ಹೋದ.

ಆ ಸಮಯದಲ್ಲಿ ಆ ಕಾಗದದ ಚೂರು ಅಸಲಿ ಟಿಕೆಟ್ಟಿನಂತೆ ಟಿಕೆಟ್ ಕಲೆಕ್ಟರನಿಗೆ ಕಾಣಲೆಂದು ಮೆಸ್ಸಿಂಗ್ ತನಗೇ ಅರಿವಾಗದಂತೆ ತನ್ನ ಮುಂದಿನ ವ್ಯಕ್ತಿಯ ಮನಸ್ಸಿಗೆ ಆದೇಶ ಕಳುಹಿಸಿದ್ದ. ತನ್ನ ಜೀವನದಲ್ಲಿ ಮೊದಲ ಬಾರಿ ನಡೆದ ಈ ಆಶ್ಚರ್ಯಕರವಾದ ಘಟನೆಗೆ ಮೆಸ್ಸಿಂಗನೇ ಚಕಿತನಾದ. ತಮಾಷೆಯಾಗಿ ಕಂಡ ಈ ಶಕ್ತಿಯನ್ನು ಅಭಿವೃದ್ಧಿ ಪಡಿಸಿಕೊಳ್ಳುವ ಉತ್ಸಾಹ ಮೂಡಿತು. ಬರ್ಲಿನ್ ತಲಪಿದ ಮೇಲೆ ಒಂದು ಚಿಕ್ಕ ನೌಕರಿ ಹಿಡಿದು ತನ್ನ ಗೆಳೆಯರ ಮೇಲೆ ಮನೋಸಂಕೇತ ವರ್ಗಾವಣೆಯ ಚಮತ್ಕಾರಗಳನ್ನು ಪ್ರಯೋಗಿಸುತ್ತ ಕೆಲವೇ ದಿನಗಳಲ್ಲಿ ಚೆನ್ನಾಗಿ ಪಳಗಿ ಸಾವಿರಾರು ಜನರ ಮುಂದೆ ಪ್ರದರ್ಶನ ಮಾಡುವಷ್ಟರ ಮಟ್ಟಿಗೆ ಗಟ್ಟಿಗನಾದ.

ಆತನ ಪ್ರದರ್ಶನಗಳು ಜನರನ್ನು ಬಹಳವಾಗಿ ಆಕರ್ಷಿಸುತ್ತಿದ್ದವು. ನೌಕರಿಯನ್ನು ತ್ಯಜಿಸಿ ಬರ್ಲಿನ್ನಿನ ಮುಖ್ಯ ಸ್ಥಳಗಳಲ್ಲಿ ಪ್ರದರ್ಶನ ನೀಡಿದ. ನಂತರ ಭಾರತವನ್ನು ಒಳಗೊಂಡಂತೆ ಅನೇಕ ದೇಶಗಳಲ್ಲಿ ಸಂಚರಿಸಿ ೧೯೩೭ರಲ್ಲಿ ಪೋಲೆಂಡ್ ಸೇರಿದ.

ಅಲ್ಲೊಂದು ಕಡೆ ಪ್ರದರ್ಶನದ ಕಾಲದಲ್ಲಿ ಹಿಟ್ಲರನ ಅಂತ್ಯ ಹೇಗಾಗುತ್ತದೆಂಬುದನ್ನು ಹೇಳಿಬಿಟ್ಟ. ಇದರಿಂದಾಗಿ ಹಿಟ್ಲರನಿಗೆ ಕೋಪ ಬಂತು. ಹಿಟ್ಲರ್ ಪೋಲೆಂಡಿನ ಮೇಲೆ ದಂಡೆತ್ತಿ ಬಂದಾಗ ಮೆಸ್ಸಿಂಗನ ತಲೆ ತಂದೊಪ್ಪಿಸಿದವರಿಗೆ ಎರಡು ಲಕ್ಷ ಮಾರ್ಕು ಕೊಡುವುದಾಗಿ ಸಾರಿದ.

ಆದರೆ ಮೆಸ್ಸಿಂಗ್ ಅಲ್ಲಿಂದ ಉಪಾಯವಾಗಿ ಪಾರಾಗಿ ರಶಿಯವನ್ನು ಸೇರಿಕೊಂಡು ಅಲ್ಲಿಯ ನಾಯಕರ ಆಶ್ರಯದಲ್ಲಿದ್ದು ದೇಶದಲ್ಲೆಲ್ಲಾ ಸಂಚರಿಸಿ ಪ್ರದರ್ಶನಗಳನ್ನು ಏರ್ಪಡಿಸಿದ.

ತನ್ನಲ್ಲಿರುವ ಅತೀಂದ್ರಿಯ ಶಕ್ತಿಯಿಂದ ಈ ಅದ್ಭುತಗಳನ್ನು ಮಾಡುತ್ತಿರುವುದಾಗಿಯೂ ಯಾರೇ ಆಗಲಿ ಪ್ರಯತ್ನಿಸಿದರೆ ಅವರಿಗೂ ಈ ಶಕ್ತಿ ಬರಬಹುದೆಂದೂ ಹೇಳುತ್ತಿದ್ದ. ಇದು ದೈವಶಕ್ತಿಯಲ್ಲವೆಂದು ಸಾರುತ್ತಿದ್ದ.

ಮೆಸ್ಸಿಂಗನನ್ನು ಎಷ್ಟೆಷ್ಟೋ ದೇಶದ ಮನೋ-ವಿಜ್ಞಾನಿಗಳು ಪರೀಕ್ಷಿಸಿದರು. ಆತನ ಅತೀಂದ್ರಿಯ ಶಕ್ತಿಗೆ ಬೆರಗಾದರು.

ನೊಬೆಲ್ ಪ್ರಶಸ್ತಿ ವಿಜೇತ, ಸೋವಿಯತ್ ಅಕ್ಯಾಡಮಿ ಆಫ್ ಸೈನ್ಸಸ್‌ನ ಉಪಾಧ್ಯಕ್ಷನಾದ ಡಾಕ್ಟರ್ ನಿಕೋಲಾಯ್ ಸಿಮ್ಯಾನೋವ್ ಎಂಬುವರು ಮೆಸ್ಸಿಂಗನನ್ನು ಪರೀಕ್ಷಿಸಿ ತೃಪ್ತಿಪಟ್ಟ ನಂತರ ೧೯೬೬ರಲ್ಲಿ 'ಸೈನ್ಸ್ ಅಂಡ್ ರಿಲಿಜನ್' ಎಂಬ ಲೇಖದಲ್ಲಿ ಈ ಕುರಿತು ಲೇಖನ ಪ್ರಕಟಿಸಿ-ದರು. ತನ್ನ ಬಗ್ಗೆ ಮೆಸ್ಸಿಂಗ್ ಬರೆದುಕೊಂಡ 'ಎಬೌಟ್ ಮೈಸೆಲ್ಫ್' ಎಂಬ ಲೇಖನ ಅದರಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು.

ಒಮ್ಮೆ ಈತ ಪತ್ರಿಕಾಗೋಷ್ಠಿಯಲ್ಲಿ ಟೆಲಿಪತಿ ಕುರಿತು ಮಾತನಾಡುತ್ತ—

"ಇದೇನೂ ಬ್ರಹ್ಮವಿದ್ಯೆಯಲ್ಲ, ಎದುರಾಳಿ ಒಂದು ವಿಷಯವನ್ನು ಬಲವಾಗಿ ಉಹಿಸಿಕೊಳ್ಳುವಂತಾದರೆ ಸ್ವಲ್ಪವಾದರೂ ಪ್ರಯತ್ನಿಸಿದ ಯಾರೇ ಆಗಲಿ ಅದನ್ನು ಗ್ರಹಿಸಬಲ್ಲರು. ಅದರಲ್ಲೂ ಮೂಕ ಮತ್ತು ಕುರುಡರ ಮೇಲೆ ಟೆಲಿಪತಿ ಪ್ರಯೋಗವನ್ನು ಸುಲಭವಾಗಿ ಮಾಡಬಹುದು. ಕಾರಣ ಅವರ ಊಹಾಶಕ್ತಿ ಇತರರಿಗಿಂತ ಪ್ರತ್ಯೇಕವಾಗಿರುತ್ತದೆ" ಎನ್ನುತ್ತಿದ್ದ. ✡

ಅಂತೂ ನೂರು ತುಂಬಲು ಬಿಡದೆ ಜವರಾಯ ಬೆಳಗಿನ ಜಾವ
ಆ ಒಳ್ಳೆಯ ಮರವನ್ನು ಕಡಿದೊಯ್ದು

# ಶ್ರೀನಿವಾಸಾಯ ತೇ ನಮಃ

ಖಜಾನೆ ಕೃಷ್ಣಮೂರ್ತಿ

"ಪ್ರಜಾವಾಣಿ." ದಿನಾಂಕ ೫-೬-೮೬. ಗುರುವಾರ. ಪುಟ ೩. ಕಾಲಂ ೫.

"ನಾಳೆ ೯೫ ತುಂಬುವ ಮಾಸ್ತಿ ಗೌರವಾರ್ಥ ನಾಟಕೋತ್ಸವ, ಪುಸ್ತಕ ಪ್ರದರ್ಶನ. ನ್ಯಾಷನಲ್ ಕಾಲೇಜಿನಲ್ಲಿ ೬ ರಂದು ಚಿಕವೀರ ರಾಜೇಂದ್ರ ನಾಟಕ-೭ರಂದು ಕಾಕನ ಕೋಟೆ"......

ಇನ್ನು ೪ ವರ್ಷ ಕಳೆದರೆ ಶ್ರೀಮಾಸ್ತಿಯವರಿಗೆ "ಶತಮಾನಂಭವತಿ" ಭಯವಿಲ್ಲ!

ಅದೇ ಸಂಜೆ ಟಿ. ವಿ. ಯಲ್ಲಿ "ಅನಾರೋಗ್ಯ ನಿಮಿತ್ತ ಜಯದೇವ ಹೃದ್ರೋಗ ಶುಶ್ರೂಷಾ-ಲಯಕ್ಕೆ ಸೇರಿಸಿದೆ-ಶ್ರೀಮಾಸ್ತಿಯವರನ್ನ!"

"ಪ್ರಜಾವಾಣಿ" ೬-೬-೮೬: "ಅಣ್ಣ ಮಾಸ್ತಿ ಇನ್ನಿಲ್ಲ."

ಅಂತೂ ನೂರು ತುಂಬಲು ಬಿಡದೆ ಜವರಾಯ-ಕುಡುಗೋಲು ಕೊಡಲ್ಯೊಂದ ಹೆಗಲೇರಿ ಬೆಳಗಿನ ಜಾವದ ೧-೨೦ರ ಸಮಯದಲ್ಲಿ ಈ ಒಳ್ಳೆಯ ಮರವನ್ನು ಕಡಿದೊಯ್ದಾಗಿತ್ತು.

ಗಡಿಯಾರ ನೋಡಿದೆ. ಬೆಳಗಿನ ೬-೨೦. ಸೈಕಲ್ ಹತ್ತಿದೆ.

ಬಾಪೂಜಿ ನಗರ-ಮೈಸೂರು ರಸ್ತೆ-ಟಿಂಬರ್ ಯಾರ್ಡ್ ಲೇ ಔಟ್ - ಶ್ರೀನಗರ-ಹನುಮಂತ ನಗರ-ಗವೀಪುರ. ೭-೧೫.

ಅವರ ಮನೆ ಮುಂದೆ, ಒಳಗೆ, ಹೊರಗೆ, ಎಲ್ಲ ಜನ.

ಮುಂದಿನ ಗೇಟು ದಾಟಿ ಒಳ ಹೊಕ್ಕೆ.

ಎದುರಿಗೇ ನಡು ಮನೆಯಲ್ಲಿ ಚಪ್ಪರಗಾಲಿನ ಮಂಚದಲ್ಲಿ ಅದೇ ಗ್ರೇ ಫ್ಲಾನಲ್ ಷರ್ಟ್ ಧರಿಸಿ ಪಂಚೆಯುಟ್ಟು ಹೂ-ಹಾರಗಳ ರಾಶಿಯ ನಡುವೆ -ಗದ್ದದ ಕೆಳಗಿಂದ ನೆತ್ತಿಯೆಡೆಗೆ ಬರುವಂತೆ ಕಟ್ಟಿದ ಒಂದು ಬ್ಯಾಂಡೇಜ್ ಬಟ್ಟೆ-ಆ ಮುಖ-ನಿದ್ರೆ ಮಾಡುತ್ತಿರುವಂತೆ ಕಾಣುವ ಮಾಸ್ತಿಯವರ ಕಳೇಬರ ಕಾಣಿಸುತ್ತಿತ್ತು. ದುಃಖ ಉಮ್ಮಳಿಸಿ ಬಂತು. ಒತ್ತಿ ಬರುತ್ತಿದ್ದ ಜನಗಳ ಸಾಲಿನಲ್ಲಿ ನಾನೂ ಸೇರಿ ಅವರ ಬಳಿ ಹೋದೆ. ನಂತರ ಹೊರಕ್ಕೆ ಬಂದು ಪಕ್ಕದ ಕಿಟಕಿಯೆಡೆ ಸರಿದೆ. ಅಲ್ಲಿಂದ ಆ ಮಂಚದ ಸುತ್ತ ಅವರ ಹೆಣ್ಣು ಮಕ್ಕಳು-ಮೊಮ್ಮಕ್ಕಳು, ಅಂತಿಮ ದರ್ಶನಕ್ಕಾಗಿ ಸುತ್ತುವರಿಯುತ್ತಿರುವ ಜನ ಎಲ್ಲ ಕಾಣಿಸುತ್ತಿತ್ತು.

ಒಳ ಮೂಲೆಯಲ್ಲೊಂದೆಡೆ ಯಾರೋ ಅವರ



ಜೂನ್ ೬, ೧೮೯೧

ಜೂನ್ ೬, ೧೯೮೬

ಅನುಬಂಧಿಗಳು ಗೀತಾ ಪಠಣ ಮಾಡುತ್ತಿದ್ದರು.

ಜನ ಬರುತ್ತಲೇ ಇದ್ದರು ಹಿಂಡು ಹಿಂಡಾಗಿ-ಹೂವಿನ ಹಾರ-ಹೂವಿನ ಸರ-ಬಿಡಿಯ ಹೂಗಳು-ಲೆಕ್ಕವಿಲ್ಲದಷ್ಟು! ಕೆಲವು ಕೆಂಪು ಗುಲಾಬಿಗಳು ಅವರ ಪಾದದ ಮೇಲೆ! ಕೈ ಮುಗಿವವರು-ಪಾದಸ್ಪರ್ಶ ಮಾಡುವವರು ಕಣ್ಣಿಗೊತ್ತಿ ಕೊಂಬವರು-ಅಗಣಿತ!

ಉಮ್ಮಳಿಸಿ ಬಂದ ದುಃಖ ಉದ್ವೇಗಗಳಿಂದ ನನ್ನ ಕಣ್ಣಲ್ಲೂ ನೀರು ತುಂಬಿ ಕಣ್ಣು ಮಂಜಾಯಿತು. ಕನ್ನಡಕ ತಾರದೆ ಹೋಗಿ ಮಸುಕು ಮಸುಕಾದ ಕಣ್ಣುಗಳಿಂದಲೇ ಬಂದವರನ್ನು-ಬರುವವರನ್ನು ಮಾತಾಡಿಸುವವರನ್ನು ಕಷ್ಟದಿಂದ ಗುರುತು ಹಿಡಿಯಲು ಪ್ರಯತ್ನಿಸುತ್ತಿದ್ದೆ. ಅಲ್ಲಿಯೂ ನಿಲ್ಲಲಾರದೆ ಗೋಡೆಯ ಬಳಿಗೆ ಸರಿದೆ.

ಮುಂಗಡೆ ಇರಿಸಿದ್ದ ಬೆತ್ತದ ಸೋಫಾಗಳ ಮೇಲೆ ಡಾ. ಎಂ. ವಿ. ಸೀ. ಮತ್ತು ಚಡಗ ಮಾತಾಡದೆ ಮೌನವಾಗಿ ಕುಳಿತಿದ್ದರು. ಹೊರಗಡೆ ಆನಂದರಾಯರು. ಆಕಾಶವಾಣಿ ಮೂರ್ತಿ, ಡಿ. ವಿ. ಸೀ. ಯವರ ಮಗ ಸತ್ಯನಾರಾಯಣ ಅಲ್ಲಲ್ಲಿ ಕಾಣಿಸುತ್ತಿದ್ದರು. ಜನ ಬರುತ್ತಲೇ ಇದ್ದರು. ಶ್ರೀ ನಿಸಾರ್ ಅಹ್ಮದ್, ಬಿ. ಸಿ. ರಾಮಚಂದ್ರ ಶರ್ಮ, ಕೆ. ಎಸ್. ನರಸಿಂಹಸ್ವಾಮಿ ಇನ್ನೂ ಅನೇಕಾನೇಕರು. ಖಜಾನೆ-ನನ್ನ ಗುರುತು ಸಿಗಲಿಲ್ಲವೆ? ಎನ್ನುತ್ತ ಡಾ. ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟರು. ಅದರಂತೆ ಶಿವಮೊಗ್ಗ ಸುಬ್ಬಣ್ಣ! ಅವರಿಗೆಲ್ಲ ಏನು ಉತ್ತರ ಕೊಟ್ಟೆನೋ ಏನೋ. ಮನಸ್ಸು ೬೬ ವರ್ಷಗಳ ಹಿಂದಿನ ಶಿವಮೊಗ್ಗೆಯಲ್ಲಿ – ರಾಮಾಶಾಸ್ತ್ರಿಗಳ ಅಂಗಡಿ ಮತ್ತು ಡಾ. ರಾಮಣ್ಣನವರ ಷಾಪ್ ಮಧ್ಯೆ ಹಾಯುವ ರಸ್ತೆಯಲ್ಲಿ ೨೦-೩೦ ಹೆಜ್ಜೆ ಹೋಗಿ ಅಲ್ಲಿ ಕಾಣುವ ದೊಡ್ಡ ಮನೆ-ಶೀರ್ಯದ ವೆಂಕಟಪ್ಪ ಶೆಟ್ಟರದ್ದು. ಅಲ್ಲಿದ್ದ-ನಾನು ಓದಿದ ಮಿಡಲ್ ಸ್ಕೂಲ್ – "ಚಿಲ್ಡ್ರನ್ಸ್ ಹೋಂ"-ಮುಂದೆ ನಿಂತಿತ್ತು.

ಆ ಶಾಲೆಯ ಹೆಡ್ ಮಾಸ್ಟರ್ ಶ್ರೀ ಶ್ರೀಧರಮೂರ್ತಿಯವರು ಒಂದು ಚಿಕ್ಕ ಬೀರು ತುಂಬ ಮಾಸ್ತಿ, ಪುಟ್ಟಪ್ಪ, ಬೇಂದ್ರೆ, ಡಿ. ವಿ. ಜಿ., ವಿ. ಸೀ., ಬಿ. ಎಂ. ಶ್ರೀ., ರಾಜರತ್ನಂ ಬರೆದ ಕನ್ನಡದ ಪುಸ್ತಕಗಳನ್ನು ಸಂಗ್ರಹಿಸಿದ್ದರು. ನಾನೋ! ಪುಸ್ತಕ-ಪದಾರ್ಥಗಳನ್ನು ಹಾಳು ಮಾಡುವುದರಲ್ಲಿ ಮೊದಲಿಗ. ಅವರು ನನ್ನನ್ನು ಹೊಡೆದು ಚರ್ಮ ಸುಲಿದರೂ ಆ ಪುಸ್ತಕಗಳನ್ನು ನನಗೆ ಓದಲು, ಕವನಗಳನ್ನು ಗಟ್ಟಿ ಮಾಡಲು, ನಾಟಕದ ಪಾತ್ರಗಳನ್ನು ನೋಡಿಕೊಳ್ಳಲು ಕೊಡುತ್ತಿದ್ದರು. ನನಗಾಗ ೯-೧೦ ವರ್ಷ. ಆಗಲೇ ಮಾಸ್ತಿಯವರ ಸಣ್ಣ ಕತೆಗಳನ್ನು ಓದಿದ್ದೆ.

ಕಾಮನ ಹಬ್ಬದ ಕತೆ, ಮೊಸರಿನ ಮಂಗಮ್ಮ, ವೆಂಕಟ ಶಾಮಿಯ ಪ್ರಣಯ ಈ ಎಲ್ಲವುಗಳನ್ನು ಓದಿದ್ದೆ. ಕಾಮನ ಹಬ್ಬದ ಕತೆಯಲ್ಲಿ ಬರುವ. "ಬೋಲ ಬೋಲ ಬಸವಾ, ನಿಮ್ಮಪ್ಪ ಸತ್ತರೆ ಲಬೋ ಲಬೋ," ಎಂಬ ಸಾಲು ಅಲ್ಲಿನ ನಮ್ಮ ಬೀದಿಯ ಕಾಮನ ಹಬ್ಬದ ಹಾಡು-ಹೊಗಳಿಕೆ ಕುಣಿತಗಳನ್ನು ನಿರಂತರವಾಗಿ, ಚಿರಂತನವಾಗಿ ನೆನಪಿನಲ್ಲಿರಿಸಬಲ್ಲ ಪದ ಸಮುಚ್ಚಯ! "ಸುಬ್ಬಣ್ಣ" ಓದಿದ್ದು ಆವಾಗಿನ-ದಿನಗಳಲ್ಲೇ!

*

'ತಪೋಭಂಗವಾಯಿತು.'

ರಾಜಕುಮಾರ ಬಂದರು ... ... ಅವರು ಬಂದರು...ಇವರು ಬಂದರು... ಟಿ. ವಿ. ಯವರು...ಸಿನಿಮಾ ತೆಗೆಯುವವರು ಬಂದರು... ಗಲಾಟೆ ಎದ್ದಿತು. ಆಲೋಚನಾ ಧಾಟಿ ಕಡಿಯಿತು.

ಬೇರೆಡೆ ಹೋಗಿ ಕಣ್ಣು ಬಾಡಿಸುತ್ತ ನಿಂತೆ. ಬಂದವರು ಹೋದರು...ಗದ್ದಲ ಕಡಿಮೆಯಾಯಿತು.

*

ಮಾಸ್ತಿಯವರ "ಸುಬ್ಬಣ್ಣ" ನೆನಪಿಗೆ ಬಂದ. ಕಾದಂಬರಿಯೊಂದನ್ನೋದಿದಾಗ ಕೆಲವರಿಗೆ ಕಥಾವಸ್ತು ಇಷ್ಟವಾದರೆ, ಮತ್ತೆ ಕೆಲವರಿಗೆ ಅದರ ತಂತ್ರ- ಹಲವರಿಗೆ ಅದರ ಆರಂಭ-ಇತರರಿಗೆ ಅದರ ಅಂತ್ಯ; ಕೆಲವರಿಗೆ ಕರ್ತೃ ಏನೆಡೆ ಮನಸ್ಸು ಹರಿದರೆ ಇನ್ನು ಕೆಲವರು ಆ ಕಾದಂಬರಿಯ ಪಾತ್ರಗಳಲ್ಲಿ ತಮ್ಮನ್ನು ತಾವೇ

ಕಂಡುಕೊಳ್ಳುವುದರಿಂದ ಅವರಿಗೆ ಅದರಲ್ಲಿನ ಪಾತ್ರಗಳು ತುಂಬ ಮೆಚ್ಚಿಗೆಯಾಗುತ್ತವೆ. ಅದರಂತೆ ನನಗೆ ಬಾಲ್ಯದ ಆ ದಿನಗಳಲ್ಲಿ ಮೆಚ್ಚಿಕೆಯಾದುವು-ಗೋಕಾಕರ ಇಜ್ಜೋಡು, ಗುರುನಾಥ ಜೋಷಿ ಅನುವಾದಿಸಿದ ಶರಚ್ಚಂದ್ರರ ದೇವದಾಸ-ಕಾರಂತರ ಎಲ್ಲ ಕೃತಿಗಳು; ಅ. ನ. ಕೃಷ್ಣರಾಯರ ನಟಸಾರ್ವಭೌಮ-ಸಂಧ್ಯಾ ರಾಗ-ಉದಯ ರಾಗಗಳು ಮತ್ತು ಮಾಸ್ತಿಯವರ 'ಸುಬ್ಬಣ್ಣ.'

ಹೈಸ್ಕೂಲಲ್ಲಿ ಮೊದಲೆರಡು ತರಗತಿಗಳ ಕನ್ನಡ ಪದ್ಯ ಸಂಗ್ರಹದಲ್ಲಿ ಶ್ರೀ ಮಾಸ್ತಿ ರಚಿತ ಕನಕದಾಸರ ಕುರಿತು ಬರೆದಿದ್ದ, "ನಮ್ಮ ಕನಕಣ್ಣ ತತ್ವವನು ವಿವರಿಸುವ ರೀತಿಯಿದು"-ಎಂದಾರಂಭವಾಗುವ ಪದ್ಯ. ಎಲ್ಲೆಲ್ಲಿಯೂ ದೇವನಿಲ್ಲದ ಸ್ಥಳ ಕಾಣದೆ ಬಾಳೇಹಣ್ಣನ್ನು ತಿನ್ನದೆ ಹಾಗೆಯೇ ಗುರುಗಳಿಗೆ ತಂದೊಪ್ಪಿಸಿದ ಕತೆ-ಪದ್ಯವಾಗಿತ್ತು.

ಮಾಸ್ತಿಯವರಿಗೆ ಪ್ರಿಯರೂ ಪ್ರೇರಕರೂ ಆಗಿದ್ದ ದಿ. ಶ್ರೀ ನವರತ್ನ ರಾಮರಾಯರು ನನ್ನೂರು-ಶಿವಮೊಗ್ಗೆಯವರು. ಅವರ ಮಗಳು ಶ್ರೀಮತಿ ವೆಂಕಮ್ಮ (ಅಡ್ವೊಕೇಟ್ ದಿ. ಜಯತೀರ್ಥಾಚಾರ್ಯರ ಪತ್ನಿ) ಮಾಸ್ತಿಯವರ ಸುಬ್ಬಣ್ಣನ ಕೈಲಿ ಸಂಗೀತ ಪಾಠ ಹೇಳಿಸಿಕೊಂಡ ಪುಣ್ಯವಂತೆ! ಆಕೆಯ ಮಕ್ಕಳಲ್ಲಿ ಒಬ್ಬಳು ನನ್ನ ಸಹಪಾಠಿ ಇಬ್ಬರು ವಿದ್ಯಾರ್ಥಿನಿಯರು. ಅವರ ಮನೆಯಲ್ಲಿ ಮಾಸ್ತಿಯವರ, ನವರತ್ನ ರಾಮರಾಯರ, ರಾಜಾಜಿಯವರ ಭಾವಚಿತ್ರಗಳನ್ನು ನಾನು ನೋಡಿದ್ದೇನೆ.

ಇದೇ ನವರತ್ನ ರಾಮರಾಯರು "ಸುಬ್ಬಣ್ಣ"ನನ್ನು ಬರೆಯಲು ಮಾಸ್ತಿಯವರನ್ನು ಒಪ್ಪಿಸಿದ್ದು. ದಿವಾನ್ ಮಿರ್ಜಾರವರೊಂದಿಗೆ ಇಂಗ್ಲೆಂಡಿಗೆ ಹೋಗಿದ್ದಾಗ ಅಲ್ಲಿನ ಕ್ಲಬ್ (PUB?)ನಲ್ಲಿ ಕೊಡಗಿನ ರಾಜವಂಶತನದ ಕೊನೆಯ ಹೆಣ್ಣು ಮಗಳು ಗೌರಮ್ಮ-ಎಡಿತ್ ನಾತುವನ್ನು ಕಂಡುಬಂದು, ಇಡೀ ಕತೆಯನ್ನು ಮಾಸ್ತಿಯವರಿಗೆ ಹೇಳಿ ಅವರು 'ಚಿಕವೀರ ರಾಜೇಂದ್ರ' ಕಾದಂಬರಿ ಬರೆಯುವಂತೆ ಮಾಡಿದವರು.

*

ವೆಲ್ಸ್‌ಮೆಷ್ ಆಚೆ ಹೊರಗೆ ಕಲ್ಲು ಬೆಂಚಿನ ಮೇಲೆ ಮಾಸ್ತಿಯವರ ಅನುಬಂಧಿಗಳು ಮುಂದಿನ ವಿಚಾರ ಮಾತಾಡುತ್ತಿದ್ದುದು ಕಿವಿಗೆ ಬಿದ್ದು ಮತ್ತೆ ನನ್ನ ವಿಚಾರ ಲಹರಿ ತುಂಡಾಯಿತು.

ಡಾ. ಎಂ. ವಿ. ಸೀ. ಮತ್ತು ಚಡಗರು ನನ್ನನ್ನು ನೋಡಿ ಪರಿಚಯದ ದೃಷ್ಟಿ ಬೀರಿದ್ದೇ ತಡ, ಅವರ ಹತ್ತಿರ ಹೋಗಿ ಮಂಡಿಯೂರಿ ಕುಳಿತು ತಗ್ಗಿದ ದನಿಯಲ್ಲಿ ಹೇಳಿದೆ: "ಅಲ್ಲಿ ಉತ್ತರ ಕ್ರಿಯೆ ಮಾತಾಡ್ತಿದಾರೆ. ಕಾರ್ಪೊರೇಷನ್ ವ್ಯಾನ್ ತರಸ್ತಾರಂತೆ. ೯೫ ವರ್ಷಗಳ ತುಂಬು ಜೀವ ನಡೆಸಿ ಅನೇಕರಿಗೆ ದಾರಿದೀಪವಾಗಿದ್ದ ಅವರನ್ನು ಈ ಕೊನೇ ಗಳಿಗೇಲಾದರೂ ಹೊರುಕ್ಕೆ ಜನ ಇಲ್ಲ ಅಂತ್ಲೇ? ನಾವೆಲ್ಲ ಅದಕ್ಕಾಗಿ ಕಾಯ್ತಿದೀವಿ. ನಾನ್ಯಾರೋ ಏನೋ! ನೀವು ಹಿರಿಯರು. ಮಾತಾಡಿ ಒಪ್ಸುತ್ತೀರಾ? ಆ ಆನಂದರಾಯರನ್ನ ಕರೀಲಾ?" ಎಂದು ಬೇಡಿದೆ.

ಅವರಿಗೆ ನನ್ನ ಆಲೋಚನಾ ಧಾಟಿ ಒಪ್ಪಿಗೆಯಾಯಿತು. ಅದರಂತೆ ಆನಂದರಾಯರನ್ನು ಸಂಜ್ಞೆ ಮಾಡಿ ಕರೆದದ್ದೂ ಆಯಿತು. ಆವರೂ ಹೋಗಿ ಹೇಳಿಯೂ ಆಯಿತು.

ಮಾತು ನಡೆಯಲಿಲ್ಲ.

"ಮಾಸ್ತಿ ಕಣ್ಮುಚ್ಚಿ ಆಗಲೇ ೭-೮ ಗಂಟೆ ಕಳೆದಿದೆ. ಅವರ ದೇಹ ತಂಗಳಾಗಬಾರದು. ಇನ್ನೂ ಆಗಬೇಕಾಗಿರೋ ಕ್ರಿಯಾ-ಕರ್ಮ ತುಂಬ ಹೊತ್ತು ತಗೋತ್ವೆ. ಭದ್ರು (ಶ್ರೀ ರಾಮಭದ್ರನ್-ಮಾಸ್ತಿಯವರ ಮೊಮ್ಮಗ-ಅಂದಿನ ಕ್ರಿಯಾ ಕರ್ಮಗಳ ಕರ್ತರು) ಒಪ್ಪಲ್ಲ. ಅವೆಲ್ಲ ಮುಗಿದಿದ್ದೇ ತಡ, ವ್ಯಾನ್‌ನಲ್ಲಿ ಸಾಗಿಸಿಬಿಡೋಣ ಅದೂ ಅಲ್ದೀರ ವಿಲ್ಸನ್ ಗಾರ್ಡನ್ ಇಲ್ಲಿಂದ ಎಷ್ಟು ದೂರ...ಏನ್ ಕತೆ?" ಎಂದು ನಮ್ಮ ಬಾಯಿಗೆ ಬೀಗ ಜಡಿದೇಬಿಟ್ಟರು.

ಜನ ಬರುತ್ತಲೇ ಇದ್ದರು. ಹೆಚ್. ಎಸ್. ಪಾರ್ವತಿ, ಟಿ. ಸುನಂದಮ್ಮ, ಪಂಕಜ, ನಿರುಪಮ, ರೂಪತಾರಾ, ವಿಜಯಾರವರೆಲ್ಲ ಅಲ್ಲಿ ಉರಿ ಬಿಸಿಲಲ್ಲಿ ಕುಳಿತೋ ನಿಂತೋ ಮುಂದಿನದಕ್ಕಾಗಿ ಕಾಯುತ್ತಿದ್ದರು.

ಕೆಲ ಕಾಲಾನಂತರ ಮುಂದಿನ ಕ್ರಿಯಾ ಕರ್ಮ
ಗಳು ಆರಂಭವಾದುವು. ಮಾಸ್ತಿಯವರ ಶರೀರ
ವನ್ನು ನಡುಮನೆಯಿಂದ ಹೊರಗಡೆ ಕಂಪೌಂಡಿ
ನಲ್ಲಿ ಮಾವಿನ ಮರದ ನೆರಳಲ್ಲಿ ಕಲ್ಲು ಹಾಸಿನ
ಮೇಲೆ ತಂದು ಮಲಗಿಸಿದರು. ಎದುರು
ಮೂಲೆಯಲ್ಲಿ ಇಬ್ಬರು– ಮಾಸ್ತಿಯವರ
ಮಿತ್ರರು– ಆ ಕಾಲದವರು– ಮೌನವಾಗಿ ಕುಳಿ
ತಿದ್ದರು. ಅವರಲ್ಲೊಬ್ಬರು ಹೈಕೋರ್ಟಿನ
ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ನಿಟ್ಟೂರು
ಶ್ರೀನಿವಾಸರಾಯರು.

ಜನಗಳ ನೂಕು ನುಗ್ಗಲು ಹೆಚ್ಚಾಯಿತು.
ಒಬ್ಬೊಬ್ಬರು ಮುಖ್ಯ ವ್ಯಕ್ತಿಗಳು ಬಂದಾಗಲೂ
ಅವರ ಹಿಂದೆ–ಮುಂದೆ ಎಡ–ಬಲಗಳಲ್ಲಿ ಅವರು
ಗಳು ಮುಂದೆ ಸರಿಯಲೂ ಬಿಡದಷ್ಟು ಜನ.

ಆ ಗುಂಪು ಗೌಜುಗಳಲ್ಲೇ ಡಾ. ಜೀವರಾಜ
ಆಳ್ವ, ಜನತಾ ಪಕ್ಷದ ಅಧ್ಯಕ್ಷ ಎಂ.
ಚಂದ್ರಶೇಖರ್, ವೀರಪ್ಪ ಮೊಯ್ಲಿ, ಶಾಸಕ
ಮುಖ್ಯಮಂತ್ರಿ ಚಂದ್ರು ಮೊದಲಾದವರೆಲ್ಲ
ಬಂದು ಹೋದದ್ದು.

ಗದ್ದಲ ಸ್ವಲ್ಪ ಕಡಿಮೆಯಾದ ಮೇಲೆ
ಮತ್ತೊಮ್ಮೆ ಕಳೇಬರದ ಹತ್ತಿರ ಹೋಗಿ ಅವರ
ಮುಖ ನೋಡಿದೆ. ಹಣೆಯ ಮೇಲೆ ಶ್ರೀಗಂಧದ
ಒಂದು ಮುದ್ದೆ: ಕೊರಳಲ್ಲಿ ತುಳಸೀಮಾಲೆ.
ಪಕ್ಕಕ್ಕೆ ಸರಿದೆ.

*

ಐವತ್ತರ ದಶಕದಲ್ಲಿ ನಾನು ಶಿವಮೊಗ್ಗ
ನ್ಯಾಷನಲ್ ಹೈಸ್ಕೂಲ್ ಅಧ್ಯಾಪಕನಾಗಿ
ಕೊಳೆಯುತ್ತಿದ್ದ ಕಾಲ ನೆನಪಿಗೆ ಬಂತು.
ಆಕಾಶವಾಣಿಯವರು ಕರೆದ ಹುದ್ದೆಯೊಂದಕ್ಕೆ
ಅರ್ಜಿ ಮಾಡಿದ್ದರಿಂದ ಸಂದರ್ಶನಕ್ಕೆ ಕರೆ
ಬಂದಿತ್ತು. ಅಗ ನಿಲಯ ನಿರ್ದೇಶಕರು ನಟೇಶ್
ಇದ್ದರೋ ಅಥವಾ ಬೇರೊಬ್ಬ ಬಂಗಾಳಿ ಮಹಾಶ
ಯರಿದ್ದರೋ ನೆನಪಿಗೆ ಬಾರದು. ಆದರೆ
ಸಂದರ್ಶಕರಲ್ಲಿ ಒಬ್ಬರು ಮಾತ್ರ ಶ್ರೀ ಮಾಸ್ತಿ!

ನಾವವರ ಎದುರಿಗೆ ನಿಂತಾಗ ಅವರಿಗೆ
ನಾನು ಶಿವಮೊಗ್ಗದವನು ಎಂದು ತಿಳಿದ
ಕೂಡಲೇ ಅವರ ಅಭಿಮಾನ ಇಮ್ಮಡಿಸಿತ್ತು.

"ಅಲ್ಲೇ ಸುಖವಾಗಿರಬಾರ್ದೇ ನೀನು?
ನಿಮ್ಮಂಥೋರೆಲ್ಲ ಯಾಕ್ ಬರ್ತಿರಪ್ಪ ಇಲ್ಲಿಗೆ?"
ಎಂದು ಕಸಿಕರದಿಂದ ನುಡಿದಿದ್ದರು.

(ನಾನು ಸೆಲೆಕ್ಟ್ ಆಗಲಿಲ್ಲ. ಆ ವಿಷಯ
ಬೇರೆ!)

ಕೆಲವರಿಗೆ ಕೆಲ ಕಾಲ ಶನಿ ಕಾಟ–ಕೆಲವರಿಗೆ
ಸಾತಿ– ಇನ್ನು ಕೆಲವರಿಗೆ ಸಾಡೇಸಾತಿ. ನನಗೆ
ಜನ್ಮಶನಿ. ಯಾವ ಕೆಲಸಕ್ಕೆ ಕೈ ಹಾಕಿದರೂ
ಹಾಳು– ಸಮಯ, ಹಣ ಎಲ್ಲ ನಷ್ಟ. ಅವನು
ನನ್ನನ್ನು ಹುಟ್ಟಿದೂರೇ ಬಿಡಿಸಿ ದೇಶ–ದೇಶ
ಅಲೆಯಿಸಿ ಗುರುತು ಕಂಡರಿಯದ ಊರುಗಳಲ್ಲೆಲ್ಲ
ಬೂದಿ ಹಾಕಿಸಿ ಜಾಗ ಬಿಡಿಸಿದ. ಇದರಿಂದ
ನಾನು ಓದಿದ್ದು– ಓದಿಕೊಂಡಿದ್ದು– ವ್ಯಾಸಂಗ
ಅಷ್ಟಕ್ಕಷ್ಟೆ– ಇಂತಹ ಸ್ಥಿತಿಯಲ್ಲಿರುವ ಯಾವ
ಮನುಷ್ಯನಿಗೆ ಚಿತ್ತಸ್ವಾಸ್ಥ್ಯ ಇರುತ್ತೆ? ಹೀಗಾಗಿ
ನನ್ನದೆಲ್ಲ ಅರೆ ಬರ– ಬರೇ ಬರ!

ವಿಧಿ ನೀಡಿದ್ದ ಇಂತಹ ಒಂದು ಶಿಕ್ಷೆಯ
ಅವಧಿಯನ್ನು ೧೯೬೮–೭೬ ನಡುವೆ ಭದ್ರಾವತಿ
ಯಲ್ಲಿ ಸವೆಯಿಸುತ್ತಿದ್ದೆ.

ಅಲ್ಲಿಂದ ಒಮ್ಮೆ ಶಿವಮೊಗ್ಗೆಯಲ್ಲಿ ಸೋದ-
ರಿಯ ಮನೆಗೆ ಹೋದಾಗ ಅಲ್ಲಿ ಅವಳು "ಚಿಕ
ವೀರರಾಜೇಂದ್ರ ಓದಿದೀಯಾ?"– ಕೇಳಿದಳು.

"ಇಲ್ಲಮ್ಮ–ಈಗ ಏನೂ ಓದಲಾಗುತ್ತಿಲ್ಲ."
ಎನ್ನುತ್ತ ವಿಷಾದಿಸಿದೆ. ಅವಳಾಗಲೇ ಅದನ್ನು
ಓದಿದ್ದಳು.

"ನೀನು ಓದಲೇಬೇಕಾದ ಪುಸ್ತಕ ಅದು"–
ಎಂದು ಒತ್ತಾಯಮಾಡಿ ಯಾರಿಂದಲೋ ಎರ
ವಲು ತಂದಿದ್ದ ಅದನ್ನು ನನ್ನ ಕೈಗೆ ಹಾಕಿ
ಭದ್ರಾವತಿಗೆ ಓಡಿಸಿದಳು.

ದಾರೀಲಿ ರೈಲಲ್ಲೇ ಅದನ್ನೋದಲಾರಂಭಿಸಿದ
ನಾನು ಮನೆ ತಲಪಿದೊಡನೆಯೇ ಪುಸ್ತಕವನ್ನು
ಕೈಗೆತ್ತಿಕೊಂಡವನು ಅದನ್ನು ಮುಗಿಸಿದ
ಮೇಲೆಯೆ ಕೆಳಗಿಟ್ಟೆ.

ದಿ. ವಿ ಸೀ.ಯವರು– ನಾನವರನ್ನು ನೋಡ
ಬಂದಾಗಲೆಲ್ಲ ಏನಾದರೊಂದು ನೆವಮಾಡಿ
ಒಬ್ಬೊಬ್ಬ ಸಾಹಿತ್ಯ ದಿಗ್ಗಜಗಳ ಬಳಿ ಓಡಿಸಿ,
ಅವರೊಂದಿಗೆ ಮಾತನಾಡಿ ಬರುವ ಭಾಗ್ಯ ಒದಗಿ
ಸುತ್ತಿದ್ದರು.

ನಾನು ಗೋಕಾಕರನ್ನು ಕಂಡದ್ದು ಹಾಗೆ;

ಡಿ. ವಿ. ಜಿ.ಯವರನ್ನು ನೋಡಿದ್ದು ಹಾಗೆ; ಇನಾಂದಾರರ ಭೆಟ್ಟಿಯಾದ್ದು ಹಾಗೆ. ಆದರೆ ಅವರು ಅದೇಕೋ ಮಾಸ್ತಿಯವರ ಬಳಿ ನನ್ನನ್ನೊಡಿಸಲಿಲ್ಲ; ನಾನು ಹೋಗಲಾಗಲಿಲ್ಲ.

ಚಿಕವೀರ ರಾಜೇಂದ್ರನನ್ನೋದಿದ ನನಗೆ ಅದರ ಕತೆ, ಕಲ್ಪನೆಯ ಕುದುರೆಗೆ ಕೀಲು ಕೊಟ್ಟಿತು. ಮನಸ್ಸಿನ ತುಂಬ ಅಪ್ಪಂಗೊಳದ ಅರಮನೆ-ನಾಲ್ಕುನಾಡರ ಅರಮನೆ-ಭಗವತಿಯ ಆಶ್ರಮ-ಓಂಕಾರೇಶ್ವರ ಮಂದಿರ ಅದರ ಮುಂದಿನ ಪುಷ್ಕರಣಿ- ದೀಕ್ಷಿತ- ಲಕ್ಷ್ಮೀನಾರಾಯಣಯ್ಯ-ಪಾಣೆ ಮಂಗಳೂರಿನ ಸೂರ್ಯನಾರಾಯಣನ ಹೆಂಡತೀನ್ನ ಕದ್ದು ತಂದಿರಿಸಿದ ಸ್ಥಳ ದೇವಮ್ಮಾಜಿಯ ಮಗುವನ್ನೂ ದುರದೃಷ್ಟವಶಾತ್ ಕಳೆದ ಆ ಸ್ವಾಮಿಭಕ್ತ ಸೇವಕನನ್ನು ಶೂಲಕ್ಕೇರಿಸಿದ ಸ್ಥಳ ಮೊದಲಾದವುಗಳನ್ನೆಲ್ಲ ನನ್ನದೇ ಆದ ರೀತಿಯಲ್ಲಿ ಕಲ್ಪಿಸಿ ಮನ ತುಂಬಿಕೊಳ್ಳುತ್ತಿದ್ದೆ. ಏನಾದರೂ ಮಾಡಿ, ಒಬ್ಬರೇ ಇದ್ದಾಗ ಮಾಸ್ತಿಯವರನ್ನು ಕಂಡು ಅವರಿಂದ ಈ ವಿವರಗಳನ್ನೆಲ್ಲ ಪಡೆದು, ಕೊಡಗಿಗೆ ಹೋಗಿ ಕಣ್ಣಾರೆ ಕಂಡು ಬರಬೇಕೆಂದು ಹಂಬಲಿಸುತ್ತಿದ್ದೆ.

೧೯೭೫ರ ಏಪ್ರಿಲ್ ತಿಂಗಳಲ್ಲಿ ಮಡದಿ ಮಕ್ಕಳೊಂದಿಗೆ ಕೊಡಗಿಗೆ ಹೋಗುವ ಒಂದು ಅವಕಾಶವೂ ದಕ್ಕಿತ್ತು. ಆಗ ಮಡಿಕೇರಿ- ಭಾಗಮಂಡಲ- ನಾಪೋಕ್ಲು ಸೀಮೆಯ ವರೆಗೆ ಹೋಗಿ ಸುತ್ತಾಡಿ ಬಂದಿದ್ದೆ.

ಅರಮನೆಯನ್ನು ಈಗ ಡಿಸ್ಟ್ರಿಕ್ಟ್ ಆಫೀಸ್ ಮಾಡಿದ್ದಾರೆ. ಓಂಕಾರೇಶ್ವರ ಮಂದಿರ ಅವರ ಮುಂದಿನ ಪುಷ್ಕರಣಿ. ಅಲ್ಲಿರುವ ಹಿತ್ತಾಳಿ ಕಿಟಕಿಯ ಸರಳುಗಳ ಮೇಲಿರುವ "ಲಿಂ" ಎಂಬ ಲಿಂಗರಾಜನ ಅಂಕಿತ ಎಲ್ಲವನ್ನು ನೋಡಿದ್ದೆ. ಊರಿನ ಮುಖ್ಯ ರಸ್ತೆ ಮಹದೇವ ಪೇಟೆಯಲ್ಲಿ ಮೇಲಕ್ಕೆ ಏರುತ್ತ ಮೇಲುಸಿರು ಬಿಡುತ್ತ ತುಂಬ ದಾರಿ ಕ್ರಮಿಸಿದ ಮೇಲೆ ಅಲ್ಲೊಂದು ದಿಬ್ಬದ ಮೇಲೆ ವಿಜಾಪುರದ ಆದಿಲ್‌ಷಾಹಿ ದೊರೆಗಳ ಗುಂಬಜ ಶೈಲಿಯ ಮೂರು ಕಟ್ಟಡಗಳಿವೆ. ಇವೇ ಕೊಡಗಿನ ರಾಜರುಗಳ ಸಮಾಧಿ. ಅಬ್ಬಿ ಜಲಪಾತಕ್ಕೇ ಹೋಗಲಿ, ಭಾಗಮಂಡಲದ ಕಾವೇರಿ ಮೂಲಕ್ಕೇ ಹೋಗಲಿ- ನನ್ನ ಮನಸ್ಸು ಮಾತ್ರ ಅಲ್ಲಿಲ್ಲದ ಚಿಕವೀರ-ಬಸವ-ಭಗವತಿಯರನ್ನು ಕಾಣಲೆತ್ನಿಸುತ್ತಿತ್ತು. ಆ ದುಷ್ಟ ರಾಜ ಅವನ ದುರ್ಮಂತ್ರಿ ಕುಂಟು ಬಸವನ ಕೈಂಕರ್ಯಕ್ಕೊದಗಿದ ಹೆಣ್ಣು ಮಕ್ಕಳ ವಾಡೆಯ ಜನಾನಾ ಮ್ಯಾನೇಜರ್ ದೊಡ್ಡಮ್ಮ, ಅದಕ್ಕೆ ತದ್ವಿರುದ್ಧವಾಗಿ ಸಹನೆ-ಸದ್ವರ್ತನೆಗಳ ಸಾಕಾರ-ಮೂರ್ತಿ ಆ ಗೌರಮ್ಮಾಜಿಯನ್ನು ನೆನೆದು ಕಾಣಲೆತ್ನಿಸಿ ಮನಸ್ಸು ತುಡಿಯುತ್ತಿತ್ತು.

ನಾನಲ್ಲಿರಬೇಕಾಗಿದ್ದ ಅವಧಿ ಸಣ್ಣದು. ಚಿಕ್ಕವೀರನ ಕಾಲದ ಆ ಕತೆ- ಮಾಸ್ತಿಯವರು ಬರೆವ ಕಾಲಕ್ಕೆ- ನಡೆದೇ ೧೫೦ ವರ್ಷಗಳ ಮೇಲಾಗಿತ್ತು. ಭಾರತೀಸುತರೇನೋ ಆಗ ಅಲ್ಲಿದ್ದರು. ನನಗವರ ಪರಿಚಯುವಿಲ್ಲ. ಮಾಸ್ತಿಯವರ ಪರಿಚಯ ಪತ್ರ ತಂದೇ ಇನ್ನೊಮ್ಮೆ ಒಂಟಿಯಾಗಿ ಬಂದು ಅವನ್ನೆಲ್ಲ ನೋಡಿಹೋಗುವ ಹಂಬಲ ಹೊತ್ತು ಭದ್ರಾವತಿಗೆ ಹಿಂದಿರುಗಿದ್ದೆ. ಆ ದಿನ ಬರಲಿಲ್ಲ.

೧೯೮೩ರ ಅಂತ್ಯದಲ್ಲಿ ಒಂದು ಭಾನುವಾರ ಬೆಳಗ್ಗೆ ಗಾಂಧೀ ಬಜಾರಿನಲ್ಲಿ ಒಂದು ಸುಸಂಧಿ ಒದಗಿತು. ಶಿವಮೊಗ್ಗೆಯ ನನ್ನೊಬ್ಬ ಮಿತ್ರ ಶ್ರೀ ಎಸ್. ಕೆ. ನಾಗಪ್ಪ ನಾನು ಅಲ್ಲಿ ಷುಗರ್‌ಕೇನ್ ಜೂಸ್ ಅಂಗಡಿಯಲ್ಲಿ ಕಬ್ಬಿನ ರಸ ಎಳೆಯುತ್ತಿದ್ದಾಗ ಅವನು ಇದ್ದಕ್ಕಿದ್ದಂತೆ "ಮಾಸ್ತಿ ಬರ್ತಿದಾರೆ ನೋಡಲ್ಲಿ!" ಎಂದ ಆ ಕಡೆ ನೋಡಿದೆ.

ಒಂದಡಿ ಎತ್ತರದ ಟೋಪಿ; ಮೊಣಕಾಲವರೆಗೆ ಬರುವ ಲಾಂಗ್ ಕೋಟ್; ಕುತ್ತಿಗೆಯ ಸುತ್ತ ಒಂದು ಮಫ್ಲರ್; ಕೈಲಿ ಛತ್ರಿ ಹಿಡಿದು ಹಳೆ-ಗಾಲದ ಚಪ್ಪಲಿ ಕನ್ನಡಕಗಳನ್ನು ಧರಿಸಿ-ಬಿಸಿಲಿನ ರಝಳಕ್ಕೋ ಏನೋ-ಎಡಗಣ್ಣು ಮುಚ್ಚಿ ಅರೆ ಮುಚ್ಚಿದ ಬಲಗಣ್ಣಿಂದಲೇ ಎತ್ತಿದ ತಲೆ-ಯಾರನ್ನೋ ಏನನ್ನೋ ನೋಡುತ್ತ ಅನತಿ ದೂರದಲ್ಲಿದ್ದ ಲೈಟ್‌ಕಂಬದ ಬಳಿ ತಮ್ಮದೇ ಆದ ಲೈಟ್ ಬೀರುತ್ತ, ಡಿಲೈಟ್ ಪ್ರಸರಿಸುತ್ತಾ ನಿಂತಿತ್ತವರ ಸವಾರಿ!

ಕಬ್ಬಿನ ಹಾಲಿನ ಲೋಟ ಅಲ್ಲೇ ಬಡಿದು ಅವರನ್ನು ಸಮೀಪಿಸಿ ಪಾದಸ್ಪರ್ಶಮಾಡಿ, ನಮಸ್ಕರಿಸಿ, "ಹರಿತ್ಸ ಗೋತ್ರೋದ್ಭವ- ಖಜಾನೆ ಕೃಷ್ಣಮೂರ್ತಿ ಶರ್ಮ ಅಹಂಭೋ ಅಭಿವಾದಯಾಮಿ"

ಮಾಡಿದೆ. ಅವರಿಗದರಿಂದ ಸಂತೋಷವಾಯಿತು. ದಿ. ವಿ. ಸೀ. ಯವರ ಹೆಸರು ಹೇಳಿ ಅವರ ಕಸದ ಬುಟ್ಟಿಯ ಗುಲಾಮ– ಎಂದು ಹೇಳಿಕೊಂಡೆ.

ಪೂರ್ವೋತ್ತರ ವಿಚಾರಿಸಿದ ಅವರು– "ಸಂತೋಷ, ಒಮ್ಮೆಮನೆಗೆ ಬನ್ನಿ," ಎಂದರು.

"ನನಗೆ ನಿಮ್ಮ ಮನೆ ಎಲ್ಲಿದೆ ಅನ್ನೋದೆ ಗೊತ್ತಿಲ್ಲ ಸರ್," ಎಂದು ಹಿಂದು ಮುಂದು ನೋಡದೆ ತಟಕ್ಕನೆ ಹೇಳಿಬಿಟ್ಟೆ. ಅವಿವೇಕವಾಗಿ ಹೋಗಿತ್ತು. ನಂದೆಲ್ಲ ಹೀಗೇನೆ!

ಅವರೊಮ್ಮೆ ನನ್ನನ್ನಾಗ ಮೇಲಿಂದ ಕೆಳಗಿನ-ವರೆಗೆ ನೋಡಿದ ರೀತಿಯಲ್ಲಿ ಅವರ ಮುಖದ ಮೇಲೆ ಐಂಗಾರ್ರ ಮಾತು "ಅರವಾ"ದಲ್ಲಿ,

"ಇಂದ ಊರ್ಲೆ ಉನಕ್ಕು ಎಂಗ ವೀಟ್ಟು ತೆರಿ-ಯಾದ? ಅಡ ಪಾವಿ" ಎಂಬ ಎಕ್ಸ್‌ಪ್ರೆಷನ್ ಕಾಣಿಸಿತ್ತು.

ಗವೀಪುರದ ಕಡೆ ನಿರ್ದೇಶಿಸುತ್ತಾ– "ಹೀಗೆ ಹೋಗಿ– ಅಲ್ಲಿ ಎಡಕ್ಕೆ ತಿರುಗಿ. ನಮ್ಮದು ಬಹು ದೊಡ್ಡ ಮನೆ. ಯಾರನ್ನಾದರೂ ಕೇಳಿ. ತೋರಿಸ್ತಾರೆ-" ಎನ್ನುತ್ತಾ ನಡೆದೇಬಿಟ್ಟರು.

"ಕೇಳಿದ್ರಿದ್ರೆ ನಾನೇ ತೋರಸ್ತಿದ್‌ನಲ್ಲೊ!" ಎಂದು ನಾಗಪ್ಪನೂ ಬೈದ. ನಾವು ಇನ್ನೂ ಸ್ವಲ್ಪ ಸುಮಾರು ಹೊತ್ತು ಅಲ್ಲೇ ನಿಂತಿದ್ದೆವು. ಅಲ್ಲಿ ನಿಂತು, ಇಲ್ಲಿ ನಿಂತು, ಅವರನ್ನು ನೋಡಿ, ಇವರನ್ನು ನೋಡಿ ಅರ್ಧ ಗಂಟೆಯಾದರೂ ಇನ್ನೂ ವಿದ್ಯಾರ್ಥಿ ಭವನ್ ಮುಂದೆ ತರಕಾರಿ ಕೊಂಬ ಜನಗಳ ನಡುವೆಯೇ ನಿಧಾನವಾಗಿ ಹೋಗುತ್ತಿದ್ದರು. ಅವರು ಹೋಗುವುದೇ ಹಾಗಂತೆ! ಈಗ ಅವರ ಸವಾರಿ ಹೊರಟದ್ದು ಕ್ಲಬ್ ಕಡೆಗೆ!

ಮತ್ತಷ್ಟು ಕಾಲ ಸರಿಯಿತು. ೮೪ರ ಅಂತ್ಯ-ದಲ್ಲಿ ನಾನೊಂದಷ್ಟು ಕನ್ನಡ ಪುಸ್ತಕಗಳನ್ನು ಕೊಂಡು ಒಂದು ಮೂವತ್ತು ನಲವತ್ತು ರೂಪಾಯಿ ಉಳಿದಿತ್ತು. ಆದರಲ್ಲಿ ಮಾಸ್ತಿಯವರ ಕೆಲವು ಪುಸ್ತಕಗಳನ್ನು ಕೊಳ್ಳಬೇಕೆನ್ನಿಸಿತ್ತು. ಅವರಲ್ಲಿಗೆ ಹೋಗುವ ಕಾಲ ಒದಗಿ ಬಂದಿರಲಿಲ್ಲ.

ರಾಜಾಜಿ ನಗರದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ೧೯೮೪ರ ಜನವರಿ ೨೯ರಂದು ನಡೆದ ಬಿ. ಎಂ. ಶ್ರೀ ಶತಮಾನೋತ್ಸವ ಸಮಾರಂಭಕ್ಕೆ ವೃದ್ಧ ಸ್ತಿ ಅಧ್ಯಕ್ಷತೆಗೆಂದು ಆಹ್ವಾನಿತರಾಗಿದ್ದರು. ಕಾರ್ಯಕರ್ತರು ಕೊನೆ ಗಳಿಗೆಯಲ್ಲಿ ಅವರಿಗೆ ಆರೋಗ್ಯವಿಲ್ಲ– ಎಂದು ಘೋಷಿಸಿಬಿಡಬೇಕೆ! ಶ್ರೀ ಜಿ. ನಾರಾಯಣರು ಅಧ್ಯಕ್ಷ ಪೀಠವೇರಿದರು. ಶ್ರೀ ಬಿ. ಸಿ. ರಾಮಚಂದ್ರ ಶರ್ಮರು ಇಂಗ್ಲಿಷ್ ಗೀತೆಗಳ (ಬಿ. ಎಂ. ಶ್ರೀ. ಕೃತ) ಕುರಿತು ಭಾಷಣ ಮಾಡುತ್ತಿದ್ದರೂ ನನ್ನ ಮನಸ್ಸಿನಲ್ಲಿ ಇಲ್ಲದ ಕಳ-ಮಳ– ವೃದ್ಧರಿಗೆ ಹೇಗಿದೆಯೋ ಏನೋ... ಆದಷ್ಟು ಬೇಗ ಹೋಗಿ ಅವರನ್ನು ಭೇಟಿಯಾಗಬೇಕು ಎಂದು!

೨೯ರಂದು ಅವರ ಮನೆ ಕಡೆ ಹೊರಟೆ. ಅವರು ಹೇಳಿದ ರಸ್ತೆಯಲ್ಲೂ ತಿರುಗಿದೆ. ಯಾರನ್ನೂ ಕೇಳಲೂ ನಾಚಿಕೆ. ಕೊನೆಗೆ ಅದನ್ನು ಬಿಟ್ಟು ಅಲ್ಲೊಬ್ಬರನ್ನು ಕೇಳಿಯೇ ಬಿಟ್ಟೆ. "ಅವರ ಮನೆ ಮುಂದೇ ನಿಂತಿದೀರಲ್ರಿ!" ಎಂದವರು ಮುಖಕ್ಕೇ ರಾಚಿದರು.

"ನಮ್‌ದು ಬಹು ದೊಡ್ ಮನೆ," ಎಂದವರು ಹೇಳಿದ್ದು ನಿಜ.

ಒಳಹೊಕ್ಕು ವಿಚಾರಿಸಿದೆ. (ಉತ್ತರ ಕೊಟ್ಟವರು ಅವರ ಎರಡನೆಯ ಅಳಿಯಂದಿರು.) "ಅವರು ಮನೇಲಿಲ್ಲ. ಹೊರಗೆ ವಾಕ್ ಹೋಗಿದಾರೆ. ಅವರ ಆರೋಗ್ಯ ಅಷ್ಟು ಹೇಳಿಕೊಳ್ಳೊ ಹಾಗಿಲ್ಲ. ಅಧ್ಯಕ್ಷತೆ-ಭಾಷಣ ಯಾವ್ದಕ್ಕೂ ಬರಲ್ಲ," ಎಂದರು. ಅವರಿಗೆ ಬಹುಶಃ ನಾನದೇ ಕೆಲಸಕ್ಕೆ ಹೋಗಿದ್ದೆನೆನ್ನಿಸಿರಬೇಕು! ಬರುವುದು ತಡವಾಗಬಹುದು ಎಂದದ್ದರಿಂದ ಗಾಂಧೀ ಬಜಾರ್ ಒಂದು ಸುತ್ತು ಹಾಕಿ ಅರ್ಧ ಗಂಟೆ ಬಿಟ್ಟು ಬಂದರೂ ಇನ್ನೂ ಬಂದಿರಲಿಲ್ಲ! "ಇನ್ನೇನು ಬಂದಾರು. ಕೂರಿ," ಎಂದವರು "ನನ್ನನ್ನ—ಈಗ ಎಂ. ವೀ. ಸೀ. ಕೂತಿದಾರಲ್ಲ—ಅಲ್ಲೇ ಕೂರಿಸಿದರು. ತುಂಬ ಹೊತ್ತಾದರೂ ಬಾರದಿದ್ದುದರಿಂದ ನನ್ನ ಅದೃಷ್ಟವನು ಹಳಿಯುತ್ತ ಎದ್ದೆ.

"ಅಗೊ ಬರ್ತಿದಾರೆ ನೋಡಿ." ಎಂದವರ ಅಳಿಯ ತೋರಿಸಿದೆಡೆ ನೋಡಿದಾಗ ತುಂಬ ಸಂಭ್ರಮವಾಯಿತು ನನಗೆ! ಎರಡು ತಿರುವಿ ನಾಚೆ. ಅದೇ ವೇಷದಲ್ಲಿ. ಒಂದು ಹಿಂಡು ಮಕ್ಕಳಿಂದ ಸುತ್ತುವರಿಯಲ್ಪಟ್ಟು–ಆ ಮಕ್ಕಳೊಂದಿಗೆ ಮಾತಾಡುತ್ತಾ, ಅವುಗಳಿಗೆ ಜೇಬಿಂದ ಚಾಕ

ಲೇಟೊ ಬಿಸ್ಕತ್ತೊ ತೆಗೆದುಕೊಡುತ್ತಾ ನಿಂತಿದ್ದರು. ಅವರು ಮುಂದಡಿಯಿಟ್ಟೊಡನೆಯೆ ಆ ಮಕ್ಕಳ ಹಿಂಡೂ ಅವರನ್ನು ಹಿಂಬಾಲಿಸುತ್ತಿತ್ತು. ರಾಬರ್ಟ್ ಬ್ರೌನಿಂಗನ "ಪೈಡ್‌ಪೈಪರ್ ಆಫ್ ಹ್ಯಾಮ್ಲಿನ್" ಹೀಗೇ ಇದ್ದಿರಬೇಕು!

*

ಬೆರಣಿ ಸುಡುತ್ತಿದ್ದುದರಿಂದ ಬಂದ ದಟ್ಟವಾದ ಹೊಗೆ ಕಣ್ಣುಗಳನ್ನು ಉರಿಸಲಾರಂಭಿಸಿತ್ತು. ಕರ್ಮ ಆರಂಭವಾಗಿತ್ತು. ಅವರ ಮೊಮ್ಮಗ ಶ್ರೀ ರಾಮಭದ್ರರು ಪಾದ್ಯಾರು (ಪುರೋಹಿತರು) ಮಂತ್ರೋಚ್ಚಾರ ಮಾಡುತ್ತಿದ್ದಂತೆಲ್ಲ ಅದಕ್ಕೆ ತಕ್ಕಂತೆ ಕರಣಗಳನ್ನು ಮಾಡುತ್ತಾ ಸವ್ಯ-ಅಪಸವ್ಯ-ಜನಿವಾರ ಎಡಕ್ಕೆ-ಬಲಕ್ಕೆ ಬದಲಿಸುತ್ತಾ ಇದ್ದರು. ಅಲ್ಲಿಗೆ ಸರಿದು ಕಲ್ಲು ಹಾಸಿನ ಮೇಲೆ ಮಲಗಿದ್ದ ಮಾಸ್ತಿಯವರ ಮುಖ ನೋಡಿದೆ. ಪೈಡ್‌ಪೈಪರ್-ಅರ್ಥಾತ್-ಕಿಂದರಿಜೋಗಿ ನಸುಮಂದಹಾಸದಲ್ಲಿ ಮಲಗಿದ್ದ.

ಪಾದ್ಯಾರ ಸೂಚನೆ ಮೇರೆಗೆ ರಾಮಭದ್ರರು ಮಗ್ಗಲ ಮಡಿಕೆಯನ್ನೆತ್ತಿ ಅದರಲ್ಲಿನ ನೀರನ್ನು ನಿಧಾನವಾಗಿ ಮುಖ-ಎದೆ- ತೊಡೆ ಕಾಲುಗಳ ಮೇಲೆ ಸುರಿದು ಶವಕ್ಕೆ ಸ್ನಾನ ಮಾಡಿಸಿದರು. ಹಾಕಿದ್ದ ಷರಟನ್ನು ಕಿತ್ತೆಸೆಲಾಯಿತು. ಹಣೆ-ಎದೆ-ತೋಳು-ಹೊಟ್ಟೆಗಳ- ಮೇಲೆ ಅವರ ಶ್ರೀ ವೈಷ್ಣವ ಪಂಥದ ಲಾಂಛನ ಬಿಳಿ-ಕೆಂಪು-ಬಿಳಿ ನಾಮಗಳನ್ನು ಹಚ್ಚಿದರು.

ಉರಿಯುತ್ತಿದ್ದ ಬೆರಣಿಯಿಂದ ಹೊಗೆ ಒತ್ತಿಯೊತ್ತಿ ಬರುತ್ತಿತ್ತು. ಕಣ್ಣೆಲ್ಲ ಉರಿ! ಕಿಂದರಿಜೋಗಿ ಮನೆ ಕಾಂಪೌಂಡ್ ದಾಟಿ ಒಳ ಬರಲು ಮತ್ತರ್ಧ ಗಂಟೆ!

*

ನನ್ನ ನೋಡಿ ಪ್ರಶ್ನಾರ್ಥಕ ದೃಷ್ಟಿ ಬೀರಿದರು.

ಅಂದಿನ ಘಟನೆ ವಿವರಿಸಿ, "ಇವತ್ತು ಮನೆ ಹುಡುಕಿ ನಿಮ್ಮ ದರುಶನಕ್ಕೆ ಬಂದಿದ್ದೇನೆ," ಎಂದೆ ಕ್ಷಮೆ ಬೇಡುವದನಿಯಲ್ಲಿ.

ಮುಂದಿದ್ದ ಕುರ್ಚಿಯಲ್ಲಿ ಕೂತರು. "ಹಾಗೇನಿಲ್ಲಪ್ಪ. ನಿಮಗೆ ಈ ಮನೆ ಎಲ್ಲಿದೆ ಗೊತ್ತಿರಲಿಲ್ಲ. ಇದ್ದದ್ದನ್ನು ಹೇಳಿದ್ದೀರಿ. ಅದರಲ್ಲೇನು?" ಎನ್ನುತ್ತ ಬದಿಯಲ್ಲಿನ ಇನ್ನೊಂದು ಕುರ್ಚಿಯಲ್ಲಿ ಕೂರಲು ಸನ್ನೆ ಮಾಡಿದರು. ಮಾತಿಗೆ ತೊಡಗಿದರು. ಕತೆ-ಕಾದಂಬರಿ-ಸಾಹಿತ್ಯ-ರಾಜಕೀಯ-ಎಲ್ಲ ಬಂತು. ಶಿವಮೊಗ್ಗೆಯ ಹಳೆಯ ತಲೆಗಳು, ನವರತ್ನ ರಾಮರಾಯರ ಅಳಿಯ-ಮಗಳು-ಮೊಮ್ಮಕ್ಕಳು ಎಲ್ಲ ವಿಷಯ ಕೇಳಿದರು. ಕೊನೆಗೆ ನನ್ನ ವಿಷಯ, "ಏನು ಬಂದದ್ದು?" ಅಂತ.

ವೃದ್ಧರು ಆಗ ತಾನೇ ತಿರುಗಾಡಿ ಬಂದಿದ್ದರು. ಆಯಾಸಗೊಂಡಿದ್ದರು. ಇನ್ನು ಸ್ನಾನವೋ ಪೂಜೆಯೋ ಉಪಾಹಾರವೋ ಆಗಬೇಕು. ವಿರಮಿಸಬೇಕು. ವಿಶ್ರಾಂತಿ ತೊಗೋಬೇಕು. ಆದ್ದರಿಂದ ನನ್ನ ಆಸೆ ಆಕಾಂಕ್ಷೆಗಳನ್ನೆಲ್ಲ ಬದಿಗಿರಿಸಿ-ಕೇಳಬೇಕೆಂದಿದ್ದುದನ್ನೆಲ್ಲಾ ಕೈಬಿಟ್ಟು, "ಆರೋಗ್ಯ ಸರಿಯಿಲ್ಲವೆಂದು ವಿದ್ಯಾವರ್ಧಕ್‌ನಲ್ಲಿ ತಿಳೀತು. ಅದಕ್ಕೇ ನಿಮ್ಮನ್ನು ನೋಡಿ ಹೋಗೋಣ ಅಂತ ಬಂದೆ. ನಿಮ್ಮ ಕೆಲವು ಪುಸ್ತಕ ಕೊಳ್ಳೋಣ ಅಂತ ಬಂದೆ." ಎಂದೆ.

"ಯಾವ ಪುಸ್ತಕಗಳು?" ಎಂದವರೇ "ಶೇಷಾದ್ರೀ" ಎಂದು ಕೂಗಿದರು. ಇವರು ಮೊದಲ ಅಳಿಯಂದಿರು. ಆ ಕೂಗಿಗೆ ಅವರು ಪ್ರತ್ಯಕ್ಷರಾದರು.

"ನೋಡಪ್ಪ, ಇವರು ಯಾವ್ದೋ ಪುಸ್ತಕ ಕೇಳ್ಕಂಡು ಬಂದಿದಾರೆ. ಇವೆಯಾ ನೋಡ್ತಿಯಾ?" ಎಂದರು.

ನಾನವರ ಕೈಲಿ ನನಗೆ ಬೇಕಾಗಿದ್ದ ಪುಸ್ತಕಗಳ ಪಟ್ಟಿ ಇರಿಸಿದೆ.

ಅವರು ಅದನ್ನು ನೋಡುತ್ತಾ "ಚಿಕ ವೀರ ರಾಜೇಂದ್ರ; ಚನ್ನಬಸವನ ನಾಯಕ; ಸಾರಿ! ಇಲ್ಲಾಂತ ಕಾಣತ್ತೆ. 'ಸಣ್ಣಕತೆಗಳು' ಇವೆ. 'ಸುಬ್ಬಣ್ಣ' ಕೊಡ್ತೀನಿ" ಎನ್ನುತ್ತ ಒಳಕ್ಕೆ ಹೋದರು.

"He is my first son-in-law you know! ನನ್ನ ಬರಹ ಪುಸ್ತಕ ಎಲ್ಲದರ ವ್ಯವಹಾರಾನೂ ಅವರೇ ನೋಡೋದು," ಎನ್ನುತ್ತಾ, ಮಾಸ್ತಿ, "ಏನು ಮಾಡೋದಪ್ಪ! ಈಗ ಕಾಗದ, ಪ್ರಿಂಟಿಂಗು, ಬೈಂಡು, ಮಾರಾಟಗಾರರ ಕಮಿಷನ್ ಎಲ್ಲಾ ಏರಿಬಿಟ್ಟಿವೆ. ಆದ್‌ರಿಂದ ಪುಸ್ತಕಗಳು ಮೊದಲಿನ ಬೆಲೆಗೆ ದೊರೆಯೋದು ಕಷ್ಟ. ಆದರೆ

ನೀನೂ ಈಗ ಕಷ್ಟದಲ್ಲಿದೀಯ. ನನ್ ಪುಸ್ತಕಗಳ ಬೆಲೆಯೂ ಮೊದಲಿಗಿಂತ ಜಾಸ್ತಿ. ಅಷ್ಟು ಹಣ ಇದೆಯಾಪ್ಪ?" ಎಂದರು.

'ಇದೆ' ಎಂದೇನೋ ತಲೆಯಾಡಿಸಿದೆ. 'ಕಸ್ತೂರಿ'ಯಿಂದ ಬಂದ ಸಂಭಾವನೆಯಲ್ಲಿ ಕಾರಂತರ 'ಸ್ಮೃತಿ ಪಟಲದಲ್ಲಿ' ಎರಡು ಸಂಪುಟಕ್ಕೆ ೬೨ ರೂ. ಅನಂತ ನಾರಾಯಣರ 'ಹೊಸಗನ್ನಡದ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯಪ್ರಭಾವ' ೨೦ ರೂ. ಕೊಟ್ಟು ಕೊಂಡಿದ್ದೆ. ಈಗಿನ ಕನ್ನಡ ಪುಸ್ತಕಗಳ ಬೆಲೆಯೂ ಏರುತ್ತಿದೆ. ಕೊಳ್ಳಲಾಗುತ್ತಲೇ ಇಲ್ಲ. ಇನ್ನು ಇವರ ಪುಸ್ತಕಗಳು ಹೇಗೋ! ಜೇಬಲ್ಲಿರೋಷ್ಟು ಹಣ ಮರ್ಯಾದೆ ತೆಗಿಯುತ್ತೋ ಉಳಿಸುತ್ತೋ ನೋಡಬೇಕು ಎಂದು ಚಿಂತಿಸುವ ಹಾಗಾಯಿತು.

ಅಷ್ಟರಲ್ಲಿ "You are lucky." ಎನ್ನುತ್ತಾ ಪೇಜಾವರ್ತಿಗಳು ಬಂದರು. "'ಚನ್ನ ಬಸವನಾಯಕ' 'ಚಿಕವೀರ ರಾಜೇಂದ್ರ' ಎರಡೂ ಸಿಕ್ಕಿವೆ. 'ಸುಬ್ಬಣ್ಣ' 'ಸಣ್ಣಕತೆಗಳು' ಎರಡೂ ಹಳೆಯ ಪ್ರಿಂಟು. ಏನೂ ತಿಳಿಯಬಾರದು." ಎನ್ನುತ್ತಾ ನಮ್ಮ ಮುಂದೆ ಆ ಪುಸ್ತಕಗಳನ್ನು ಹರವಿ ಬಿಲ್ ಹಾಕಲಾರಂಭಿಸಿದರು. ಸಣ್ಣಕತೆಗಳು ಒಂದು ೧೯೩೭ರ ಮುದ್ರಣ ೦-೧೨-೦ ಕ್ರಯ. ಅದನ್ನು ಹೊಡೆದು ರೂ. ೨-೫೦ ಎಂದು ತಿದ್ದಲಾಗಿತ್ತು. ಮತ್ತೊಂದು ೧೯೪೦ರ ಮುದ್ರಣ. ೦-೧೪-೦ ಕ್ರಯ. ಅದನ್ನೂ ರೂ. ೨-೫೦ಕ್ಕೆ ಏರಿಸಲಾಗಿತ್ತು. ಐದೈದು ರೂಪಾಯಿ ಹಾಕಿದ್ದರೂ ನನಗೆ ಕಷ್ಟವಾಗುತ್ತಿರಲಿಲ್ಲ. ನಾನು ಬಾಲ್ಯದಲ್ಲಿ ನೋಡಿದ್ದ ಪುಸ್ತಕದ ತರಹದ್ದೇ ಕಾಗದ-ಮುದ್ರಣ-ರಟ್ಟು ಎಲ್ಲ! ಅದರ ಹಾಳೆ ತೆರೆದರೆ ಅವೇ ಕತೆಗಳು! ಬಾಲ್ಯ ಮರುಕಳಿಸಿತು ನನಗೆ!

ಹಣ ಪಾವತಿ ಮಾಡಿ (ಎಲ್ಲಾ ಒಟ್ಟು ಕೇವಲ ಮೂವತ್ತು ರೂಪಾಯಿ!) ಅವರ ಹಸ್ತಾಕ್ಷರಕ್ಕೆಂದು ಒಳಪುಟಗಳನ್ನು ತೆರೆದಿರಿಸಿದೆ.

"ಯಾವುದಾದರೂ ಒಂದಕ್ಕೆ ಮಾಡ್ತೀನಪ್ಪ," ಎಂದಿದ್ದರಿಂದ ಪುಸ್ತಕವನ್ನು ಅವರ ಆಯ್ಕೆಗೇ ಬಿಟ್ಟೆ.

ಅವರು 'ಚಿಕ ವೀರರಾಜೇಂದ್ರ'ವನ್ನಾರಿಸಿ ಅದರ ಒಳಪುಟದಲ್ಲಿ ಸುಂದರವಾದ ಬರಹದಲ್ಲಿ ಮಾಸ್ತಿ. ೨೯-೧-೮೪ ಎಂದು ಬರೆದು ಹಿಂದಿರುಗಿಸಿದರು.

"ನೀವಿನ್ನೂ ಚಿಕ್ಕವರು. ಜೀವನದಲ್ಲಿ ಪೆಟ್ಟು ತಿಂದಿರಬಹುದು. ಆದರೆ ಅದಕ್ಕಾಗಿ ನಿರಾಶರಾಗಬೇಡಿ. ನನ್ನೋಡಿ ಈ ವಯಸಿನಲ್ಲೂ ಇಷ್ಟು ಆಪ್ಟಿಮಿಸ್ಟಿಕ್ ಆಗಿರೋವಾಗ ನೀವ್ಯಾಕೆ ಆಗಬಾರದು?" ಎನ್ನುತ್ತಾ ಬೆನ್ನು ತಟ್ಟಿ ಕಳುಹಿಸಿಕೊಟ್ಟರು.

ಅದಾದ ಆರೇ ತಿಂಗಳಿಗೆ 'ಚಿಕವೀರ ರಾಜೇಂದ್ರ' ಅವರಿಗೆ 'ಜ್ಞಾನಪೀಠ ಪ್ರಶಸ್ತಿ' ತಂದೊಪ್ಪಿಸಿಬಿಡಬೇಕೆ!

ತಕ್ಷಣ ಅದು ರಾಷ್ಟ್ರಾದ್ಯಂತ ಸುದ್ದಿಯಾಯಿತು. ಆ ಕಾದಂಬರಿಗೆ ಎಲ್ಲಿಲ್ಲದ ಬೆಲೆ ಬಂದು ಅಸಂಖ್ಯಾತ ಪ್ರತಿಗಳು ಮಾರಾಟವಾಗಿ ಹೋದವು. ಅದು ನಾಟಕವೂ ಆಯಿತು. ಪುಟ್ಟಣ್ಣ ಕಣಗಾಲರು ಅದನ್ನು ಚಲನಚಿತ್ರ ಮಾಡುವ ಹಕ್ಕನ್ನೂ ಪಡೆದರು.

ಪ್ರಶಸ್ತಿ ಸ್ವೀಕರಿಸಲು ಅನಾರೋಗ್ಯದಿಂದ ಮಾಸ್ತಿ ಅಲ್ಲಿಗೆ ಹೋಗಲಿಲ್ಲ. ಜ್ಞಾನಪೀಠವೇ ಅಲ್ಲಿಂದ ಇಲ್ಲಿಗೆ ಬಂದು ಒಂದು ವರ್ಣರಂಜಿತ ಸಂಭ್ರಮಭರಿತ ಸಮಾರಂಭದಲ್ಲಿ ಆ ಪ್ರಶಸ್ತಿಯನ್ನು ಮಾಸ್ತಿಯವರಿಗರ್ಪಿಸಿ ತನ್ನನ್ನು ತಾನು ಗೌರವಿಸಿಕೊಂಡಿತು. ಮಾಸ್ತಿಯವರಿಗೆ ಗೌರವದ ಮೇಲೆ ಗೌರವ! ಸನ್ಮಾನದ ಮೇಲೆ ಸನ್ಮಾನ!!

ಆ ಪುಸ್ತಕಗಳನ್ನು ಮನೆಗೆ ತಂದವನೇ ಒಂದು ವಾರ ಎಲ್ಲೂ ಹೊರಕ್ಕೆ ಹೋಗದೆ ಒಂದೊಂದೇ ನಿಡು ಕೂಡಲ್ಲಿ ಕುಳಿತು ಓದಿ ಮುಗಿಸಿದ್ದೆ. ಬಾಲ್ಯದಲ್ಲಿ ಓದದೆ ಉಳಿದಿದ್ದ ಇತರ ಸಣ್ಣಕತೆಗಳನ್ನು ಈಗ ಓದುವ ಭಾಗ್ಯ ಬಂದಿತು. ಒಂದು ಸಂಗ್ರಹದಲ್ಲಿರುವ 'ಇನ್ನೊಂದು ಕತೆ'ಯಲ್ಲಿ ಬರುವ ಕೂರೇಶ ಭಟ್ಟರು ಮತ್ತವರ ಬಾಲ್ಯದ ಶಿಕ್ಷಣ ರಕ್ಷಣೆಯ ಹೊಣೆ ಹೊತ್ತ ಅವರ ತಾಯಿ. ಆ ಧಾರ್ಮಿಕ ಮತ್ತು ಸಾಂಪ್ರದಾಯಿಕ ವಾತಾವರಣಗಳು, ಅಂತಹುದೇ ಆದ ಪರಿಸರದಲ್ಲಿ ಬೆಳೆದು ಬಂದ ಎಂತಹ ವ್ಯಕ್ತಿಗೂ ಪ್ರಿಯವಾಗಬಲ್ಲವು. ಆಗಿನ ದಿನಗಳಲ್ಲಿ ಚಾಲ್ತಿಯಲ್ಲಿದ್ದ ಅಹಿಂಸಾ ವ್ರತವೇ ಮಾಸ್ತಿಯವರ ವ್ರತ. 'ಪ್ರಿಯಂ ಬ್ರೂಯಾತ್-ನ ಬ್ರೂಯಾತ್ ಸತ್ಯಮಪ್ರಿಯಂ'

ಮಾರ್ಗ: ಈ ನಾಡಿನ ನೆಲದಲ್ಲಿ ಆಗಿ ಹೋದ ಮಹರ್ಷಿಗಳು, ಬೋಧಿಸಿ ಹೋದ- "ಅನನ್ಯೋದ್ವೇಗ ಕಾರಿಣೀಂ ಮೃದು ಕರ್ಮಾಣಿ ಸೇವತೆ"- ಮಾರ್ಗ. ಯಾರಿಗೆ ಏನನ್ನು ಹೇಳಬೇಕಾದರೂ ಅನ್ಯರಿಗೆ ಉದ್ವೇಗಕಾರವಾಗುವ ರೀತಿಯಲ್ಲಿ ಹೇಳಬಾರದು- ಎಂಬ ಹಿರಿಯರ ಮಾರ್ಗವನ್ನು ಅನುಸರಿಸಿದ ಅವರು ತಾವು ಚಿತ್ರಿಸಿದ ಕಣಕೇಶ ಭಟ್ಟರು ಮತ್ತವರ ತಾಯಿಯ ಗುಣ ಶೀಲ-ಗಳಲ್ಲಿ ಕೂಡ ಅದೇ ಅಂಶಗಳನ್ನು ತುಂಬಿರುವುದು ಕಂಡುಬರುತ್ತದೆ. ಭಟ್ಟರು ಮತ್ತವರ ತಾಯಿ ದೇವರ ಪೂಜೆ ಮಾಡುವಲ್ಲಿ ಪರಿಚಾರಕನಿಗೆ ಪಾಠ ಕಲಿಸಿದ ರೀತಿ ಈಗಿನ ಗುರು ಸಂತತಿಗೆ. ಮಾತಾ ಪಿತೃಗಳಿಗೆ ಆದರ್ಶನೀಯ! ಅನುಕರಣೀಯ!

"ದೇವನು ತನ್ನ ಹೊಟ್ಟೆಯಲ್ಲಿ ಬ್ರಹ್ಮರುದ್ರ ಇಂದ್ರಾದಿ ಸಮಸ್ತ ದೇವತೆಗಳನ್ನೂ ಅಖಿಲ ಬ್ರಹ್ಮಾಂಡವನ್ನೂ ಧರಿಸಿದ್ದಾನಂತೆ. ಅಂತಹ ಪರಮಾತ್ಮ ಸ್ವರೂಪವನ್ನು ವೇದಗಳು ಹೇಳಿದ ರೀತಿ ವಿಚಿತ್ರವಾಗಿದೆ. ಅವನು ನವಣೆಯ ಊಗಿನ ತುದಿಯಲ್ಲಿ ಕುಳಿತು ಓಲಾಡುತ್ತಿದ್ದಾನಂತಲ್ಲ!" ಎಂದು ದೊನ್ನೆ ಹಚ್ಚುತ್ತಿರುವ ಭಟ್ಟರು ಹೇಳುವಾಗ ದೇವರ ಪೂಜೆ ಮಾಡುವ ಪರಿಚಾರಕನ ಅಜ್ಞಾನ ಅಳಿಯುತ್ತದೆ.

"ನಿನ್ನ ಪೂಜೆಗೂ ಅವನ ಪೂಜೆಗೂ ವ್ಯತ್ಯಾಸ ತಿಳಿಯಿತೇ ಅಪ್ಪಾ?" ಎಂದು ಭಟ್ಟರ ತಾಯಿ ಆ ಪರಿಚಾರಕನನ್ನು ಮಾತ್ರ ಕೇಳಿದಂತಲ್ಲ, ನಮ್ಮಂತಹರಿಗೆಲ್ಲ ಕೇಳಿದಂತಹ ತಾಯಿಯಾಗಿ ಕಾಣಿಸುತ್ತಾರೆ. ವೆರಿ ವೆರಿ ಬ್ರೀಫ್ ಮತ್ತು ಎಲೆಕ್ಟ್ರಿಕ್ ಸ್ಪೀಡ್ ಪೂಜಾ-ಸಂಧ್ಯಾಗಳನ್ನು ಶ್ರದ್ಧೆಯೇ ಇಲ್ಲದೆ ಮಾಡಿ ಕಾಲ ಕಳೆದುಕೊಂಬ ಅನೇಕ ಆಧುನಿಕರ ಕಣ್ಣು ತೆರೆಸುವ ತಾಯಿ ಆಕೆ! ಎಂದೆಂದೂ ಮರೆಯಾಗದ ಎರಡು ಪಾತ್ರಗಳು ಅವು.

*

"೨೨೦೭೮೯ಕ್ಕೆ ನಾವು ಫೋನ್ ಮಾಡಿದ್ದು ಕಾರ್ಪೊರೇಷನ್‌ನವರು ಕ್ಲೋಸ್ಡ್ ಬಾಡಿ-ಚಿಕ್ಕ ವ್ಯಾನ್ ಕಳುಹಿಸಿಬಿಟ್ಟಿದಾರೆ. ಓಪನ್ ಬಾಡಿ ವ್ಯಾನ್ ಬೇಕೂಂತ ನಾವು ಕೇಳಿದ್ದು" ಎಂದು ಕೂಗಾಟ ಎದ್ದಿತು. ಆಲೋಚನಾ ಧಾಟಿಗೆ ಮತ್ತೆ ಭಂಗ. "ಹಿಂದಕ್ಕಳಿಸಿ ಅದನ್ನು... ವೀ ಡೋಂಟ್ ವಾಂಟ್ ಇಟ್. ಸೆಕ್ರೆಟರಿಯಟ್‌ಗೆ ಫೋನ್ ಮಾಡಿದೀವಿ. ಅಲ್ಲಿಂದ ಫುಲ್ಲೀ ಡೆಕೋರೆಟೆಡ್ ಓಪನ್ ಟೆಂಪೋ ಬರುತ್ತೆ," ಅಂತ ಮತ್ತೊಬ್ಬರು ಯಾರೋ ಉತ್ತರ ಕೊಟ್ಟರು.

ಆ ಸಂದೇಶ ಅದಕ್ಕೆ ಮುಟ್ಟಿ ೨೨೦೭೮೯ ಅದೇ ಶಬ್ದ ಮಾಡುತ್ತಾ ಓಡಿ ಮರೆಯಾಯಿತು. ಆ ವೇಳೆಗೆ ಮತ್ತೊಮ್ಮೆ ಜನರ ಗುಂಪು ನುಗ್ಗಿತು. ವೀರಪ್ಪ ಮೊಯ್ಲಿ, ನಿಸಾರ್ ಅಹಮ್ಮದರೊಂದಿಗೆ ಮಾತಾಡುತ್ತಿದ್ದರು. ಡಾ. ಹಾ. ಮಾ. ನಾಯಕ್ ಬಂದರು... ಇನ್ನೂ ಯಾರಾರೋ ರಾಜಕಾರಣಿ-ಗಳು... ಟಿ. ವಿ. ಕ್ಯಾಮರಾ... ಸಿನಿ ಕ್ಯಾಮರಾ ಮತ್ತವರ ಪರಿವಾರ ಅವರದೊಂದಿಗೆ ಜನ ನುಗ್ಗಿ ನನ್ನ ಪಕ್ಕಕ್ಕೆ ಸರಿಸಿದರು.

"ಏನಾದರೂ ಮಾಡಿಕೊಳ್ಳಿ. ಅಲ್ಲಿದೆ ನಮ್ಮ ಮನೆ; ಬಂದೆನಿಲ್ಲಿಗೆ ಸುಮ್ಮನೆ" ಎಂಬ ಭಾವನೆ ಸೂಸುವಂತೆ ಮಾಸ್ತಿಯವರು ಅಲ್ಲಿ ಹಾಸುಗಲ್ಲ ಮೇಲೆ ಮಲಗಿದ್ದರು.

•

ರಾಜಕಾರಣಿಗಳು- ರಾಜಕಾರಣ!

ಬೆಂಗಳೂರಿಂದ ತುಮಕೂರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ನೆಲಮಂಗಲದ ನಂತರ ನಿಜಗಲ್ಲು ಗುಡ್ಡ ಬರುತ್ತದೆ; ಅದರ ಮೇಲೆಯೇ ಒಂದು ಕೋಟೆಯ ಗೋಡೆಗಳು ಬುರುಜುಗಳು ಕಾಣಿಸುತ್ತವೆ...

ಪರಮ ಚಾಂಡಾಲ ಕಸ್ತೂರಿನಾಯಕ ಕಣ್ಮುಂದೆ ಬಂದ.

ಇಂದು ನಮ್ಮ ನಾಡಿನ ರಾಜ್ಯ ರಾಜ್ಯಗಳಲ್ಲಿ ಅಧಿಕಾರಕ್ಕಾಗಿ ದೊಂಬರಲಾಗ ಹಾಕುತ್ತ ಕ್ಷಣಕ್ಕೊಂದು, ಗಳಿಗೆಗೊಂದು ಕೂರಲುಗಿನ ಕೂರಂಬುಗಳನ್ನು ಸೃಷ್ಟಿಸಿ "ವಿರೋಧಕ್ಕಾಗಿಯೇ ವಿರೋಧ" ನೀತಿ ಅನುಸರಿಸುತ್ತಾ, ಯಾವೊಂದು ವ್ಯಕ್ತಿ- ಪಕ್ಷಗಳಲ್ಲಿ ತತ್ವದಲ್ಲಿ ನಿಷ್ಠೆ ಇಲ್ಲದೆ ವಿಜೃಂಭಿಸುತ್ತಿರುವ ರಾಜಕಾರಣಿಗಳ Fore-runner ಈತ! ಅನ್ನವಿಟ್ಟವರಿಗೇ ದ್ರೋಹ ಮಾಡಿ ರಾತ್ರಿ- ಅವೇಳೆಯಲ್ಲಿ ಕೋಟೆಯ ಬಾಗಿಲು ತೆರೆದು ಶತ್ರುವನ್ನು ಒಳಹೊಗಿಸಿ

ಕೊಂಡ ಗುರು ಘಾತಕ. ತನ್ನ ಅಕ್ಕನನ್ನು ಮರಾಟರ ಮುಖಂಡ ಎತ್ತಿಕೊಂಡಾದರೂ ಹೋಗಲಿ. ಹೊತ್ತುಕೊಂಡಾದರೂ ಹೋಗಲಿ, ನಿಜಗಲ್ಲಿನ ಸಿಂಹಾಸನ ಮಾತ್ರ ತನಗೆ ದಕ್ಕಿ ಬಿಡಬೇಕು ಅಷ್ಟೆ! ಆ ಪಾರ್ಟಿಯೇನು ಈ ಪಾರ್ಟಿ ಏನು. ಮುಖ್ಯಮಂತ್ರಿ ಸ್ಥಾನ ಮಾತ್ರ ನನಗೆ ದಕ್ಕಿಬಿಡಬೇಕು ಎಂಬ ಈಗಿನವರ ಆಟವೂ ಅದೇ ಅಲ್ಲವೇ?

ಅಲ್ಲಿ ಮಲಗಿದ್ದ ಮಾಸ್ತಿಯವರ ಮುಖವನ್ನ ಮತ್ತೊಮ್ಮೆ ನೋಡುವ ಹಾಗಾಯಿತು. ಆದರೆ ಅಲ್ಲೇನೋ ಕರ್ಮ ಕಲಾಪ ನಡೆಯುತ್ತಿತ್ತು. ದೂರದಿಂದಲೇ ಎಡ ಪಾರ್ಶ್ವಕ್ಕೆ ವಾಲಿದ್ದ ಅವರ ಮುಖ ಕಾಣಿಸಿತು.

ನನ್ನ ಮನಸ್ಸು ಅವರ "ಸಾರಿಪುತ್ರನ ಕೊನೆಯ ದಿನ"ಗಳ ಕಡೆ ಹರಿಯಿತು. ಬುದ್ಧನ ಮರಣಾ ನಂತರ ಸಾರಿಪುತ್ರನಾಗಿದ್ದ ನರಸಿಂಹ ಶರ್ಮ ತನ್ನ ಪೂರ್ವಾಶ್ರಮದ ಗೋದಾವರೀ ತೀರದ ಊರಿಗೆ ಬಂದು ಮಡದಿ ಮಗುವನ್ನು ಸಂದರ್ಶಿಸುವ ಚಿತ್ರ ಬುದ್ಧದೇವ ತನ್ನ ಬಾಳಿನ ಅರ್ಥ ಸಿದ್ಧಿಸಿ ಸಿದ್ಧಾರ್ಥನಾಗಿ ಮತ್ತೊಮ್ಮೆ ಕಪಿಲವಸ್ತುವಿಗೆ ಬಂದಾಗ ಭೇಟಿಯಾಗುವ ಯಶೋಧರೆ ರಾಹುಲರ ಚಿತ್ರದಂತೆಯೇ ಇದೆ ಯಲ್ಲವೆ!

ಮಾಸ್ತಿಯವರ ಈ ಕೊನೆ ಗಳಿಗೆಯಲ್ಲಿ ಅವರ "ಕವಿಯ ಬಾಳಿನ ಕೊನೆಯ ದಿನಗಳು" ನೆನಪಿಗೆ ಬಾರದಿದ್ದಾವೆ?

ಅತಿಮಾನವರು ಅತಿ ಆದರ್ಶವಾದಿಗಳಿಂದ ತುಂಬಿದ ರಾಮಾಯಣ ಪಾತ್ರಗಳಿಗಿಂತ ನಮ್ಮಂತೆಯೆ ದೌರ್ಬಲ್ಯಗಳಿಂದ ಕೂಡಿದ ಮಹಾಭಾರತದ ವ್ಯಕ್ತಿಗಳು ಕೈಲಾಸಂ ಅವರಿಗೆ ತುಂಬ ಇಷ್ಟವಾದವರು. ಅದನ್ನು ಅವರೇ ವಿವರಿಸುತ್ತಾ, "Look at that Panchali! ಆಗಲೇ ಐವರು ಗಂಡಂದಿರಿದ್ದರೂ, I wish I had that Karna also-ಎಂದವಳು. ಆದ್ದರಿಂದ ನಮಗೆ ನಮ್ಮಂತೆ ದೌರ್ಬಲ್ಯಗಳಿರುವವರೇ ಪ್ರಿಯ."

ಅವರಂತೆ ಮಾಸ್ತಿ ಚಿತ್ರಿಸಿರುವ ಗುಮಟೆ ಅಂತಹ ವಿರಕ್ತ ಜೀವನ ಬಾಳಿದವನಲ್ಲ! ತನ್ನ ವಸಂತಕಾಲದಲ್ಲಿ ಹಲವಾರು ಹೆಣ್ಣುಗಳ ಸಂಗ-ಸುಖ-ಸಹವಾಸಗಳನ್ನನುಭವಿಸಿದವ. ಸುಖಿಸಿದವ! ಆದರೆ ಜುಲೈಕಾ ಗಂಟು ಬಿದ್ದಾಗ ಅವಳಿಂದ ದೂರವಾದ ರೀತಿ, ಎಥಿಕ್ಸ್‌ಗಾಗಿ ಅವನ ಮನಸ್ಸಿನಲ್ಲಿ ನಡೆವ ತುಮುಲ-ದ್ವಂದ್ವಗಳು ಅದ್ಭುತ.

ಮಾಸ್ತಿಯವರ ಬರಿಯ ಪುರುಷ ಪಾತ್ರಗಳು ಮಾತ್ರ ನಿಮಗೆ ಇಷ್ಟವಾದುವೆ? ನಾವೇನು ಮಾಡಿದೆವು ಎನ್ನುತ್ತ ಚನ್ನಬಸವ ನಾಯಕ ಮತ್ತು ಚಿಕವೀರ ರಾಜೇಂದ್ರ ಕಾದಂಬರಿಗಳ ನಾಯಿಕೆಯರು ನನ್ನ ತರುಬಿದರು, ಕಣ್ಣು ಹೊಸಕಿ ನೋಡಿದೆ. ಗೌರಮ್ಮಾಜಿ!

ಎಂತಹ ಸತ್ವಪೂರ್ಣ ತ್ಯಾಗಮಯಿ ತುಂಬ ಆದರ್ಶ ಪಾತ್ರ ಆಕೆಯದು!

ಸದಾ ಕುಡಿತ: ಕುಪಿತ ಕಾಮಿಯಾದ ಗಂಡನನ್ನು ತಾಳಿಕೊಂಡು ಬಾಳಿದ ಆಕೆ. ಅಂತಹ ಗಂಡನನ್ನೂ ರಾಜ್ಯವನ್ನೂ ನಿಭಾಯಿಸಿಕೊಂಡು ಹೋದ ರೀತಿ. ದುಷ್ಟ ಮಾತುಗಳನ್ನಾಡಿ ಹಾದರದ ಅಪವಾದವನ್ನು ಹೊರಿಸಿ ಬೈದ ಆ ಚಾಂಡಾಲ ಹಲವು ಬಾರಿ ಆಕೆಯನ್ನು ಕೈ ಎತ್ತಿ ಹೊಡೆದೂ ಇದ್ದ. ಆದರೂ ತನ್ನ ನಾದಿನಿ ದೇವಮ್ಮಾಜಿಗೆ, "ಮರ ಉಳಿಸಿ ಹಣ್ಣು ತಿನ್ನುವ" ಸಹನೆ ಮಂತ್ರವನ್ನು ಬೋಧಿಸುತ್ತಾಳಾಕೆ! ಪತಿಯ ಮನೆ-ಮನೆತನದ ಮರ್ಯಾದೆಯನ್ನು ಕಾಯುವ ಆ ತಾಯಿ ಈಗ ನೋಡಲಾದರೂ ಸಿಕ್ಕಿಯಾರೆ!

"ಅರಮನೆಗೆ ಬಂದ ಹೆಣ್ಣಿಗೆ ಈ ಅವಮಾನ ಕಟ್ಟಿಟ್ಟದ್ದೇ ತಾಯಿ. ನಾನುಂಡುದಲ್ಲವೆ ಇದೆಲ್ಲ! ನಿಮ್ಮ ಮಾವ ನನ್ನ ಕಣ್ಣೆದುರಿಗೇ ಬೇರೆಯವರೊಂದಿಗೆ ಸದರ ಮಾಡಿದರು. ಈ ಮಗನೇ ಮೇಲು; ಬೇರೆ ಕಡೆ ಆಡಿ ಬರತಾನೆ. ತಾಳಿಕೋ," ಎಂದು ಸಾಂತ್ವನಗೊಳಿಸುವ ಈ ತಾಯಿ ಬರಿಯ ತಾಯಿಯಲ್ಲ. ಚಿಕವೀರನಂತಹ ಚಾಂಡಾಲ ಸಹಸ್ರರ ಹೃದಯಗಳಲ್ಲಿ ವಿವೇಕದ ದೀಪ ಹಚ್ಚುವ ಮಹಾತಾಯಿ! ಕ್ಷಮಯಾ ಧರಿತ್ರಿ!

ಅಂತಹ ಆಕೆಗೆ, ಪರಹಿಂಸೆ, ಪರಪೀಡನೆ, ಅತಿ ಕುಡಿತ, ಅತಿ ಕಾಮ ಪೀಡಿತ, ಬಹುಜನ ಸತಾಯ,

ಬಹುಜನ ಹತಾಯ, ಬಹುಜನ ದುಃಖಾಯ ಮಂತ್ರ ಜಪಿಸುವ, ಇತರರಿಗೆ ಕೊಡಬಹುದಾದ ಚಿತ್ರಹಿಂಸೆಯಲ್ಲಿ– ಅದರ ಊಹೆಯಲ್ಲಿ ಸುಖ ಕಾಣುವ ಯಮಸ್ವರೂಪಿ ಪಾಪಿ, ಪತಿಯೆ?

ಆಕೆಗೆ ಬಂದ ಮರಣವಾದರೂ ಎಂಥದು! ಕಾಶಿ ವಿಶ್ವೇಶ್ವರನ ಸನ್ನಿಧಾನದಲ್ಲಿ ಸಂಭವಿಸಿದ ಆಕೆಯ ಅಂತ್ಯವನ್ನು ಓದಿದ. ಹೃದಯವಂತಿಕೆ ಯುಳ್ಳ ಯಾವ ಪಾಪಿಯಾದರೂ ಕಣ್ಣೀರು ಮಿಡಿಯದಿದ್ದಾನೆಯೆ !

ತನ್ನ ದಾಂಪತ್ಯದ ಬಾಳಿಗೆ ಅಡ್ಡಗಲ್ಲಾಗಿದ್ದವ ರೆಂದು, ತನ್ನ ಸುಖವನ್ನು ಕಿತ್ತುಕೊಂಡುವರೆಂದು ಎಂದೂ ಮತ್ಸರಿಸದೆ, ರಾಜ್ಯತ್ಯಾಗ ಮಾಡುವ ಮುನ್ನ ಹೆಣ್ಣುವಾಡಿಯ ಹೆಣ್ಣು ಮಕ್ಕಳನ್ನು ಕುರಿತು, "ಅವು ಬೀದಿಯ ಮೇಲೆ ಅಲೆಯಬಾರ ದಲ್ಲ! ಅದನ್ನ ನೋಡಿಕೊಂಡ ಪುಣ್ಯ ನಮಗೂ ಇರಲಿ," ಎಂಬ ಆ ದೇವೀಸ್ವರೂಪಿಗೆ ಕೋಟಿ ಕೋಟಿ ನಮಸ್ಕಾರ.

ಏಳು ಜನ್ಮದ ಸುಖದಿಂದ, ಮೂರು ಜನ್ಮದ ಕಷ್ಟದಿಂದ, ಜೀವ ಉದ್ಧಾರವಾಗತ್ತೆ. ಕಷ್ಟಪಟ್ಟ ಜೀವಕ್ಕೆ ಬೇಗ ಉದ್ಧಾರ ದೊರೆಯುತ್ತೆ–ಎಂಬ ದೃಢ ನಂಬಿಕೆಯಿಂದಲೇ ಆಕೆ ಎಲ್ಲ ಕಷ್ಟಗಳನ್ನೂ ನುಂಗಿ ನಂಜುಂಗೊರಳೆಯಾಗಿ ಸಹಿಸಿ "ಕಷ್ಟವನ್ನು ಕೊಡುತ್ತಿರುವ ದೇವರು ಬೇಗ ಬಿಡುಗಡೆ– ಕೊಡಲಿ–ಎಂದು ಬೇಡುತ್ತೇನೆ, ಅಯ್ಯನವರೇ," ಎಂದಾಕೆ ದೀಕ್ಷಿತರಿಗೆ ಹೇಳುವಾಗಿನ ಅಂತಹ ಸಹನೆ-ತಾಳ್ಮೆ–ಕರುಣೆಗಳ ಸಾಕಾರ ಮೂರ್ತಿ ಯನ್ನು ಮಾಸ್ತಿಯವರು ಮಾತ್ರ ಚಿತ್ರಿಸಬಲ್ಲ ರೇನೊ!

ಅಲ್ಲಿ ಮಲಗಿದ್ದ ಅವರೆಡೆ ಮತ್ತೆ ನೋಡಿದೆ. ಕಣ್ಣಲ್ಲಿ ನೀರು ಸುರಿಯಿತು.

ಅವರ ಶರೀರ ಆಗಲೇ ತೀರ ತಣ್ಣಗಾಗು ತ್ತಿತ್ತು. ಉಗುರುಗಳೆಲ್ಲ ನೀಲವರ್ಣಕ್ಕೆ ತಿರುಗು ತ್ತಿದ್ದವು. ಕರ್ಮ–ಕಲಾಪ ಅತಿ ದೀರ್ಘವಾಗಿ- ಮುಗಿಯುವಂತೆ ಕಾಣುತ್ತಿರಲಿಲ್ಲ. ಆ ಮುಪ್ಪಿನ ಮುಖ ನೋಡಿ ಮತ್ತಷ್ಟು ಕಣ್ಣಲ್ಲಿ ನೀರಿಳಿ ಯಿತು ನನಗೆ!

ಅವರ ಪತ್ನಿ ಅವರಿಗಿಂತ ಮುಂಚಿತವಾಗಿ ತೀರಿಕೊಂಡಿದ್ದರು. ಬಹುಶಃ ಅವರ ಪತ್ನಿ ಮತ್ತ ವರ ತಾಯಿ ಅವರ ಜೀವಿತದ ಮೇಲೆ ತಮ್ಮ ಸಚ್ಚಾರಿತ್ರ್ಯ, ಸದ್ವರ್ತನೆಗಳಿಂದ ಮಾದರಿಯಾಗಿ ನಡೆದುಕೊಂಡಿದ್ದರಿಂದಲೇ ಮಾಸ್ತಿಯವರು ಇಂತಹ ಸ್ತ್ರೀ ವ್ಯಕ್ತಿಗಳನ್ನು ಚಿತ್ರಿಸಲು ಅನು ವಾಗಿದ್ದಿರಬೇಕು.

ಇದ್ದಕ್ಕಿದ್ದ ಹಾಗೆ ನನಗೆ ಮಹಿಷೂರ ಮಂಡಲ ದಲ್ಲಿನ, ಭೇರ್ಯ ದಾಟಿ ಸಾಲಿಗ್ರಾಮದ ಬಳಿ ಒಯ್ದು ಇಳಿಸಿದ ಅನುಭವವಾಯಿತು.

ಊರ ಹೊರಗಣ ನರಸಿಂಹ ದೇವಾಲಯ. ಅಲ್ಲಿ ಶ್ರೀ ರಾಮಾನುಜ ಯತಿಗಳು, ಅವರ ಭಕ್ತ, ಅವರ ಮಡದಿ ಮಕ್ಕಳ ಚಿತ್ರ ಕಣ್ಣ ಮುಂದೆ ಬಂತು.

ರಾಮಾನುಜರು ಕೊಳದಲ್ಲಿಳಿದು ಸ್ನಾನ ಮಾಡುತ್ತಿದ್ದಾರೆ. ಸಮೀಪದ ಮರವೊಂದರ ಮರೆಯಿಂದ ಪತಿಯನ್ನಿಣಿಕಿ ನೋಡುತ್ತಿರುವ ಆ ನತದೃಷ್ಟೆ ಆಚಾರ್ಯರ ಪತ್ನಿ ಕಾಣಿಸಿದರು. ತಿಳುವಳಿಕೆ ಸಾಲದ ಅನನುಭವಿ ಆ ಮಡದಿ ಯನ್ನು ರಾಮಾನುಜರಂತಹ ಆ ವ್ಯಕ್ತಿ ಶ್ರೇಷ್ಠರು ಅರ್ಥ ಮಾಡಿಕೊಂಡು ಸುಧಾರಿಸ ಲಾರದೆ ಆಕೆಯನ್ನು ತ್ಯಜಿಸಿ ಸಂನ್ಯಾಸ ಸ್ವೀಕರಿಸಿದುದು ಸಮಂಜಸವಾಗಲಿಲ್ಲೆಂದು ಶ್ರೀ ಮಾಸ್ತಿಯವರಿಗೇ ಅನ್ನಿಸಿತ್ತು.

ಆಕೆ ತನ್ನ ತಪ್ಪನ್ನರಿತು ಅಂತ್ಯಕಾಲದಲ್ಲಿ ಪತಿಯನ್ನರಸಿ ಬಂದು, ಯಾತ್ರೆಯ ನೆವದಲ್ಲಿ ಆ ದೇವಾಲಯದಲ್ಲಿ ತಂಗಿ, ಮರೆಯಲ್ಲಿ ಪತಿಯ ದರ್ಶನ ಪಡೆದು, ಜ್ವರದಿಂದ ನರಳುತ್ತಿದ್ದ ಪತಿಯ ಪಾದ ಸ್ಪರ್ಶ ಮಾಡಿ ಆ ಜ್ವರವನ್ನು ತಾನು ಪಡೆದು ಅಲ್ಲೇ ಇಹಲೋಕಯಾತ್ರೆಯನ್ನು ಮುಗಿಸಿದ ಆಕೆಯ ಕತೆ ಯಾವ ಸೀತೆ–ಸಾವಿತ್ರಿ ಯರದ್ದಕ್ಕಿಂತ ಕಡಿಮೆ! ಇದನ್ನು ವರ್ಣಿಸಿ ಮುಗಿ ಸುವ ಮುನ್ನ ಮಾಸ್ತಿ, "ಒಬ್ಬ ಯತಿ, ಒಬ್ಬ ಸುಮಂಗಲೆ, ಒಬ್ಬ ಭಕ್ತ, ಅವನ ಮಡದಿಯ ಮೂರ್ತಿಗಳನ್ನು ಕಲ್ಪಿಸಿಕೊಂಡು ಬಿಟ್ಟು ಬಂದರೆ, ನನ್ನ ಮನಸ್ಸು ಅವರೆಲ್ಲರನ್ನೂ ಅಲ್ಲಿಯೇ ಹುಡುಕಿ ಕಾಣುತ್ತ, ಇನ್ನೂ ಅಲ್ಲಿಯೇ ಅಂಡಲೆಯುತ್ತಿದೆ. ಅವರ ಆ ಅಂತಿಮ ಚಿತ್ರ ಶುಭ್ರ ಶ್ವೇತ ಜವ- ನಿಕೆಯಂತಹ ಗಗನದ ಹಿನ್ನೆಲೆಯಲ್ಲಿ ದುಃಖಾಂತ ಚಿತ್ರವೊಂದರ ಅಂತ್ಯದಲ್ಲಿ ಕಾಣಬರುವ ದುರಂತ

ವ್ಯಕ್ತಿಗಳ ಛಾಯಾಚಿತ್ರ (silhouette) ದಂತೆ ಕಾಣಿಸುತ್ತಿದೆ.

*

ಹೊರಗೆ ಬಿಸಿಲಲ್ಲಿ ಜನ ಕಾಯುತ್ತ ಚಡಪಡಿಸುತ್ತಿದ್ದರು. ಪೋಲೀಸ್ ಅಧಿಕಾರಿಗಳಿದ್ದ ಒಂದು ಕಾರು–ಒಂದು ಜೀಪು ಬಂದವು. ಅವರು ಕೆಳಗಿಳಿದು ಬಂದು ಮಾಸ್ತಿಯವರ ಶರೀರದ ಮುಂದೆ ಅದಬ್ ಆಗಿ (Attention Position) ಪೀಕ್ ಕ್ಯಾಪ್ ತೆಗೆದು ತಲೆ ಬಾಗಿಸಿ ನಮನಿಸಿದರು. ಮುಂದೆರಡೇ ಕ್ಷಣಗಳಲ್ಲಿ ಮುಖ್ಯ ಮಂತ್ರಿ ರಾಮಕೃಷ್ಣ ಹೆಗಡೆ ಬಂದರು. ಅವರೊಂದಿಗೆ ಮತ್ತೊಮ್ಮೆ ಜನಸಾಗರ ಒಳನುಗ್ಗಿತು.

ಅವರ ಪಿ. ಎ. ನೋ, ಎ. ಡಿ. ಸಿ. ನೋ ತಿಳಿಯದು– "ಬೇಗ ಬೇಗ ಮುಗಿಸಿ. ಸಿ. ಎಂ. ತುಂಬ ಹೋತ್ತು ನಿಲ್ಲಲಾರರು. "ಹೀ ಈಸ್ ನಾಟ್ ಕಂಪ್ಲೀಟ್ಲಿ ಕ್ಯೂರ್ಡ್ ಯು ನೋ," ಎಂದರು.

ಅಲ್ಲಿ ಶ್ರೀ ಹೆಗಡೆಯವರು ಮಾಸ್ತಿಯವರ ದೇಹದ ಮೇಲೆ ಪುಷ್ಪ ಗುಚ್ಛವಿರಿಸಿ–ವಂದಿಸಿ ಹೊರ ಬಂದು ಅಂತಿಮ ಯಾತ್ರೆಯ ಆರಂಭಕ್ಕೆ ಆ ಗಳಿಗೆಗಾಗಿ ಕಾಯುತ್ತ ಕೂತರು ಕಾರಲ್ಲಿ.

ಮಲ್ಲಿಗೆ ಮಾಲೆಗಳು, ಕನಕಾಂಬರದ ಸರಗಳು, ಶ್ರೀಗಂಧದ ಹಾರಗಳಿಂದ ಅಲಂಕೃತವಾಗಿ ಮಾಸ್ತಿಯವರನ್ನು ಮಲಗಿಸಲು ಶುಭ್ರ ಶ್ವೇತ ಓಪನ್ ಬಾಡಿಯ ಟೆಂಪೋ ಸೆಕ್ರೆಟೆರಿಯಟ್‌ನಿಂದ ಬಂದು ನಿಂತಿತು.

ಅನುಬಂಧಿಗಳೂ ಅಭಿಮಾನಿಗಳೂ ಮುಂದಿನ ಕಾರ್ಯಕ್ಕಾಗಿ ತ್ವರೆ ಮಾಡಲಾರಂಭಿಸಿದರು.

ಮಹಾರಾಜರ ಕಾಲದ ಮೈಸೂರು ಸರಕಾರದಲ್ಲಿ ಸಿವಿಲ್ ಸರ್ವಿಸ್ ಅಧಿಕಾರಿಯಾಗಿದ್ದ ಮಾಸ್ತಿಯವರು ಅದೇ ಸರ್ವೀಸಿನಲ್ಲಿ ಆದ ಅನ್ಯಾಯವನ್ನು ಪ್ರತಿಭಟಿಸಿ ಅಂತಹ ಉನ್ನತ ಹುದ್ದೆಗೆ ರಾಜೀನಾಮೆ ಕೊಡುವ ಕಷ್ಟ ಬಂದರೂ ಮನಃಕಾಷಾಯ ಮಾಡಿಕೊಳ್ಳದೆ, ಅಧ್ಯಯನ ಬರಹಗಳಲ್ಲಿ ತೊಡಗಿ, ತೀರ ಸರಳವಾದ, ಸುಲಭವಾದ ಭಾಷೆಯಲ್ಲಿ, ಕಷ್ಟವಲ್ಲದ ಕ್ಲೀಶ ತಾರದ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಎಂತಹ ಚಿಕ್ಕಮಕ್ಕಳಿಗೂ ಅರ್ಥವಾಗುವಂತೆ ಕೃತಿ ರಚನೆ ಮಾಡಿದ "ಶ್ರೀನಿವಾಸರ ಅಂತಿಮ ಯಾತ್ರೆ" ಇನ್ನೇನು ಆರಂಭ!

ಅವರನ್ನು ಕುರಿತು ಬರೆದ ದಿ. ವಿ. ಸೀ.

"ಮಾನವರಲ್ಲಿ ಪ್ರೀತಿ, ಕೆಳೆಯಲ್ಲಿ ಸವಿ, ಅನುಭವದಲ್ಲಿ ಆಳ, ವಿಸ್ತಾರ; ಎಲ್ಲಕ್ಕೂ ತೆರೆದ ಮನಸ್ಸು, ಸರ್ವವನ್ನೂ ಭಗವದ್ವಿಲಾಸವೆಂದು ಒಪ್ಪುವ ರೀತಿ. ಅದಕ್ಕೆ ಅಧೀನವಾಗಿ ಬಾಳನ್ನು ಚೊಕ್ಕಗೊಳಿಸಿ, ಅದರ ಸ್ವೀಕಾರಕ್ಕೆ ಯೋಗ್ಯ ಮಾಡಿಕೊಳ್ಳಬೇಕೆಂಬ ವೃತ್ತಿ–ಮಾಸ್ತಿಯವರದ್ದು. ಅವರ ಜೀವನ ನಮಗೆ ನೂರ್ಕಾಲ ದೊರೆವ ಭಾಗ್ಯವಾಗಲಿ"—

ಎಂದು ಬೇಡಿದ್ದಾರೆ. ಈ ಮಾತುಗಳು ಶ್ರೀ ಮಾಸ್ತಿಯವರ ಗುಣ ಶೀಲಗಳ ಸವಿಕಟ್ಟು.

ಅವರ ಭಾಷೆ ಸರಳ ಸುಂದರ. ಬದುಕು ಬರಹಗಳೆರಡರಲ್ಲೂ ಶುಚಿತ್ವವನ್ನು ಮೈಗೂಡಿಸಿಕೊಂಡ ಅವರು ತಮ್ಮ ಬರವಣಿಗೆಯಲ್ಲಿ ಎಲ್ಲೂ ಅಶ್ಲೀಲ ಅಪಶಬ್ದಗಳ ಇತಿಮಿತಿ ಮೀರಿದ ಶೃಂಗಾರ ವರ್ಣನೆಗಳ ವಿವರ ಕಾಣಿಸದು. ಚಿಕ್ಕವೀರ ರಾಜೇಂದ್ರನಲ್ಲಿ ಬರುವ ಲೂಸಿ–ಪಾರ್ಕರ್, ಹಾಕರ್–ತೋಕರ್ ಮೊದಲಾದವರ ಪಾಶ್ಚಾತ್ಯ ನರ್ತನವನ್ನು ವಿವರಿಸ ಹೊರಟ ಅವರು ತಟಕ್ಕನೆ ಅದರ ವರ್ಣನೆ ನಿಲ್ಲಿಸಿ "ಇಂತಹುದರಲ್ಲಿ ಸ್ವಲ್ಪ ಕೊಳಕಿನ ಸೂಚನೆ ಇರುತ್ತದೆ. ಈ ಕಾರಣದಿಂದ ಅವು ಅರುಚಿಯ ಜನರಿಗೆ ಬಹುಭೋಗ್ಯವಾಗಿ ಕಾಣುತ್ತದೆ"—ಎಂದಷ್ಟೆ ಹೇಳಿಯಾರು.

ಗಿರಿಗೆ – ಕೆಮ್ಮಣ್ಣುಗುಂಡಿಗೆ – ಚಿತ್ರದುರ್ಗಕ್ಕೆ ಹಲವು ಹತ್ತು ಬಾರಿ ಹೋಗಿ ಅತಿ ಎತ್ತರವೆನಿಸುವ ಬಿಂದುಗಳನ್ನು ಏರಿ ತಲಪಿ ಸುತ್ತಮುತ್ತಣ ಊರುಗಳನ್ನು ಗುರುತಿಸುವ ಪ್ರಯತ್ನ ಮಾಡಿ ಸೋತಿದ್ದೇನೆ. ಕೆಮ್ಮಣ್ಣುಗುಂಡಿಯಿಂದ ಹತ್ತಿರದ ಲಿಂಗದಹಳ್ಳಿ, ಚಿಕ್ಕಮಗಳೂರು, ತರಿಕೇರೆ, ಲಕ್ಕವಳ್ಳಿಯ ಜಲಾಶಯ ಸ್ವಲ್ಪ ಕಷ್ಟಪಟ್ಟು ಕಣ್ಣು ಹಿಗ್ಗಿಸಿ ಭದ್ರಾವತಿ ಶಿವಮೊಗ್ಗೆಯ ವರೆಗೆ ಗುರುತಿಸಿದ್ದೇನೆ. ಆದರೆ ಚಿಕ್ಕಮಗಳೂರಲ್ಲಿ ನಮ್ಮ ಡಾ. ನಾರಾಯಣನ ಮನೆ ಎಲ್ಲಿದೆ ಗುರುತಿಸಲಾರೆ, ಅದೇ

ಮಾಸ್ತಿ ಅಲ್ಲಿಂದ ಬಿದನೂರು–ನಗರ, ಶಿವಮೊಗ್ಗ ತರೀಕೆರೆಗಳಿಂದ ಹಿಡಿದು ಈಚಿನ ಚಿಕ್ಕಮಗಳೂರು, ನಸ್ಸಾರೆ, ಹಳೆಬೀಡು ಬೇಲೂರು, ಅತ್ತ ಶ್ರವಣಬೆಳಗೊಳದ ಗೊಮ್ಮಟನ ಮೂರ್ತಿ, ಅಗೋ ಅಗೋ ಅಲ್ಲಿ ನೋಡಿ ಶ್ರೀರಂಗಪಟ್ಟಣ ಅಲ್ಲಿಂದ ಮುಂದೆಯೇ ಮೈಸೂರು–ಎಂದು ಒಂದು ಸುಂದರ ಪಕ್ಷಿ ನೋಟ ತೋರಿಸಿರುವ ರೀತಿ ಬಲು ಮೋಜಿನದು, ಬಲು ಮೋಡಿಯದು. ಅಂತಹ ಎತ್ತರದ ವ್ಯಕ್ತಿತ್ವದ ದೂರದೃಷ್ಟಿಯುವರವರು.

ಇಂತಹ ಮರೆಯಲಾರದ ಚಿತ್ರಗಳನ್ನೂ ಪಾತ್ರಗಳನ್ನೂ ಸೃಷ್ಟಿಸಿ ನನ್ನಂಥವರ ಕುಬ್ಜತನವನ್ನು ಕಳೆದ ಮಾಸ್ತಿಯವರು ನಮ್ಮೊಡನೆ ಇನ್ನೂ ಇದ್ದಾರಲ್ಲ ಎಂಬುದಷ್ಟೆ ನನ್ನಂಥವರ ಅಭಿಮಾನ ಆನಂದಕ್ಕೆ ಕಾರಣವಾಗಿತ್ತು.

ನೂರ್ಕಾಲ ಬದುಕಿರಣ್ಣಾ! ನೂರ್ಕಾಲ ನಮ್ಮ ಹರಸಿರಣ್ಣಾ ಎಂದು ಅಣ್ಣ ಮಾಸ್ತಿಯುವರನ್ನು ಸಹಸ್ರ ಸಹಸ್ರ ಕನ್ನಡ ಕಂಠಗಳು ಗೋಗರೆದು ಬೇಡಿದ್ದರೂ ನೂರು ತುಂಬುವ ಮುನ್ನ ನಾವೆಲ್ಲ ಅಜ್ಞಾನ ಅಂಧಕಾರದಲ್ಲಿ ಮಲಗಿರಲು 'ಕಾಲ' ಬಂದು ಕರೆದನಂತೆ! ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ! ಮಾಸ್ತಿ ಹೋದರು...

•

ನಾರಾಯಣ ನಾರಾಯಣ ನಾಮ ಸ್ಮರಣೆಯ ಘೋಷಣೆಯೊಂದಿಗೆ ನೆಲದ ಮೇಲಿಂದ ಅವರ ಶವವನ್ನೆತ್ತಿ ಸಿದಿಗೆಯ ಮೇಲಿರಿಸಲಾಯಿತು. ಸಹಸ್ರ ಸಂಖ್ಯೆಯ ಜನ ಅಭಿಮಾನಿಗಳು ಅವರ ಬಾಯಲ್ಲಿ ತಿಲ_ತಂಡುಲವನ್ನರ್ಪಿಸಿದರು. ಪುಣ್ಯವಂತರು ಅವರ ಸಿದಿಗೆಯನ್ನೆತ್ತಿ ಹೆಗಲ ಮೇಲಿರಿಸಿಕೊಂಡು ಹೊರಗಿನ ಶವವಾಹಕ ವಾಹನದೆಡೆ ನಡೆದರು. ಗಡಿಯಾರ ೨ ಗಂಟೆ ೧೦ ನಿಮಿಷ ತೋರಿಸುತ್ತಿತ್ತು.

ಕನ್ನಡದ ಆಸ್ತಿ ಮಾಸ್ತಿಯವರಿಗೆ ಜೈ...... ಎಂಬ ಘೋಷ ಮುಗಿಲಿಗಪ್ಪಳಿಸುತ್ತಿರುವಾಗ ಅವರ ಶರೀರ ಟ್ರಕ್ ಮೇಲಿನ ವೇದಿಕೆಗೆ ವರ್ಗಾಯಿಸಿ ಅದನ್ನ ಅಸಂಖ್ಯಾತ ಪುಷ್ಪ ಮಾಲೆಗಳಿಂದ ಮುಚ್ಚಲಾಯಿತು.

ಗವಿಪುರದ ಪೆರಿಯಾರವರಿಗೆ ಮನೆಯ ಋಣ ಇಂದಿಗೂ ತೀರಿತು. ಕೊನೆಯ ವಿದಾಯ ಹೇಳಿದ ಅವರ ಶರೀರವನ್ನು ಹೊತ್ತ ಟ್ರಕ್ ಚಲಿಸಿತು.

ಕೂಡಲೇ ಮುಖ್ಯಮಂತ್ರಿಯವರ ಕಾರು ಎದುರಿಂದ ಬಂದು ನಿಂತಿತು. ಶ್ರೀ ರಾಮಕೃಷ್ಣ ಹೆಗಡೆಯುವರು ಕಾರಿಂದಿಳಿದು ಎಲ್ಲರೊಡನೆ ಶವ ಯಾತ್ರೆಯಲ್ಲಿ ಅದರೊಂದಿಗೆ ಆ ಚೌಕದ ವರೆಗೆ ನಡೆದರು.

ಬಸವನ ಗುಡಿ ಮುಖ್ಯ ರಸ್ತೆ, ವಾಣೀವಿಲಾಸ ರಸ್ತೆ, ನ್ಯಾಷನಲ್ ಕಾಲೇಜು, ಉತ್ತರಾದಿಮಠದ ರಸ್ತೆಯಲ್ಲಿ ವೇಗದಿಂದ ಚಲಿಸುತ್ತಿತ್ತು. ಪೋಲಿಸ್ ಅಧಿಕಾರಿಗಳು ಮೋಟರ್ ಬೈಕ್, ಜೀಪುಗಳಲ್ಲಿ! ಮಂತ್ರಿಗಳು ಅಧಿಕಾರಿಗಳು ಕಾರುಗಳಲ್ಲಿ, ಅಭಿಮಾನಿಗಳು, ಸುವೇಗ ಟಿ. ವಿ. ಎಸ್., ಲೂನಾ, ವೆಸ್ಪಾ, ಸೈಕಲ್‌ಗಳಲ್ಲಿ ಹಿಂಬಾಲಿಸಿದ್ದರು.

ಕೆಲವು ನಿಮಿಷಗಳಲ್ಲಿ ಸಾಹಿತ್ಯ ಪರಿಷತ್ತನ್ನು ಈ ಮೆರಣಿಗೆ ಸಮೀಪಿಸಿತ್ತು. ಅಲ್ಲಿ ಶ್ರೀ ಮಾಸ್ತಿಯವರ ದೊಡ್ಡ ಭಾವಚಿತ್ರವಿರಿಸಿ ಅಲಂಕರಿಸಲಾಗಿತ್ತು. ಅಧ್ಯಕ್ಷರು ಹೊರ ಬಂದು, ಟ್ರಕ್ ಏರಿ: ಮಾಸ್ತಿಯವರ ದೇಹಕ್ಕೆ ಪುಷ್ಪಮಾಲಿಕೆಯನ್ನು ತೊಡಿಸಿ ಗೌರವ ಸೂಚಿಸಿದರು. ನಂತರ ಶವಯಾತ್ರೆ ಟಿಪ್ಪು ಅರಮನೆ–ಮೆಡಿಕಲ್ ಕಾಲೇಜ್, ಶ್ರೀನಿವಾಸ ದೇವಸ್ಥಾನಗಳನ್ನು ಬಲಕ್ಕೆ ಮಾಡಿಕೊಂಡು ಅಲ್ಲಿಂದ ಒಕ್ಕಲಿಗರ ಸಂಘದ ಮುಂದಣ ರಸ್ತೆ_ಪಾರ್ವತಿಪುರ ಮಿನರ್ವಾ ವೃತ್ತ, ಲಾಲ್‌ಬಾಗ್ ರಸ್ತೆ–ದ್ವಾರಗಳನ್ನು ದಾಟಿ ೨-೩೦ರ ವೇಳೆಗೆ ವಿಲ್ಸನ್ ಗಾರ್ಡನ್ ಚಿತಾಗಾರವನ್ನು ಮುಟ್ಟಿತು.

ಅಲ್ಲೂ ಆಗಲೇ ಅಸಂಖ್ಯ ಜನ! ಸಶಸ್ತ್ರ ಪೋಲೀಸ್ ಪಡೆ ಗೌರವ ರಕ್ಷೆಗಾಗಿ ಕಾದು ನಿಂತಿತ್ತು. ಸಾಹಿತಿಗಳೂ ಸರ್ಕಾರಿ ಅಧಿಕಾರಿಗಳೂ ಅಲ್ಲಾಗಲೇ ಬಂದು ನಿಂತಿದ್ದರು. ಆ ಸಂದಣಿಯಲ್ಲೂ ಪು. ತಿ. ನ., ಕೋ. ಚನ್ನಬಸಪ್ಪ, ಪ್ರಮೀಳ ನೇಸರ್ಗಿ, ಎಲ್ಲಕ್ಕಿಂತ ಈಚೆ ಕಡೆ ಒಂದು ಕುರ್ಚಿಯಲ್ಲಿ ಅತ್ತತ್ತು ಕಣ್ಣು ಬಾಡಿಸಿಕೊಂಡು ಕುಳಿತಿದ್ದ ನನ್ನ ತಮ್ಮ...ಗುರುತು ಸಿಕ್ಕರು. ಶ್ರೀ ರಾಮಕೃಷ್ಣ ಹೆಗಡೆಯವರನ್ನು ಮುಂದೆ ಮಾಡಿ ಜನ ಮಾಸ್ತಿಯವರ ಪಾರ್ಥಿವ ಶರೀರವನ್ನಿಳಿಸಿಕೊಂಡು ಚಿತಾಗಾರದ ಪೋರ್ಟಿಕೋನಲ್ಲಿ ವ್ಯವಸ್ಥೆ ಮಾಡಿದ್ದ ಬೆಂಚುಗಳ ಮೇಲೆ ಸರಿಸಿದರು. ರಾಜ್ಯ

ಮರ್ಯಾದೆ ನಮನಗಳ ನಂತರ ಶೋಕಸೂಚಕ ತೂರ್ಯವಾದನ ಗೌರವ ರಕ್ಷೆ ಪೋಲೀಸರಿಂದ ಮೂರು ಬಾರಿ ಕಿವಿಯ ತಮಟೆ ಒಡೆದು ಹೋಗುವಂತೆ ಹೊಡೆದು ಹಾರಿಸಿದ ಕುಶಾಲು ಗುಂಡುಗಳು ಪೋರ್ಟಿಕೋದ ಕಾಂಕ್ರೀಟಿನ ಛಾವಣಿ ಪಾರಾಗಿ ಹೋದವು. ಶಸ್ತ್ರವನ್ನು ತಲೆ ಕೆಳಗೆ ಮಾಡಿ ಮೌನ ಸೂಚಿಸಿ ಸಶಸ್ತ್ರ ಪಡೆ ನಡೆಯಿತು.

■

ಉತ್ತರ ಕ್ರಿಯೆಗಳೆಲ್ಲ ಮುಗಿದ ನಂತರ ತಾತನ ದೇಹಕ್ಕೆ ಸಾಂಪ್ರದಾಯಿಕ ಅಗ್ನಿಸ್ಪರ್ಶ ಕಾರ್ಯ ವನ್ನು ಶ್ರೀರಾಮಭದ್ರನ್ ಮಾಡಿ ಮುಗಿಸಿದರು.

ಅಲ್ಲಿಂದ ಕ್ರಿಮೆಟೋರಿಯಂನ ವೇದಿಕೆಗೆ ಸಾಗಿ ಸಲು ಸಿದಿಗೆಯನ್ನೆತ್ತಿದಾಗ ವಾಹಕರ ನಡುವೆ ನುಸುಳಿ ನಾನೂ ಹೆಗಲು ಸೇರಿಸಿ ಕೊನೆ ಗಳಿಗೆಯ ಲ್ಲಾದರೂ ಒಂದೆರಡು ನಿಮಿಷಗಳ ಕಾಲ ಅವರ ದೇಹವನ್ನು ಹೊತ್ತು ಧನ್ಯತೆಯನ್ನು ಅನುಭವಿ ಸಿದೆ. ಚಿತಾಗಾರದ ಹರಿಶ್ಚಂದ್ರ...ವೀರ ಬಾಹು ಗಳು ಆ ಪಾರ್ಥಿವ ಶರೀರವನ್ನು ಓವೆನ್ ಒಳಕ್ಕೆ ಸರಿಸಿ ಬಾಗಿಲು ಹಾಕಿದಾಗ ಅಪರಾಹ್ನದ ಮೂರು ಗಂಟೆ ಇಪ್ಪತ್ತು ನಿಮಿಷ! ಆ ಬಾಗಿಲು ಉರಿ ಮತ್ತು ಶಾಖಗಳಿಂದಾಗಿ ಕಪ್ಪು ಬಡಿದು ನರಕದ ಬಾಗಿಲಂತೆ ಕಾಣುತ್ತದೆ. ಅದರ ಆಚೆ ಬದಿಯಲ್ಲಿ ದಾರುಣತೆಯಿದೆ-ನೋವಿದೆ-ದಳ್ಳುರಿ ಉರಿಯು ತ್ತಿದೆ. ಅದರ ಮೇಲಿರುವ ಕಿಂಡಿಯನ್ನು ಬಾಗಿ ಸಿದ ಕಬ್ಬಿಣದ ಕಂಡಿಯೊಂದರಿಂದ ಮೇಲೆತ್ತಿ ನೋಡಿದರೆ ಒಳಗಿನ ಭೀಕರ ದೃಶ್ಯ ಕಾಣುತ್ತದೆ. ಅದನ್ನು ಕಂಡ ನಂತರವೇ ಜನ ಚದುರುವುದು!

ಆದರೆ ಆ ವೀರಬಾಹು-ಅಲ್ಲಿ ಇನ್ನೂ ಉಳಿ ದಿದ್ದ ನನ್ನಂಥವರಿಗೆ ಆ ಬಾಗಿಲನ್ನು ಪುನಃ ಮೇಲಕ್ಕೆ ಸರಿಸಿ ತೋರಿಸಿದ.

ಮಾಸ್ತಿಯವರ ದೇಹ. ಅಯ್ಯೋ...!

ಕೈಕಾಲುಗಳಿಗೆ ಉರಿ ತಗುಲಿ ದಣದಣ ಉರಿ ಯುತ್ತಿದೆ.

ಗೌರಮ್ಮ-ಗಯಟೆ, ಸಾರಿಪುತ್ರ, ರಾಮಾ ನುಜ, ಸುಬ್ಬಣ್ಣರನ್ನು ಚಿತ್ರಿಸಿದ ಆ ಕೈ ಬೆರಳು ಗಳು ಈಗ ಬೆಂಕಿಯಲ್ಲಿ ಬೇದು ನಿಮಿರಿ ನೆಟ್ಟಗಾಗಿ ಚಿಲಿಚಿಟಲೆಂದು ಸಿಡಿದು ಮುಲುಗುತ್ತಿದ್ದವು. ನೋಡಲಾರದೆ ಕಣ್ಣು ಮುಚ್ಚಿಕೊಂಡೆ.

ಕಾವಲುಗಾರ ಅಂತಿಮವಾಗಿ ಆ ನಿರಯಣ ದ್ವಾರವನ್ನು ಮುಚ್ಚಿದ.

•

ಇಂದು ಅವರ ಮನೆ ಕಡೆ ಬರುತ್ತಿದ್ದಾಗ ಗೋಡೆ ಗೋಡೆಗಳ ಮೇಲೆ.

"ನಟರಂಗ ಅರ್ಪಿಸುವ ಡಾ. ಮಾಸ್ತಿಯವರ ಚಿಕವೀರ ರಾಜೇಂದ್ರ ೬-೬-೧೯೮೬ರ ಸಂಜೆ" ಎಂದು ಭಿತ್ತಿಪತ್ರಗಳನ್ನು ಕಂಡಿದ್ದೆ. ಇಂದು ಇಲ್ಲಿ ನಾಟಕವಿಲ್ಲ.

ಅಲ್ಲಿ!

ನಿನ್ನೆ ರಾತ್ರಿಯಿಂದಲೇ ಸಂಭ್ರಮ. ಅಲ್ಲಿನ ಸಂಸ್ಥೆಗಳಿಗೆ ೫-೬-೮೬ರ ರಾತ್ರಿಯಿಂದಲೇ ವಿಶೇಷ ರಜಾ ಘೋಷಣೆ ಮಾಡಲಾಗಿತ್ತು.

ಅಲ್ಲಿನ ಏರೋಡ್ರೋಮಲ್ಲಿ ಮಾಸ್ತಿಯವರ ತಾಯಿ-ಪತ್ನಿ, ಶ್ರೀ ಟಿ. ಎಸ್. ವೆಂಕಣ್ಣಯ್ಯ, ಬಿ. ಎಂ. ಶ್ರೀ., ಎ. ಆರ್. ಕೃ., ಡಿ. ವಿ. ಜಿ., ವಿ. ಸೀ., ಜಿ. ಪಿ. ರಾಜರತ್ನಂ, ನವರತ್ನ ರಾಮರಾಯರು. ಅ. ನ. ಕೃ., ತರಾಸು.ಗಳಲ್ಲದೆ ಆಚಾರ್ಯ ರಾಮಾಜರು, ಅವರ ಭಕ್ತ ಮಡದಿ, ಗಯಟೆ, ಸಾರಿಪುತ್ರ, ಗೌರಮ್ಮ. ಮೊದಲಾದವ ರೆಲ್ಲ ಮಾಸ್ತಿಯವರ ವಿಮಾನಕ್ಕಾಗಿ ಕಾದು ನಿಂತಿದ್ದರೆ ಕೂರೇಶಭಟ್ಟರು ಪೂರ್ಣಕುಂಭ ಹಿಡಿದುನಿಂತಿದ್ದರು. ಬೆಳಗಿನ ಜಾವದ ೧-೨೦ಕ್ಕೆ ವಿಮಾನ ಬಂದಿಳಿಯಿತು. ನಗುತ್ತ ಮಾಸ್ತಿ ಹೊರ ಬಂದರು. ಇವರೆಲ್ಲ ಅವರನ್ನು ಎದುರುಗೊಂಡರು. ದೇವಲೋಕದ ಆಡಿಟೋರಿಯಂಗೆ ಅವರನ್ನು ಕೊಂಡೊಯ್ದರು. ಇಂದು ಭರತಮುನಿ ಮತ್ತವನ ಶಿಷ್ಯೆಯರು ರಂಭಾದಿ ಊರ್ವಶಿಯರು —ಅರ್ಥಾತ್ ದೇವಲೋಕದ ಜ್ಯೋತಿಲಕ್ಷ್ಮಿ, ಜಯಮಾಲಿನಿ, ಅನುರಾಧ, ನೈಲೆಕ್ಸ್ ನಳಿನಿಯರೆ ಲ್ಲರಿಗೆ ರಜ. ಅವರೆಲ್ಲ ಈ ಕಾರ್ಯಕ್ರಮ ನೋಡಬಂದಿದ್ದಾರೆ.

"ಸುಬ್ಬಣ್ಣ"ನ ಪ್ರಾರ್ಥನೆ: ಸುಶ್ರಾವ್ಯ ಕಂಠ ದಿಂದ ಹಾಡಿದ.

ಕಲ್ಯಾಣಾದ್ಭುತಗಾತ್ರಾಯ! ಕಾಮಿತಾರ್ಥ-
ಪ್ರದಾಯಿನೇ!!
ಶ್ರೀನಿವಾಸಾಯ ತೇ ನಮಃ!!!

❀

ಡಾ. ನಾಗೇಶಕುಮಾರ ಜಿ. ರಾವ್

ಒಂದಿಷ್ಟು
ಆತ್ಮವಿಮರ್ಶೆ
ಅಗತ್ಯ

# ನೀವೆಷ್ಟು ಸಂಭಾವಿತರು ?

ಸಂದರ್ಭೋಚಿತವಾಗಿ ಮಾತುಗಳನ್ನಾಡುವುದು ಅಥವಾ ನಡೆದುಕೊಳ್ಳುವುದು ಸಂಭಾವಿತತನದ ಸಂಕೇತ. ಇತರರ ಸಂಭಾವಿತತನವನ್ನು ಅಳೆಯಲು ನಮಗೆ ಕೆಲವೇ ನಿಮಿಷಗಳು ಸಾಕಾಗಬಹುದಾದರೂ, ಈ ಬಗ್ಗೆ ನಮ್ಮನ್ನು ನಾವೇ ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ. ನಮ್ಮ ಸಂಭಾವಿತತನದ ಬಗ್ಗೆ ನಮಗೆ ಅರಿವಾಗುವುದು ಅನ್ಯರು ಟೀಕಿಸಿದಾಗಲೇ! ಅಂದರೆ, ನೀವು ಅಸಂಭಾವಿತರೆಂದು ನಿಮಗೆ ತಿಳಿಯುವುದು ಪರಿಸ್ಥಿತಿ ತೀರಾ ಕೈ ಮೀರಿದಾಗಲೆ. ಕಿರು ಪ್ರಶ್ನೋತ್ತರಾವಳಿಯೊಂದನ್ನು ಈ ಕೆಳಗೆ ಸಂಯೋಜಿಸಲಾಗಿದ್ದು, ಈ ಮೂಲಕ ನಿಮ್ಮ ಸಂಭಾವಿತತನವನ್ನು ನೀವೇ ವಿಶ್ಲೇಷಿಸಿ ನೋಡಿರಿ: ನೀವು ಮಾಡಬೇಕಾದುದು ಇಷ್ಟೆ:

೧) ಪ್ರಶ್ನೋತ್ತರಾವಳಿಯ ಪ್ರಶ್ನೆ ಹಾಗೂ ಹಾಗೂ ಉತ್ತರವನ್ನು ಓದಿ ಅರ್ಥ ಮಾಡಿಕೊಂಡ ಬಳಿಕ, ನಿಮಗೆ ಸರಿ ಕಂಡುಬಂದ ಒಂದೇ ಒಂದು ಉತ್ತರವನ್ನು ಮಾತ್ರ ಹತ್ತು ಸೆಕೆಂಡಿನ ಒಳಗೆ ನಿರ್ಧರಿಸಿ ಗುರುತಿಸಿಕೊಳ್ಳಿ.

೨) ಸರಿ ಉತ್ತರಗಳ ಪಟ್ಟಿ ಹಾಗೂ ಅಂಕ ನೀಡುವಿಕೆಯ ಕ್ರಮವನ್ನು ಬೇರೆಯೇ ನೀಡಲಾಗಿದ್ದು ಆ ಮೂಲಕ ನಿಮ್ಮ ಸಂಭಾವಿತತನದ ಬಗೆಗೆ ನೀವೇ ನಿರ್ಧರಿಸಿ.

೩) ಇದೆಲ್ಲಕ್ಕಿಂತಲೂ ಮುಖ್ಯವಾಗಿ ಉತ್ತರಗಳನ್ನು ಗುರುತಿಸುವ ಮೊದಲು ಸರಿ ಉತ್ತರಗಳ ಪಟ್ಟಿಯನ್ನು ಓದಬೇಡಿ.

## ಪ್ರಶ್ನೋತ್ತರಾವಳಿ

೧: ಹಳೆಯ ಮಿತ್ರನೋರ್ವನು ಥಕ್ಕನೆ ಭೇಟಿಯಾದಾಗ ಜೊತೆಯಲ್ಲಿ ಅವನ ಸಂಬಂಧಿಕನೋರ್ವನೂ ಇದ್ದುಕೊಂಡು, ಆತನಿಗೆ ನಿಮ್ಮನ್ನು ಪರಿಚಯಿಸಲಾರಂಭಿಸಿದಂತೆ ನಿಮ್ಮ ಹೆಸರು ನೆನಪಿಗೆ ಬಾರದೇ ಅವನು ತೊದಲುತ್ತಿದ್ದಾಗ, ನೀವು,

(ಅ) ಏನೋ ಪಾಪ, ಮರೆಗುಳಿ ಎಂದು ನಿಮ್ಮ ಗೆಳೆಯನನ್ನು ಕ್ಷಮಿಸಿ ಸುಮ್ಮನಿರುವಿರಿ;

(ಆ) ನಗುತ್ತಾ ಹಸ್ತಲಾಘವ ನೀಡುತ್ತಾ, ನಿಮ್ಮ ಹೆಸರನ್ನು ನೀವೇ ಹೇಳಿ, ಪರಿಚಯಿಸಿಕೊಳ್ಳುವಿರಿ;

(ಇ) ಹೆಸರನ್ನು ಪರಿಚಯಿಸಿಕೊಳ್ಳುವ

ಗೊಡವೆಗೆ ಹೋಗದೆ, ದೇಶಾವರಿ ನಗೆ ಬೀರಿ ಮಾತುಗಳನ್ನಾರಂಭಿಸುವಿರಿ.

೨: ಸಹೋದ್ಯೋಗಿಯೋರ್ವರ ವೃದ್ಧ ತಂದೆಯು ತೀರಿಕೊಂಡ ಸುದ್ದಿ ತಿಳಿದು ಬಂದಾಗ ನಡೆದ ಘಟನೆಯ ಬಗ್ಗೆ ಪ್ರತಿಕ್ರಿಯೆ ತೋರಿಸುವಲ್ಲಿ

(ಅ) ಫೋನು ಮೂಲಕ ನಾಲ್ಕು ಸಮಾಧಾನದ ಮಾತುಗಳನ್ನಾಡಿ ಸುಮ್ಮನಾಗುವಿ;

(ಆ) ಆ ಕೂಡಲೇ ಸೌಜನ್ಯಪೂರ್ವಕವಾಗಿ ಅವನ ಮನೆಗೆ ಹೋಗಿ ಕೆಲ ನಿಮಿಷ ಅವನ ಜೊತೆಯಲ್ಲಿದ್ದು ಸಾಂತ್ವನದ ಮಾತುಗಳನ್ನಾಡಿ ಹಿಂತಿರುಗುವಿರಿ;

(ಇ) ಆ ಬಗ್ಗೆ ಹೆಚ್ಚು ಯೋಚಿಸದೇ ಕೆಲ ದಿನಗಳ ರಜೆಯ ನಂತರ ಆತ ಪುನಃ ಆಫೀಸಿಗೆ ಬರಲಾಂಭಿಸಿದಾಗ ನಿಮ್ಮ ದುಃಖವನ್ನು ವ್ಯಕ್ತಪಡಿಸಿ ಬರಲಾಗದ್ದಕ್ಕೆ ಸುಳ್ಳು ನೆಪ ನೀಡಿ ಕ್ಷಮೆ ಕೇಳುವಿರಿ.

೩: ನಿಮ್ಮ ಆತ್ಮೀಯ ಮಿತ್ರನೋರ್ವನಿಗೆ ಆಗಾಗ ಎಲೆ ಅಡಿಕೆ ಮೆಲ್ಲುತ್ತಾ ಮಾತನಾಡುವ ದುರಭ್ಯಾಸವಿದ್ದುಕೊಂಡು ಆ ಬಗ್ಗೆ ಆಫೀಸಿನ ಸಹೋದ್ಯೋಗಿಗಳೆಲ್ಲರೂ ಅವನನ್ನು ದೂರುತ್ತಿರುವುದು ಹಲವು ಬಾರಿ ನಿಮ್ಮ ಕಿವಿಗೆ ಬಿದ್ದಾಗ

(ಅ) ಈ ವಿಚಾರದಲ್ಲಿ ನಾನೇಕೆ ತಲೆ ಹಾಕಲಿ? ಎಂಬ ನಿರ್ಲಿಪ್ತತೆಯಿಂದ ಸುಮ್ಮನಿರುವಿರಿ;

(ಆ) ಸೌಮ್ಯ ಹಾಗೂ ಸೂಕ್ಷ್ಮವಾದ ರೀತಿಯಲ್ಲಿ ಈ ದುರಭ್ಯಾಸದ ಬಗ್ಗೆ ಅವನಿಗೆ ಹೇಳಿ, ಆಫೀಸು ಸಮಯದಲ್ಲಾದರೂ ಅದನ್ನು ತಡೆದುಕೊಳ್ಳುವಂತೆ ತಿಳಿಯ ಹೇಳುವಿರಿ;

(ಇ) ಆ ಬಗ್ಗೆ ಮೇಲಧಿಕಾರಿಗಳಿಗೆ ನೀವೇ ದೂರು ನೀಡಿ, ಚೆನ್ನಾಗಿ ಛೀ ಮಾರಿ ಹಾಕಿಸಿ, ಆ ಮೂಲಕ ಅವನ ದುರಭ್ಯಾಸವನ್ನು ನಿಲ್ಲಿಸುವಂತೆ ಪ್ರಯತ್ನಿಸುವಿರಿ.

೪: ನಿಮ್ಮ ಹುಟ್ಟು ಹಬ್ಬದ ಸಮಾರಂಭದ ಆಮಂತ್ರಿತರಲ್ಲಿ ಕೆಲವರು ಉಡುಗೊರೆಯ ಕಟ್ಟುಗಳನ್ನು ತಂದು ನೀಡಿದಾಗ

(ಅ) ಉಡುಗೊರೆ ಕಟ್ಟನ್ನು ನೀಡಿದವರ ಎದುರಲ್ಲೇ ಬಿಚ್ಚಿ ನೋಡಿ ವಂದನಾರ್ಪಣೆ ಸಲ್ಲಿಸುವಿರಿ;

(ಆ) ಉಡುಗೊರೆಗಳಲ್ಲಿ ಆರಿಸಿದ ಕೆಲವನ್ನು ಮಾತ್ರ ಕಾಣುವಂತೆ ಬಿಚ್ಚಿ ತೆರೆದಿಡುವಿರಿ;

(ಇ) ಅತಿಥಿಗಳೆಲ್ಲರಿಗೂ ಒಮ್ಮೆಲೆ ವಂದನಾರ್ಪಣೆ ಮಾಡಿ, ಉಡುಗೊರೆಯನ್ನು ಆ ಬಳಿಕ ಬಿಚ್ಚಿ ನೋಡಿ ಆನಂದಿಸುವಿರೆಂದು ಹೇಳಿ ಸಮಾರಂಭವನ್ನು ಮುಗಿಸುವಿರಿ.

೫: ನಿಮ್ಮ ಗೆಳೆಯನೋರ್ವನಿಂದ ಕೆಲ ಸಮಯದ ಹಿಂದೆ ನೀವು ತಂದ ಕಥೆ ಪುಸ್ತಕವೊಂದರ ಬಗ್ಗೆ ಆತ ನೆನಪಿಸಿದಾಗ, ಮನೆಯೆಲ್ಲಾ ಶೋಧಿಸಿದರೂ ಆ ಪುಸ್ತಕ ಸಿಗದಿದ್ದಾಗ

(ಅ) ಆ ಕೂಡಲೇ ಅದೇ ಪುಸ್ತಕದ ಇನ್ನೊಂದು ಪ್ರತಿಯನ್ನು ಖರೀದಿಸಿ ಗೆಳೆಯನಿಗೆ ನೀಡಿ ನಡೆದ ತಪ್ಪಿಗೆ ಕ್ಷಮೆಯಾಚಿಸುವಿರಿ;

(ಆ) ಪುಸ್ತಕವನ್ನು ಅದಾಗಲೇ ಅವನೂ ಓದಿರುವುದನ್ನು ಗಮನದಲ್ಲಿಟ್ಟುಕೊಂಡು, ಬರೇ ಮಾತಿನಲ್ಲೇ ಕ್ಷಮೆ ಯಾಚಿಸಿ ಸುಮ್ಮನಾಗುವಿರಿ;

(ಇ) ಇನ್ನೂ ಓದಿ ಮುಗಿಸಿಲ್ಲ, ಇನ್ನೆರಡು ದಿನ ಇಟ್ಟುಕೊಂಡು ಆ ಬಳಿಕ ಕೊಡುತ್ತೇನೆಂದು ಸುಳ್ಳು ಹೇಳಿ ಆ ಕ್ಷಣ ತಪ್ಪಿಸಿಕೊಳ್ಳುವಿರಿ;

೬: ಗಣ್ಯ ವ್ಯಕ್ತಿಯೊಬ್ಬರೊಡನೆ ಪರಿಚಯಿಸಿಕೊಳ್ಳುವ ಸಂದರ್ಭ ಅನಿರೀಕ್ಷಿತವಾಗಿ ಎದುರಾದಾಗ, ಪ್ರಮಾದವಶಾತ್ ನಿಮ್ಮನ್ನು ಪರಿಚಯಿಸಿಕೊಡಬಲ್ಲ ವಿಸಿಟಿಂಗ್ ಕಾರ್ಡಿನ ಮಾಸಿ ಹಳತಾದ ಒಂದೇ ಒಂದು ಪ್ರತಿ ಮಾತ್ರ ನಿಮ್ಮಲ್ಲಿ ಇದ್ದಾಗ ನೀವು

(ಅ) ಆ ಕೂಡಲೇ ಗುರುತು ಪತ್ರ ಮುಗಿದಿರುವ ಬಗ್ಗೆ ಪಶ್ಚಾತ್ತಾಪ ವ್ಯಕ್ತಪಡಿಸುತ್ತಾ, ಕಾಗದದ ಹಾಳೆಯೊಂದರ ಮೇಲೆ ನಿಮ್ಮ ಹೆಸರು, ವಿಳಾಸ, ಫೋನು ನಂಬರು, ವ್ಯವಹಾರ ಸಮಯ ಇತ್ಯಾದಿ ವಿವರಗಳನ್ನು ಸ್ಫುಟವಾಗಿ ಬರೆದು ಅವರಿಗೆ ನೀಡುವಿರಿ;

(ಆ) ಅದೇ ಹಳೆಯ ಕಾರ್ಡನ್ನು ಕ್ಷಮಿಸುವಂತೆ ಹೇಳಿ ನೀಡುವಿರಿ;

(ಇ) ಬರೇ ಬಾಯಿ ಮಾತಿನಲ್ಲೇ ನಿಮ್ಮ ವಿಳಾಸ ಇತ್ಯಾದಿಗಳನ್ನು ಹೇಳಿ, ಆಮೇಲೆ ಪತ್ರ ಮುಖೇನ ವಿವರವಾಗಿ ಬರೆದು ಸಂಪರ್ಕಿಸುವುದಾಗಿ ತಿಳಿಸುವಿರಿ.

೭: ಮದುವೆ ಸಮಾರಂಭವೊಂದರಲ್ಲಿ ಭಾಗವಹಿಸುತ್ತಿದ್ದಂತೆ ಸಿಗರೇಟು ಸೇದಲೇಬೇಕೆಂಬ, ಬಯಕೆ ನಿಮ್ಮಲ್ಲಿ ಪ್ರಬಲವಾಗಿ ಮೂಡಿದಾಗ (ಸಿಗರೇಟು ಚಟವಿಲ್ಲದವರು ಬರೆ ಊಹೆ ಮಾತ್ರ ಮಾಡಿ)

(ಅ) ಸುತ್ತಮುತ್ತಲಿರುವವರನ್ನೆಲ್ಲಾ ಕಡೆಗಣಿಸಿ, ಸಿಗರೇಟು ಹಚ್ಚಿಕೊಂಡುಆಹ್ಲಾದಕರವಾಗಿ ಸೇದಲಾರಂಭಿಸುವಿರಿ;

(ಆ) ಅಕ್ಕಪಕ್ಕದಲ್ಲಿರುವ ಕೆಲವರಾದರೂ ಹೊರ ಹೋಗುವ ವರೆಗೆ ಕಾದು, ಆ ಬಳಿಕ ಸಿಗರೇಟು ಹಚ್ಚುವಿರಿ;

(ಇ) ಸಿಗರೇಟು ಸೇದುವಲ್ಲಿ ಅತ್ತಿತ್ತ ಕುಳಿತವರ ಒಪ್ಪಿಗೆ ಪಡೆದೇ ಸಿಗರೇಟು ಹಚ್ಚುವಿರಿ.

೮. 'ಬಫೆ' ಊಟದ ಪಾರ್ಟಿಯೊಂದರಲ್ಲಿ ಮಾಂಸಾಹಾರದ ಖಾದ್ಯವೊಂದನ್ನು ಪ್ರಮಾದವಶಾತ್ ಕಟ್ಟಾ ಸಸ್ಯಹಾರಿಯಾದ ನಿಮ್ಮ ತಾಟಿನಲ್ಲಿ ನೀವೇ ಬಡಿಸಿಕೊಂಡು, ಆ ಬಳಿಕ ತಪ್ಪು ತಿಳಿದುಕೊಂಡಾಗ

(ಅ) ಇತರರಾರೂ ಗಮನಿಸಿರಲಾರರೆಂದುಕೊಂಡು ಊಟದ ತಾಟನ್ನು ಕೆಳಗಿಟ್ಟು, ಬೇರೆಯೇ ತಾಟೊಂದನ್ನು ನಿಮಗೆ ಬೇಕಾದುದನ್ನು ಮೌನವಾಗಿ ಪುನಃ ಬಡಿಸಿಕೊಂಡು ಊಟ ಮುಂದುವರಿಸುವಿರಿ;

(ಆ) ನಿಮ್ಮ ತಪ್ಪಿಗೆ ನೀವೇ ನಾಚಿಕೊಂಡು, ತಾಟು ಬದಲಾಯಿಸಿದಲ್ಲಿ, ಇತರರ ಗಮನ ಸೆಳೆಯುವುದು ಖಂಡಿತವೆಂಬ ಸಂಕೋಚದಿಂದ ಕಷ್ಟದಲ್ಲಿ ಊಟದ ಶಾಸ್ತ್ರದ ನಟನೆ ಮಾಡಿ ಮುಗಿಸುವಿರಿ;

(ಇ) ನಡೆದ ತಪ್ಪಿನ ಬಗೆಗೆ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾ, ತಾಟನ್ನು ಬದಲಾಯಿಸಿ, ಪುನಃ ಬೇರೆಯೇ ಸಸ್ಯಾಹಾರ ಊಟವನ್ನಾರಂಭಿಸುವಿರಿ.

೯: ಹಲವಾರು ದಿನಗಳಿಂದ ಭಾಗ ವಹಿಸಲೇಬೇಕೆಂದು ಬಯಸಿದ ನಿಮ್ಮ ಗಣ್ಯ ಹಾಗೂ ನಿಕಟ ಮಿತ್ರನೋರ್ವನು ನೀಡುವ ಬಿಜಿನೆಸ್ ಪಾರ್ಟಿಯೊಂದಕ್ಕೆ ಪ್ರಮಾದವಶಾತ್ ನಿಮ್ಮನ್ನಾತ ಆಮಂತ್ರಿಸಲು ಮರೆತಾಗ

ಅರಿಯದ ಕಂದನಂತಿರುವ
ನನ್ನ ಮದುವೆಯ ದಿನ
ಹಸೆಮಣೆಯ ಮೇಲೆ ನೀನು
ನೀರೆರೆಯಲು ಬಂದಾಗ

ಉಗುರು ಬೆಚ್ಚಗಿನ ನೀರಿನಲಿ
ನಿನ್ನ ಬೆಚ್ಚಗಿನ ಕಣ್ಣೀರಿನ ಹನಿ
ನನ್ನ ಎಚ್ಚರಗೊಳಿಸಿತು
ನಾನು ಕಂದನಲ್ಲವೆಂದು.

—ಪ್ರಕಾಶ ಪತಂಗೆ

(ಅ) ಗೆಳೆತನದ ಸಲಿಗೆಯಲ್ಲಿ, ಫೋನು ಮೂಲಕ ತನಗೆ ಆಮಂತ್ರಣ ಪತ್ರಿಕೆ ನೀಡದೆ ಇದ್ದುದಕ್ಕೆ ಕೋಪ ಪ್ರಕಟಿಸಿ, ಆ ಬಳಿಕ ಪರವಾಗಿಲ್ಲ ತಾನೂ ಬಂದೇ ಬರುತ್ತೇನೆ ಎಂದು ಹೇಳಿ, ಪಾರ್ಟಿಗೆ ಹೋಗುವಿರಿ;

(ಆ) "ಆಮಂತ್ರಣ ಪತ್ರ ಆದಾಗಲೇ ಕೈಸೇರಿದೆ—ಧನ್ಯವಾದಗಳು, ಸಮಯಕ್ಕೆ ಸರಿಯಾಗಿ ಬರುತ್ತೇನೆ" ಅಂತ ಫೋನು ಮೂಲಕ ಗೆಳೆಯನಿಗೆ ತಿಳಿಸಿ, ಉಪಾಯಾಂತರವಾಗಿ ಪಾರ್ಟಿಯೊಳಗೆ ನುಸುಳಿಕೊಳ್ಳುವಿರಿ;

(ಇ) ಆಮಂತ್ರಣವಿಲ್ಲದರ ಬಗ್ಗೆ ಬೇಸರವಾದರೂ ಹೆಚ್ಚು ತಲೆ ಕೆಡಿಸಿಕೊಳ್ಳದೆ ಸುಮ್ಮನೆ ಇರುವಿರಿ.

೧೦. ನಿಮ್ಮ ಮಿತ್ರನೋರ್ವನು ದೇಹ ಪರಿಸ್ಥಿತಿಗೆ ವ್ಯತಿರಿಕ್ತವಾದ, ನವ್ಯ ಮಾದರಿಯ ಬೆಲೆ ಬಾಳುವ ಹೊಸ ಸಿದ್ಧ ಉಡುಪೊಂದನ್ನು ಕೊಂಡುಕೊಂಡು ಅದನ್ನು ಧರಿಸುವಲ್ಲಿ ನಿಮ್ಮ ಸಲಹೆ ಕೇಳಲು ಬಂದಾಗ

(ಅ) "ಉಡುಪು ಚೆನ್ನಾಗಿಯೇ ಇದೆ, ಆದರೆ ನಿನ್ನ ಬಳಿ ಇರುವ ಆ ನಸುಗಂದು ಬಣ್ಣದ ಉಡುಪಿನಲ್ಲಿ ನೀನು ಚೆನ್ನಾಗಿ ಕಾಣುತ್ತೀಯಾ" ಅನ್ನುವಿರಿ;

(ಆ) "ನಿನ್ನ ಆಯ್ಕೆ ತೀರಾ ವ್ಯತಿರಿಕ್ತವಾಗಿದೆ; ಇದನ್ನು ಧರಿಸಿದರೆ ಒಳ್ಳೇ 'ಬಫೂನ್' ತರಹ ಕಾಣ್ತೀಯಾ..." ಎಂದು ಗೆಳೆತನದ ಸಲಿಗೆಯಲ್ಲಿ ಕಟುವಾಗಿ ಟೀಕಿಸುವಿರಿ;

(ಇ) ಗೆಳೆಯನಿಗೆ ಮನ ನೋಯಿಸದಂತೆ ಅವನಿಗೆ ಬೇಕಾದ ರೀತಿಯಲ್ಲೇ "ವಾಹ್" ನಿನ್ನ ಆಯ್ಕೆ ಅಂದ್ರೆ "ಏನೆನ್ನಲಿ...ಅತ್ಯುತ್ತಮ" ಎಂದು ಹುಸಿ ನುಡಿದು ಹುರಿದುಂಬಿಸುವಿರಿ.

## ಅಂಕ ಗಣನೆ

ನಿಮ್ಮ ಪ್ರತಿ ಸರಿ ಉತ್ತರಕ್ಕೆ ಒಂದು ಅಂಕದ ಪ್ರಕಾರ ಕೂಡಿಸಿಕೊಂಡು, ಒಟ್ಟಿಗೆ ಹತ್ತರಲ್ಲಿ ಎಷ್ಟು ಅಂಕ ಗಳಿಸಿರುವಿರೆಂಬುದನ್ನು ನೋಡಿಕೊಳ್ಳಿ. ಆ ಬಳಿಕ ನಿಮ್ಮ "ಸಂಭಾವಿತತನ"ವನ್ನು ಈ ಕೆಳಗಿನಂತೆ ನಿರ್ಧರಿಸಿ.

(೧) ೯ ರಿಂದ ೧೦ ಅಂಕ ಗಳಿಸಿದವರು, ನಿಮ್ಮ ಸಂಭಾವಿತತನದ ಬಗ್ಗೆ ಸಂದೇಹವೇ ಬೇಡ. ಯಾವುದೇ ಸಂದರ್ಭವನ್ನು ನೀವು ಸಲೀಸಾಗಿ ಎದುರಿಸಿ ಜಯಿಸಬಲ್ಲಿರಿ.

(೨) ೬ ರಿಂದ ೮ ರ ವರೆಗೆ ಅಂಕ ಗಳಿಸಿದವರು. ನಿಮ್ಮಲ್ಲಿ ಸಂಭಾವಿತತನ ಸುಮಾರಾಗಿದ್ದರೂ ಸಂದರ್ಭೋಚಿತವಾಗಿ ಕೆಲವೊಮ್ಮೆ ಕುಂಠಿತವಾಗಬಹುದಾಗಿದ್ದು, ಸ್ವಲ್ಪ ಮುಂಜಾಗರೂಕತೆಯಿಂದ ವ್ಯವಹರಿಸಿದಲ್ಲಿ ಜೀವನವು ನಿಮಗೆ ಖಂಡಿತ ಸುಖಕರವಾಗಬಲ್ಲದು.

(೩) ೫ ಹಾಗೂ ೫ ಕ್ಕಿಂತ ಕಡಿಮೆ ಅಂಕ ಗಳಿಸಿದವರು ನಿಮ್ಮನ್ನು ಅಸಂಭಾವಿತರೆಂದು ಕರೆಯುವುದು ಸರಿಯಲ್ಲವಾದರೂ, ಜೀವನವನ್ನು ಯಶಸ್ವಿಯಾಗಿಸುವಲ್ಲಿ, ನಿಮ್ಮ ಸಂಕುಚಿತ ಮನೋಭಾವಗಳನ್ನು ನೀವು ತೊರೆದು, ಸಭ್ಯ ನಡತೆಗಳೇ ಮನುಷ್ಯನಿಗೆ ಆದರ್ಶವೆಂಬುದನ್ನು ಅರಿತು, ನಿಮ್ಮನ್ನು ನೀವೇ ತಿದ್ದಿಕೊಂಡು, ಮಾನಸಿಕವಾಗಿ ವಿಕಸಿತರಾಗುವುದು ಎಲ್ಲ ರೀತಿಯಲ್ಲಿಯೂ ನಿಮಗೆ ಉಚಿತ. ✡

ಸರಿ ಉತ್ತರಗಳಿಗಾಗಿ ಪುಟ ೧೦೦ ನೋಡಿರಿ.



"ಇನ್‌ಸ್ಪೆಕ್ಟರ್ ಸಾಬ್, ನಿನ್ನೆ ಕಳವಾಯಿತೆಂದು ದೂರು ಕೊಟ್ಟೆನಲ್ಲ ನನ್ನ ಪರ್ಸು-ಅದು ಸಿಕ್ಕಿದೆ."

"ತೀರ ತಡವಾಯಿತು. ನಾವು ಈಗಾಗಲೇ ಕಳ್ಳನನ್ನು ಹಿಡಿದಾಗಿದೆ."

# ಜೀವದ ಜೀವಾಳ - ಉಸಿರಾಟ

ಡಾ. ಕೆ. ಎನ್. ಪೈ

ಮಗುವು ತಾಯಿಯ ಗರ್ಭದಲ್ಲಿರುವಾಗ ಅಸ್ತಿತ್ವದಲ್ಲಿರುವ ಒಂದು ಮಾದರಿಯ ಉಸಿರಾಟದ ವ್ಯವಸ್ಥೆಯು ಜನನಕಾಲದಲ್ಲಿ ಥಕ್ಕನೆ ಕೊನೆಗೊಳ್ಳುವುದು. ಇದರ ಪರಿಣಾಮವಾಗಿ ಮಗುವಿನ ರಕ್ತದಲ್ಲಿ ಉಂಟಾಗುವ ಆಮ್ಲಜನಕದ ಕೊರತೆಯಿಂದಲೂ ಅದೇ ಸಮಯದಲ್ಲಿ ಏರುತ್ತಿರುವ ಇಂಗಾಲಾಮ್ಲದ ಪ್ರಮಾಣದಿಂದಲೂ ಹಾಗೂ ಇನ್ನಿತರ ಕಾರಣಗಳಿಂದಲೂ ಮಿದುಳಿನಲ್ಲಿರುವ ಶ್ವಾಸಕ್ರಿಯೆಗೆ ಸಂಬಂಧಪಟ್ಟ ಕೇಂದ್ರವು ತೀವ್ರವಾಗಿ ಪ್ರಚೋದಿಸಲ್ಪಡುವುದು. ಆಗ ಅದರ ಆದೇಶದಂತೆ ಮಗುವು ದೀರ್ಘವೂ ಆಳವೂ ಆದ ಉಸಿರನ್ನು ಎಳೆದು, ಜೀವಕಳೆ ಹೊಂದಿ, ತನ್ನದೇ ಆದ ಅಸ್ತಿತ್ವವನ್ನು ಪಡೆಯುವುದು. ಮೊದಲಿನ ಕೆಲವು ದಿನಗಳಲ್ಲಿ ನಿಮಿಷಕ್ಕೆ ಸುಮಾರು ೫೬–೬೦ರ ವೇಗದಲ್ಲಿ ನಡೆಯುವ ಈ ಕ್ರಿಯೆಯು ಅಷ್ಟು ಕ್ರಮಬದ್ಧವಾಗಿರದಿದ್ದರೂ, ಕಾಲಕ್ರಮೇಣ ಸ್ತಿಮಿತಕ್ಕೆ ಬಂದು, ಕೊನೆಗೆ ತಾಳಬದ್ಧವಾಗಿಯೂ ಸ್ವಲ್ಪ ಆಳವಾಗಿಯೂ ನಿಮಿಷಕ್ಕೆ ೧೬–೧೮ರಂತೆ ನಡೆಯುವುದು ಕಂಡುಬರುತ್ತದೆ. ಮುಂದೆ ಕೊನೆಯುಸಿರಿನ ತನಕ ಜಾಗ್ರುತಾವಸ್ಥೆಯಲ್ಲಿಯೂ ನಿದ್ರಾಕಾಲದಲ್ಲಿಯೂ ಅವಿಶ್ರಾಂತವಾಗಿ ನಡೆಯುವ ಈ ಚಟುವಟಿಕೆಯನ್ನು ಜೀವದ ಜೀವಾಳವೆಂದೇ ಹೇಳಬೇಕು.

## ಸೃಷ್ಟಿಚಾತುರ್ಯ

ಇದು ಅಷ್ಟು ಪ್ರಾಮುಖ್ಯವೆಂದಮೇಲೆ ಇದರ ನುನ್ನಡೆಗೆ ಪ್ರಕೃತಿಯು ಒದಗಿಸಿ ಕೊಟ್ಟ ವ್ಯವಸ್ಥೆಯು ಕೂಡ ಅದ್ವಿತೀಯವಾಗಿರಬೇಕು. ವಾಸ್ತವಿಕವಾಗಿ ಈ ವ್ಯವಸ್ಥೆಯು ಪರಿಪೂರ್ಣವಾಗಿದ್ದು, ಇದನ್ನು ಕಿಂಚಿತ್ತು ಉತ್ತಮಗೊಳಿಸಬಹುದಾದ ಕಲ್ಪನೆಯೂ ಮಾನವನಿಗೆ ನಿಲುಕದ ವಿಚಾರವಾಗಿರುತ್ತದೆ. ಕೋಮಲವಾದ ಶ್ವಾಸ

ಕೋಶಗಳನ್ನು ಹಿಗ್ಗುವ ಹಾಗೂ ಕುಗ್ಗುವ ಅಸ್ಥಿಪಂಜರದಲ್ಲಿ ಭದ್ರವಾಗಿ ಇಟ್ಟಿರುವ ಸ್ಥೂಲ ವಿಚಾರವು ಎಲ್ಲರಿಗೂ ತಿಳಿದದ್ದೆ. ಆದರೆ ಅವುಗಳಲ್ಲಿ ಅತ್ಯಂತ ಸಮರ್ಪಕವಾಗಿ ಉಸಿರಾಟದ ಕೆಲಸವು ನಡೆಯಲು ಉಂಟಾಗಿರುವ ಸೂಕ್ಷ್ಮ ವ್ಯವಸ್ಥೆಯು ವಿಸ್ಮಯಕರವಾಗಿರುತ್ತದೆ. ಶ್ವಾಸಕೋಶಗಳ ಚಿಕ್ಕ ಚಿಕ್ಕ ಗಾಳಿ ಚೀಲಗಳ ಸಂಖ್ಯೆ ಸುಮಾರು ಏಳೂವರೆ ಕೋಟಿಯಷ್ಟು. ಅವುಗಳನ್ನೆಲ್ಲಾ ಬಿಚ್ಚಿ ಹಾಸಿದರೆ ಆಗುವ ಒಟ್ಟು ವಿಸ್ತೀರ್ಣ ಸುಮಾರು ಹತ್ತು ಲಕ್ಷ ಚದರ ಸೆಂಟಿಮೀಟರಿನಷ್ಟು. ಮನುಷ್ಯನು ತನ್ನ ಜೀವಿತ ಕಾಲದಲ್ಲಿ ಸುಮಾರು ನೂರು ಕೋಟಿ ಸಲ ಉಸಿರಾಡುವನು. ಒಂದು ದಿನದ ಸುಮಾರು ೨೬,೦೦೦ ಉಸಿರಾಟಗಳಲ್ಲಿ ಶ್ವಾಸಕೋಶಗಳನ್ನು ಸೇರಿ ಹೊರ ಹಾಕಲ್ಪಡುವ ಗಾಳಿಯ ಘನ ಪ್ರಮಾಣವು ಸುಮಾರು ೧೩,೦೦೦ ಲೀಟರಿನಷ್ಟು! ಶ್ವಾಸಕೋಶಗಳ ರೋಮನಾಳಗಳ ಜಾಲರಿಯು ಸುಮಾರು ಇಪ್ಪತ್ತು ಕೋಟಿ ಚದರ ಸೆಂಟಿ-ಮೀಟರುಗಳಷ್ಟು ವಿಸ್ತೀರ್ಣವಾಗಿದ್ದು, ಅವುಗಳಲ್ಲಿ ಹರಿಯುವ ರಕ್ತದ ಪ್ರಮಾಣವು ದಿನವೊಂದಕ್ಕೆ ಸುಮಾರು ೧೨೦೦೦ ಲೀಟರಿನಷ್ಟು! ಗಾಳಿಯಲ್ಲಿ-ರುವ ಆಮ್ಲಜನಕ ಹಾಗೂ ರಕ್ತದಲ್ಲಿರುವ ಇಂಗಾಲಾಮ್ಲಗಳ ಪರಸ್ಪರ ವಿನಿಮಯಕ್ಕಾಗಿ ಅವು ಬರೇ ೧ ಸೆಂಟಿಮೀಟರಿನಷ್ಟು ತೆಳುವಾದ ೨೫೦೦ ಪರೆಯಿಂದ ಮಾತ್ರ ಬೇರ್ಪಟ್ಟು, ಅತ್ಯಂತ ಸನಿಯಕ್ಕೆ ಬರಲು ಆಸ್ಪದವಾಗಿದೆ. ಜೊತೆಗೆ ಆಂತರಿಕ ಹಾಗೂ ಬಾಹ್ಯ ವಾತಾವರಣಗಳ ಬದಲಾವಣೆಗಳಿಗೂ ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಸ್ಥಿತಿಗತಿಗಳಿಗೂ ಹೊಂದಿಕೊಂಡು ಹೋಗಲು ಏರ್ಪಟ್ಟ ಈ ಅತ್ಯಂತ ನಾಜೂಕಿನ ವ್ಯವಸ್ಥೆಯು ಸಮರ್ಪಕವಾಗಿದ್ದು ಆಳವಾಗಿ ಅಭ್ಯಸಿಸಿದಷ್ಟು ಗಹನವಾಗಿರುವುದು ಕಂಡುಬರುತ್ತದೆ.

ಉಸಿರಾಟದ ವೇಗಕ್ಕೂ ಆಯುಷ್ಯಕಾಲಕ್ಕೂ ಪ್ರಕೃತಿಯಲ್ಲಿ ಒಂದು ಸಂಬಂಧವಿದ್ದಂತೆ ಕಾಣುತ್ತದೆ. ಈ ಕೆಳಗಿನ ಸಂಖ್ಯೆಗಳು ಇದಕ್ಕೆ ಸಾಕ್ಷಿ. ಉಸಿರಾಟದ ವೇಗವು ಕಡಿಮೆಯಾದಂತೆ ಆಯುಃಪ್ರಮಾಣ ಏರುವುದು ಕಂಡುಬರುತ್ತದೆ. ಮನುಷ್ಯನ ಜೀವಿತಕಾಲವೇ ಒಂದು ನಿರ್ದಿಷ್ಟವಾದ ಉಸಿರಾಟಗಳ ಸಂಖ್ಯೆಗೆ ಸೀಮಿತವಾಗಿದೆ ಎಂದು ಅಂದುಕೊಂಡರೆ, ಯಾರು ಆಳವಾಗಿಯೂ ನಿಧಾನವಾಗಿಯೂ ಉಸಿರಾಡುವರೋ ಅವರು ದೀರ್ಘಕಾಲ ಬದುಕಬಲ್ಲರು. ಹಾಗೆಯೆ ಯಾರು ವೇಗಗತಿಯಿಂದ ಮೇಲ್ಮೈಯ ಉಸಿರಾಟವಾಡುವರೋ ಅವರ ಆಯುರ್ಮಾನವು ಕುಂಠಿತವಾಗು-ವುದೆನ್ನಬಹುದು. ನಿದ್ರೆ, ಮಾತು, ಆಟ, ಓಟ, ಲೈಂಗಿಕ ಕ್ರಿಯೆಗಳಿಂದ ಉಸಿರಾಟದ ವೇಗವು ಜಾಸ್ತಿ ಆಗುವುದರಿಂದ ಈ ವಿಚಾರಗಳಲ್ಲಿ ಪ್ರಕೃ-ತಿಯ ನಿಯಮಕ್ಕೆ ಅನುಗುಣವಾದ ಮಟ್ಟಕ್ಕಿಂತ ಮೀರಿ ನಡೆದರೆ ಮಾನವನು ರೋಗಗ್ರಸ್ತನಾಗಿ ಆಯುಃಪ್ರಕಾಲವು ಕಡಿಮೆ ಆಗುವುದು. ಜಪ, ಧ್ಯಾನಗಳ ಕಾಲದಲ್ಲಿ ಉಸಿರಾಟವು ನಿಧಾನವಾಗಿ ನಡೆಯುವುದರಿಂದ ಆರೋಗ್ಯವು ವೃದ್ಧಿಯಾಗಿ ಆಯುಷ್ಯ ಹೆಚ್ಚುವುದು.

## ಪ್ರಾಣಾಯಾಮ

ಪ್ರಾಣಾಯಾಮವೆಂದರೆ ಶ್ವಾಸಕೋಶಗಳ ಚಲನೆಯನ್ನು ಹತೋಟಿಗೆ ತರುವುದು. ಅಂದರೆ ಅವುಗಳನ್ನು ಚಲಿಸುವಂತೆ ಮಾಡುವ ಮಾಂಸ-ಖಂಡಗಳ ಮೇಲಿನ ನಿಯಂತ್ರಣ – ಮಾಂಸಖಂಡಗಳ ಚಲನೆಗೆ ಸಂಬಂಧಪಟ್ಟ ನರಗಳ ನಿಯಂತ್ರಣ ಮತ್ತು ಈ ನರಗಳನ್ನು ಆದೇಶಿಸುವ ಮಿದುಳಿನಲ್ಲಿರುವ ಕೇಂದ್ರದ ನಿಯಂತ್ರಣವಾಗಿರು-ತ್ತದೆ. ನಿಯಮಬದ್ಧವಾದ ಉಸಿರಾಟದಿಂದ ದೇಹಕ್ಕೆ ಸಹಜವಾದ ವಿಶ್ರಾಂತಿ ದೊರಕುವುದು. ಶ್ವಾಸಕೋಶಗಳನ್ನು ವ್ಯವಸ್ಥೆಗೊಳಿಸುವ ಕೇಂದ್ರಕ್ಕೆ ನರಗಳ ನಿಗ್ರಹದ ಕೇಂದ್ರದ ಮೇಲೆ ಒಂದು ರೀತಿಯ ಸ್ವಾಧೀನತೆ ಇರುವುದ-ರಿಂದ ಪ್ರಾಣಾಯಾಮವು ಉಳಿದ ಕೇಂದ್ರಗಳನ್ನು ಸ್ವಾಧೀನಕ್ಕೆ ತರಲು ಸಹಾಯ ಮಾಡುತ್ತದೆ. ಆದರೆ ಈ ಕಷ್ಟಕರ ಸಾಧನೆಗೆ ಸರಿಯಾದ ಮಾರ್ಗ

ದರ್ಶನ ಹಾಗೂ ನಿಯಮಬದ್ಧ ಜೀವನ ಕ್ರಮವೂ ಅಗತ್ಯ. ಇಲ್ಲದಿದ್ದರೆ ಅದು ಅಪಾಯಕರವಾಗಿ ಪರಿಣಮಿಸಬಹುದು.

## ಸರಿಯಾದ ಉಸಿರಾಟ

ನಾವೆಲ್ಲರೂ ಉಸಿರಾಡುವವರೇ ಆದರೂ ಉಸಿರಾಟದ ಗುಣಮಟ್ಟದಲ್ಲಿ ಎಲ್ಲರೂ ಒಂದೇ ಆಗಿರುವುದಿಲ್ಲ. ಸ್ತ್ರೀಯರಿಗೂ ಪುರುಷರಿಗೂ ನೈಸರ್ಗಿಕ ವ್ಯತ್ಯಾಸಗಳಿವೆ. ಮಾನವನು ನಾಗರಿಕತೆಯಲ್ಲಿ ಮುಂದುವರಿದಂತೆ ಪ್ರಕೃತಿಯಿಂದ ದೂರ ಸರಿದು ಕೃತ್ರಿಮತೆಯ ಕಡೆಗೆ ವಾಲುತ್ತಿದ್ದು ಅದರ ಪರಿಣಾಮ ಅವನ ಶ್ವಾಸ ಕ್ರಿಯೆಯ ಮೇಲೂ ಆಗದೆ ಇಲ್ಲ. ಇಂದಿನ ಕಾಲದಲ್ಲಿ ಚಿಕ್ಕ ಮಕ್ಕಳಲ್ಲಿ ಮತ್ತು ಪ್ರಾಯಶಃ ಕಾಡು ಮನುಷ್ಯರಲ್ಲಿ ಮಾತ್ರ ಅದು ನೈಸರ್ಗಿಕವಾಗಿದ್ದು ಇತರರಲ್ಲಿ ಅವ್ಯವಸ್ಥೆಯಿಂದ ಕೂಡಿರುತ್ತದೆ. ಬಾಯಿಯಿಂದ ಉಸಿರಾಡುವುದು ಇಲ್ಲವೆ ಬಾಯಿ ತೆರೆದು ಮಲಗುವುದು ಪ್ರಕೃತಿಯಲ್ಲಿ ಮನುಷ್ಯನನ್ನು ಬಿಟ್ಟು ಬೇರೆ ಯಾವ ಪ್ರಾಣಿಯಲ್ಲಿಯೂ ಕಂಡು ಬರುವುದಿಲ್ಲ.

ಮೇಲ್ಮೈ ಉಸಿರಾಟದಿಂದ ಎಲ್ಲ ಅಂಗಾಂಗಗಳೂ ಗ್ರಂಥಿಗಳೂ ಸಾಕಷ್ಟು ಪ್ರಮಾಣದಲ್ಲಿ ಆಮ್ಲಜನಕವನ್ನು ಪಡೆಯದೇ, ಗಾಳಿಯ ಅಭಾವದಿಂದ ಮಂದವಾಗಿ ಉರಿಯುವ ದೀಪದಂತೆ ಕ್ಷೀಣಗೊಳ್ಳುವವು. ದೋಷಪೂರಿತ ಉಸಿರಾಟದಿಂದ ಜೋಲು ಭುಜಗಳು, ಸಪೂರವಾದ ಎದೆ, ಕಾಂತಿರಹಿತ ಚರ್ಮ, ದೃಷ್ಟಿದೋಷ, ಕುಂದಿದ ಪಚನ ಶಕ್ತಿ, ನಿದ್ರೆಯ ಅಭಾವ, ವಿಸ್ಮೃತಿ ಮುಂತಾದುವುಗಳು ಹುಟ್ಟಿಕೊಳ್ಳುವವು. ಕಾರಣ ಸರಿಯಾದ ಉಸಿರಾಟದ ಕ್ರಮ ಆರೋಗ್ಯ ಪಾಲನೆಗೆ ಅನಿವಾರ್ಯ.

ಧೂಮಪಾನವು ಉಸಿರಾಟದ ಅಂಗಾಂಗಗಳ ಒಳಪರೆಯನ್ನು ಕೆರಳಿಸುವುದರಿಂದ ಬಹು ಕಾಲದ ಸೇವನೆಯಿಂದ ಇದು ಶ್ವಾಸಕೋಶಗಳ ಕ್ಯಾನ್ಸರಿಗೆ ಕಾರಣವಾಗಬಹುದು. ಇದರ ಹವ್ಯಾಸವಿದ್ದವರಲ್ಲಿ ಈ ಮಾರಕ ಕಾಯಿಲೆಯು ಇತರರಿಗಿಂತ ಸುಮಾರು ೧೪ ಪಾಲು ಜಾಸ್ತಿ ಕಂಡುಬರುತ್ತದೆ. 'ಕ್ರಾನಿಕ್ ಬ್ರಾಂಕೈಟಿಸ್' ಧೂಮಪಾನದಿಂದ ಉಂಟಾಗಬಹುದಾದ ಇನ್ನೊಂದು ರೋಗ. ಧೂಳು ತುಂಬಿದ ಕಲುಷಿತ ವಾತಾವರಣದಿಂದ 'ನ್ಯೂಮೋಕೋನಿಯೋಸಿಸ್' ಎಂಬುದು ಉತ್ಪತ್ತಿಯಾಗಬಹುದು. ಕಾರಣ ಶುದ್ಧ ಗಾಳಿಯ ಸೇವನೆಯು ಆರೋಗ್ಯ ದೃಷ್ಟಿಯಿಂದ ಅತಿ ಅಗತ್ಯ. ಮನುಷ್ಯನು ನಿದ್ರಾಕಾಲದಲ್ಲಿ ಸ್ವಾಭಾವಿಕವಾಗಿ, ಆಳವಾಗಿ ಉಸಿರಾಡುವ ಕಾರಣ, ಒಳ್ಳೆಯ ಗಾಳಿ ಸಂಚಾರವಿರುವ ಕೋಣೆಯಲ್ಲಿ – ಅದು ಕೂಡ ಕಿಟಕಿಯ ಬಳಿ – ಮಲಗುವುದು ಒಳ್ಳೆಯದು. ರಾತ್ರಿ ಕಾಲದಲ್ಲಿ ಗಿಡ ಮರಬಳ್ಳಿಗಳು ಉಸಿರಾಟದ ಕ್ರಿಯೆಯಿಂದ ಇಂಗಾಲಾಮ್ಲವನ್ನು ಹೊರಗೆ




"ನೀನು ಕೊಡ್ತಿರೋದು ಅಸಲಿ ಟಿಕೆಟ್ ತಾನೆ?"

ಬಿಡುವುದರಿಂದ ಅವುಗಳ ಸಮೀಪದಲ್ಲಿ ಮಲಗುವುದು ಒಳ್ಳೆಯದಲ್ಲ. ನಮ್ಮ ಚರ್ಮವು ಕೂಡ 'ಉಸಿರಾಡುವುದರಿಂದ' ಈ ಕ್ರಿಯೆಗೆ ಅನುಕೂಲವಾಗುವಂತೆ ನಮ್ಮ ಉಡುಪು ಹಿತಮಿತವಾಗಿರಬೇಕು. ಚಿಕ್ಕ ಮಗುವಿಗೆ ಥಂಡಿ ಹತ್ತುವ ಭೀತಿಯಿಂದ ತಾಯಿಯು ಮಗುವನ್ನು ದಪ್ಪದಪ್ಪ ಹೊದಿಕೆಯಿಂದ ಅತಿಯಾಗಿ ಮುಚ್ಚಿಸುವ ಅಭ್ಯಾಸ ಯೋಗ್ಯವಲ್ಲ. ವಾಯುವಿಹಾರವು ಹಿರಿಯರಿಗೂ ಕಿರಿಯರಿಗೂ ಪ್ರಯೋಜನಕರ.

## ಸಾಧನೆ

ಮನುಷ್ಯನ ಆರೋಗ್ಯ ರಕ್ಷಣೆಗೆ ದಿನವೊಂದಕ್ಕೆ ಸುಮಾರು ೬೦ ರಷ್ಟು ಆಳವಾದ ಉಸಿರಾಟಗಳು ಅಗತ್ಯವೆಂದು ಅಂದಾಜಿಸಲಾಗಿದೆ. ಆದರೆ ಇದನ್ನು ಹಂತಹಂತವಾಗಿ ಬೆಳೆಸಿಕೊಂಡು ಬರಬೇಕು. ದುಡುಕುತನದಿಂದ ಕೋಮಲವಾದ ಶ್ವಾಸಕೋಶಗಳಿಗೆ ಸರಿಪಡಿಸಲಾಗದ ಹಾನಿಯಾಗುವ ಸಾಧ್ಯತೆಯಿದೆ. ನಿರೀಕ್ಷಿತ ಮಟ್ಟಕ್ಕೆ ಬಂದ ನಂತರ ಸತತ ಸಾಧನೆಯಿಂದ ಮಾತ್ರ ಪ್ರಯೋಜನವು ಸಿಕ್ಕುವುದು. ಬೆಳಗ್ಗೆ ಹಾಗೂ ಸಾಯಂಕಾಲ ಅನೇಕರಿಗೆ ಅನುಕೂಲವಾಗುವ ಸಮಯ. ಪ್ರಾತರ್ವಿಧಿಗಳನ್ನು ಮುಗಿಸಿ ಉಪಾಹಾರದ ಮುಂಚೆ ಹಾಗೂ ಸಂಜೆ ಸೂರ್ಯಾಸ್ತದ ಸಮಯವನ್ನು ಇದಕ್ಕಾಗಿ ಆರಿಸಿಕೊಳ್ಳಬಹುದು. ಒಳ್ಳೆಯ ಗಾಳಿ ಓಡಾಡುವ ಕೋಣೆಯನ್ನು ಉಪಯೋಗಿಸಬೇಕು. ನೆಟ್ಟಗೆ ಕುಳಿತುಕೊಳ್ಳಬೇಕು ಅಥವಾ ನಿಂತುಕೊಳ್ಳಬೇಕು.

ಒಂದು ಮೂಗಿನ ರಂಧ್ರದಿಂದ ಗಾಳಿಯನ್ನು ಸಾವಕಾಶವಾಗಿ, ಒಂದೇ ವೇಗದಲ್ಲಿ ಸುಮಾರು ೩-೪ ಸೆಕೆಂಡುಗಳಷ್ಟು ಕಾಲ ಎಳೆದುಕೊಳ್ಳಬೇಕು. ನಂತರ ಈ ರಂಧ್ರವನ್ನೂ ಬೆರಳಿನಿಂದ ಮುಚ್ಚಿ ಗಾಳಿಯನ್ನು ೩-೪ ಸೆಕೆಂಡುಗಳಷ್ಟು ಕಾಲ ಒಳಗೆ ತಡೆ ಹಿಡಿಯಬೇಕು. ತದನಂತರ ಮತ್ತೊಂದು ಮೂಗಿನ ರಂಧ್ರದಿಂದ ಗಾಳಿಯನ್ನು ಅಷ್ಟೇ ಸಮಯದಲ್ಲಿ ಸಾವಕಾಶವಾಗಿ ಹೊರಹಾಕಬೇಕು. ಇದನ್ನೆಲ್ಲ ೫ ಸಲ ಪುನರಾವರ್ತಿಸಬೇಕು. ಮೂಗಿನ ರಂಧ್ರಗಳನ್ನು ಅದಲು ಬದಲಾಯಿಸಿ ಮತ್ತೊಮ್ಮೆ ೫ ಸಲ ಪುನರಾವರ್ತಿಸಬೇಕು. ಆರಂಭದಲ್ಲಿ ತಗಲುವ ೩ ನಿಮಿಷಗಳ ಈ ಕಾಲಾವಕಾಶವನ್ನು ಕ್ರಮೇಣ ೧೫ ನಿಮಿಷಗಳವರೆಗೆ ಏರಿಸಬಹುದು. ಇದರ ಸತತ ಸಾಧನೆಯಿಂದ ಉಸಿರಾಟದ ಒಟ್ಟು ಗುಣಮಟ್ಟ ಸುಧಾರಿಸಿ ಆರೋಗ್ಯ ಪಾಲನೆಯು ಸುಲಭವಾಗುವುದು. ಮಧ್ಯವಯಸ್ಸಿನಲ್ಲಿ ಅನೇಕ ಕಾರಣಗಳಿಂದ ಹೊರವಲಯದ ಆಟಗಳು ಅಸಾಧ್ಯವೆನಿಸಿದಾಗ ಹಾಗೂ ಇಳಿ ವಯಸ್ಸಿನಲ್ಲಿ ಶರೀರವು ದುರ್ಬಲಗೊಂಡಿರುವಾಗ ಈ ಸುಲಭ ವ್ಯಾಯಮವು ಅತ್ಯಂತ ಉಪಯುಕ್ತವಾಗಿರುತ್ತದೆ. ಅಸ್ತಮಾ ರೋಗಿಗೆ ಇದು ಪ್ರಯೋಜನಕರವೂ ಹೌದು. ಆಯಾಸಗೊಂಡ ಶರೀರಕ್ಕೆ ಶಕ್ತಿ ತುಂಬಲು ಆಳವೂ ಕ್ರಮಬದ್ಧವೂ ಆದ ಶ್ವಾಸಕ್ರಿಯೆಗಿಂತ ಉತ್ತಮವಾದದ್ದು ಬೇರೊಂದಿಲ್ಲ. ಆರೋಗ್ಯ ವೃದ್ಧಿಗೆ ಆಬಾಲವೃದ್ಧರೂ ಅನುಸರಿಸಬಹುದಾದ ಈ ಚಿಕಿತ್ಸಾ ಕ್ರಮವು ದೈಹಿಕ ಕಾಯಿಲೆಗಳಿಗೂ ಶೀಘ್ರ ಪರಿಣಾಮಕಾರಿ. ✡



ಫಿನ್ಲೆಂಡಿನ ಸುಪ್ರಸಿದ್ಧ ಸಂಗೀತಗಾರ ಸೈಬೀಲಿಯಸ್ ವಿಮರ್ಶಕರ ಬಗ್ಗೆ ಹೇಳಿರುವ ಮಾತುಗಳು ಸರ್ವಕಾಲಕ್ಕೂ ಸರ್ವದೇಶಗಳಲ್ಲೂ ಎಲ್ಲರೂ ಮೆಚ್ಚುವಂತಹವು. ಒಬ್ಬ ಯುವ ಸಂಗೀತಗಾರನಿಗೆ ಧೈರ್ಯ ತುಂಬುತ್ತ ಸೈಬೀಲಿಯಸ್ ಹೇಳಿದ : "ವಿಮರ್ಶಕರ ಮಾತುಗಳಿಗೆ ಕಿವಿಗೊಡಬೇಡ. ಪ್ರಪಂಚದಲ್ಲಿ ವಿಮರ್ಶಕನೊಬ್ಬನ ಪ್ರತಿಮೆಯನ್ನು ಎಲ್ಲಿಯಾದರೂ ನಿಲ್ಲಿಸಿದ್ದನ್ನು ನೀನು ನೋಡಿದ್ದೀಯಾ?"

–ಶೆಣೈ



ಮಾಸ್ಟಿಫ್



ಕಾಲೀ



ಸ್ಕಾಟಿಶ್

# ಶುನಕೋಪಾಖ್ಯಾನ

ಟಿ. ಎಂ. ಸುಬ್ಬರಾಯ

ನಾಯಿ ಮಾನವನ ನಂಬುಗೆಯ ಪ್ರಾಣಿ. ವಿಶ್ವಾಸಿ ಮಿತ್ರ, ನಮ್ರ ಸೇವಕ. ಪೋಲೀಸರ ಪಾಲಿಗೆ ಆಪದ್ಬಾಂಧವ. ಕೆಲವೆಡೆ ಸಾಗಾಟಕ್ಕೂ ಉಪಯೋಗಿ, ಸಂದೇಶ ವಾಹಕ. ಧರ್ಮರಾಯ ನಂತಹವರಿಗೆ ಮಾರ್ಗದರ್ಶಿ.

ನಾಯಿಗೂ ಮನುಷ್ಯನಿಗೂ ಇರುವ ಮೈತ್ರಿ ಪ್ರಾಯಶಃ ಹತ್ತು ಸಾವಿರ ವರುಷಗಳ ಹಿಂದಿನಷ್ಟು ಪ್ರಾಚೀನ. ಮಾನವ ಮೊದಲಿಗೆ ಸಾಕಲಾರಂಭಿಸಿದ್ದು ತೋಳಗಳನ್ನು. ಪಳಗಿಸಲ್ಪಟ್ಟ ಈ ತೋಳಗಳು ಅನ್ಯ ವನ್ಯಪ್ರಾಣಿಗಳಿಂದ ಮನುಷ್ಯನನ್ನು ರಕ್ಷಿಸಿದವು. ಇಂದಿನ ನಾಯಿಯ ಮೂಲ ತಳಿ ನರಿಯಲ್ಲ, ಯಾವುದೇ ಕಾಡು ನಾಯಿಯಲ್ಲ: ಬದಲು 'ತೋಳ' ಎಂಬುದು ಪ್ರಾಣಿಶಾಸ್ತ್ರಜ್ಞರ ತೀರ್ಮಾನ. ತೋಳಗಳ ಹಲವು ಲಕ್ಷಣಗಳು ನಾಯಿಗಳಲ್ಲಿರುವುದರಿಂದ, ಅದನ್ನು ಗಮನಿಸಿ. ಗುರುತಿಸಿ ಈ ತೀರ್ಮಾನ. ತೋಳದಂತೆ ನಾಯಿ ಬೇಟೆಯ ಬಗ್ಗೆ ಸದಾ ಆಸಕ್ತಿ ತಳೆದಿರುತ್ತದೆ. ಜೊತೆಯಾಗಿ ಬೇಟೆಯಾಡಲು ತೋಳಕ್ಕೂ ಇಷ್ಟ, ನಾಯಿಗೂ. ಮಲಗುವ ಮುನ್ನ ಅಲ್ಲಿಯೇ ಆಚೀಚೆ ಹಲವು ಬಾರಿ ತಿರುಗುವ ರೂಢಿ ತೋಳನದು. ನಾಯಿಯೂ ಮಲಗುವ ಮುನ್ನ ಹೀಗೆಯೇ ವರ್ತಿಸುತ್ತದೆ. ಕಾಡಿನ ಮೇಲೆ ತೋಳಕ್ಕೆ ವ್ಯಾಮೋಹವಿಲ್ಲ. ನಾಯಿಗೂ ಹಾಗೆಯೇ. ಕಡಿದ ಎಲುಬಿನ ತುಂಡನ್ನು ಪುನಃ ಕಡಿಯಲಾದೀತೆಂದು ಎಲ್ಲಾದರೂ ಅಡಗಿಸಿಟ್ಟು ಹೋಗುವ ಗುಣ ಎರಡೂ ಪ್ರಾಣಿಗಳಲ್ಲಿದೆ. ಎರಡೂ ಪ್ರಾಣಿಗಳ ಘ್ರಾಣೇಂದ್ರಿಯದ ಶಕ್ತಿ ಅಸಾಧಾರಣ. ಎರಡರ ಮೂಗಿನ ರಚನೆಯೂ ಒಂದೇ ಬಗೆ. ಆದರೆ, ಎರಡೂ ಪ್ರಾಣಿಗಳಲ್ಲಿ ಹೇಳಿಕೊಳ್ಳುವ ವ್ಯತ್ಯಾಸಗಳೂ ಇಲ್ಲದಿಲ್ಲ. ತೋಳ ಬೊಗುಳುವುದಿಲ್ಲ. ಬೇರೆ ಪ್ರಾಣಿಗಳನ್ನು ಹೆದರಿಸಲು, ಕೆಲವೊಮ್ಮೆ ಪೀಡಿಸಲು ನಾಯಿ ಬೊಗಳುವುದು. ಬಣ್ಣ, ರಚನೆ, ಗಾತ್ರಗಳಲ್ಲಿಯೂ ಎದ್ದುಕಾಣುವ ವ್ಯತ್ಯಾಸಗಳು ಎರಡು ಪ್ರಾಣಿಗಳ ನಡುವೆ ಇವೆ.

ಈಗಿನ ಬೇಟೆ ನಾಯಿಗಳ ರೀತಿಯ ದೊಡ್ಡ ನಾಯಿಗಳನ್ನು ಐದು ಸಾವಿರ ವರುಷಗಳ ಹಿಂದೆಯೇ ಇಜಿಪ್ತಿನವರು ಬೇಟೆಯಾಡಲು ಬಳಸುತ್ತಿದ್ದರು. ಸಿಂಹದ ಬೇಟೆಗಾಗಿ ಬಲಿಷ್ಠ ನಾಯಿಗಳನ್ನು ಮೆಸಪೊಟೇಮಿಯದವರು

ಬಳಸುತ್ತಿದ್ದರು. ಈ ನಾಯಿಯ ತಳಿಯನ್ನೇ ಫಿನಿಸಿಯನ್ನರು ಬ್ರಿಟನ್ನಿಗೆ ಕೊಂಡೊಯ್ದಿರಬಹುದೆನ್ನುವ ಊಹೆಯೊಂದನ್ನು ಬ್ರಿಟನ್ನಿನ ಪ್ರಾಣಿಶಾಸ್ತ್ರಜ್ಞರು ಮಾಡಿದ್ದಾರೆ.

ಸುಮಾರು ಇಪ್ಪತ್ತೆರಡು ಸಾವಿರಕ್ಕೂ ಹೆಚ್ಚು ಪ್ರಭೇದಗಳನ್ನು ಇದರಲ್ಲಿ ಗುರುತಿಸಲಾಗಿದೆ. ಪ್ರಥಮ ಹಾಗೂ ದ್ವಿತೀಯ ಮಹಾಯುದ್ಧಗಳಲ್ಲಿ ಅಲ್ಸೇಶಿಯನ್ ಹಾಗೂ ಜರ್ಮನ್ ಶೆಫರ್ಡ್ ನಾಯಿಗಳು ಸಲ್ಲಿಸಿದ ಸೇವೆ ಅನುಪಮ. ತುರ್ತು ವಸ್ತುಗಳನ್ನು ವಿತರಿಸುವುದು, ಸುದ್ದಿಗಳನ್ನು ರವಾನಿಸುವುದು, ವಿಮಾನ ನಿಲ್ದಾಣಗಳನ್ನು ರಕ್ಷಿಸುವುದು, ಕೈದಿಗಳನ್ನು ಕಾಯುವುದು, ಮುಂತಾದವುಗಳಲ್ಲಿ ಈ ನಾಯಿಗಳನ್ನು ಬಳಸಿ ಕೊಳ್ಳಲಾಗಿತ್ತು. ಜರ್ಮನ್ ಶೆಫರ್ಡ್ ಹಾಗೂ ಅಲ್ಸೇಶಿಯನ್ ತಳಿಗಳನ್ನಾಯ್ದು ಪೋಲೀಸ್ ನಾಯಿಗಳಾಗಿ ತರಬೇತಿ ನೀಡಲಾಗುತ್ತದೆ. ಆದರೆ, ಒಂದು ವಿಶೇಷವೆಂದರೆ, ಇವು ಅಪರಾಧಿಯನ್ನು ಕಂಡು ಹಿಡಿದರೂ ಯಜಮಾನನ ಆಜ್ಞೆಯಿಲ್ಲದೆ ಅಂಥ ಅಪರಾಧಿಯನ್ನು ಕಚ್ಚುವುದಿಲ್ಲ!

ತನ್ನ ಯಜಮಾನನೊಂದಿಗೆ ಮೈ ಬಗ್ಗಿಸಿ ದುಡಿಯುವ ನಾಯಿಗಳೆಂದರೆ ಸ್ವಿಟ್ಸರ್‌ಲಂಡಿನವು. ಉತ್ತರ ಧ್ರುವ ಪ್ರದೇಶದ ಹಸ್ಕಿ ಮತ್ತು ಸಮೋಯೆಡ್ ಪ್ರಾಣಿಗಳಂತೆ ಇವು ಜಾರು ಬಂಡಿಗಳನ್ನು ಎಳೆದೊಯ್ಯುತ್ತವೆ. ಪ್ರಪಂಚದಲ್ಲಿರುವ ಸುಮಾರು ಇಪ್ಪತ್ತೆರಡು



ಬೀಗಲ್



ಅಲ್ಸೇಶಿಯನ್

ಸಾವಿರ ನಾಯಿ ತಳಿಗಳಲ್ಲಿ ಸುಮಾರು ೨೬೦ ಶುದ್ಧ ತಳಿಗಳು. ಮಿಕ್ಕವು ಸಂಕರ ತಳಿಯವು. ಶುದ್ಧ ತಳಿಗಳಲ್ಲಿ ಆರು ವಿಭಾಗಗಳು; ಪಂದ್ಯಾಟದ ನಾಯಿಗಳು, ಬೇಟೆ ನಾಯಿಗಳು, ದುಡಿಮೆಗಾರ ನಾಯಿಗಳು, ಟೆರಿಯರ್ ನಾಯಿಗಳು, ಪಂದ್ಯೇತರ ನಾಯಿಗಳು, ಮುದ್ದು ನಾಯಿಗಳು.

ನಾಯಿಗಳು ಚತುಷ್ಪಾದಿಗಳು. ಬೆಕ್ಕುಗಳಿಗಿರುವಂತೆ ಮುಂಗಾಲ ಪಾದಗಳಲ್ಲಿ ಐದೈದು ಉಗುರುಗಳೂ ಹಿಂಗಾಲ ಪಾದಗಳಲ್ಲಿ ನಾಲ್ಕು ನಾಲ್ಕು ಉಗುರುಗಳೂ ನಾಯಿಗಿರುತ್ತವೆ. ನಾಯಿಗಳ ಬಣ್ಣ, ಗಾತ್ರ, ತುಪ್ಪಟ ಬೆಳೆದ ರೀತಿ ಮತ್ತು ತೂಕ ಇವುಗಳಲ್ಲಿ ವೈವಿಧ್ಯ ಬಹಳ. ಪುಟ್ಟ ಚಿಹುವಾ ನಾಯಿಯ ತೂಕ ಕೇವಲ ಒಂಬತ್ತು ಕಿಲೋಗ್ರಾಮುಗಳಷ್ಟಾದರೆ ಸ್ಯೆಂಟ್ ಬರ್ನಾಡ್ ನಾಯಿಯ ತೂಕ ೬೮ ಕಿಲೋಗ್ರಾಮುಗಳಷ್ಟು.

ನಾಯಿಗಳು ಅತಿ ಬುದ್ಧಿವಂತ ಜೀವಿಗಳು. ಅವುಗಳನ್ನು ಪಳಗಿಸುವುದೂ ಸುಲಭ. ಒಡೆಯನ ಇಂಗಿತಗಳನ್ನೂ ಭಾಷೆಯನ್ನೂ ನಾಯಿಗಳು ಜ್ಞಾಪಕದಲ್ಲಿಟ್ಟು ಆಣತಿಯನ್ನು ಪಾಲಿಸುತ್ತವೆ. ಸೂಕ್ತ ಶಿಕ್ಷಣ, ಮಾರ್ಗದರ್ಶನದಿಂದ ನಾಯಿಗಳನ್ನು ತರಬೇತು ಮಾಡಿ ಆಟ ಪಾಟ ಅಭಿನಯ ಮುಂತಾದ ಕೆಲಸಗಳಲ್ಲಿ ತೊಡಗಿಸಲಾಗುತ್ತದೆ. 'ಕೂಲಿ' ಎನ್ನುವ ಜಾತಿಯ ನಾಯಿ ಇಲ್ಲದೆ ಸ್ಕಾಟ್‌ಲಂಡಿನ ಕುರಿ ಕಾಯುವವನ ಕೆಲಸ



ಬೋರ್ಜೊಯ್

ನಡೆಯುವಂತಿಲ್ಲ. ಅದು ಅವನಿಗೆ ಅಪಾಯದಿಂದ ರಕ್ಷಣೆ ನೀಡುತ್ತದೆ. ಚದರಿ ಹೋದ ಕುರಿಗಳನ್ನು ಕರೆತಂದು ಮಂದೆಗೆ ಕೂಡಿಸುತ್ತವೆ! ವಿಶೇಷವೆಂದರೆ ತನ್ನ ಯಜಮಾನನಿಗೆ ಸೇರಿದ ಕುರಿ ಯಾವು-ದೆಂಬುದು ಈ ನಾಯಿಗೆ ಗೊತ್ತಿರುತ್ತದೆ!

ಕಣ್ಣಿನಿಂದ ನೋಡುವ ಸಾಮರ್ಥ್ಯಕ್ಕಿಂತ ವಾಸನೆಯನ್ನು ಗ್ರಹಿಸುವ ಶಕ್ತಿ ನಾಯಿಗಳಿಗೆ ಅಧಿಕ. ನಾಯಿಗಳ ಮಿದುಳಿನ ಅಧಿಕ ಭಾಗ ವಾಸನೆಯನ್ನು ಗ್ರಹಿಸುವುದಕ್ಕೆ ಮೀಸಲಾಗಿದೆ. ಅವು ಅತಿ ಸೂಕ್ಷ್ಮ ಶಬ್ದವನ್ನೂ ಗ್ರಹಿಸಬಲ್ಲವು. ಆದ್ದರಿಂದಲೇ ನಾಯಿ ಬೇಟೆಗೂ ಕಾವಲು ಕಾಯಲೂ ಉಪಯುಕ್ತವೆನ್ನಿಸಿದೆ. ಹ್ಯಾರೀಸ್, ಬೀಗಲ್ಸ್, ಬ್ಯಾಸೆಟ್, ಬೋರ್ಜೊಯ್, ಸಾಲೂಕಿ ಮುಂತಾದ ತಳಿಗಳು ವಿದೇಶಗಳಲ್ಲಿ ಬೇಟೆ ನಾಯಿ ತಳಿಗಳೆಂದು ಪ್ರಸಿದ್ಧವಾಗಿವೆ ಭಾರತದಲ್ಲಿ ರಾಮಪುರ ಬೇಟೆನಾಯಿ, ರಾಜಪಾಲಯಂ ನಾಯಿ ಇವು ಬೇಟೆಗಾಗಿ ಹೆಸರಾಗಿವೆ. ಮುಧೋಳದ ಬೇಟೆನಾಯಿ ಅತಿ ಕ್ರೂರ ಸ್ವಭಾವದ ಶುದ್ಧ ತಳಿ. ತಮಿಳುನಾಡಿನ ಕೊಂಬ್ಯಾ, ಬಂಗಾಳದ ಭೋಲಾ ಘಹರಿತೆರ್ರಾಲಿನ ಬಂಗ್ರಾ ಮಾಸ್ಟಿಫ್ ಹಿಮಾಲಯದ ಭೋಟಿಯಾ, ಗುಡ್ಡಗಾಡು ಜನರ ಬಂಜಾರಾ, ಮಹಾರಾಷ್ಟ್ರದ ಧಾಂಗರೀ ಇವು ಭಾರತದಲ್ಲಿಯ ಶುದ್ಧ ಬೇಟೆನಾಯಿ ತಳಿಗಳೆಂದು ಹೆಸರಾಗಿವೆ.

ಆಟದ ಮೈದಾನದಲ್ಲಿ ನಾಯಿಗಳ ಸಹಾಯ ಪಡೆಯಲಾಗುತ್ತದೆ. ಅಂಧರ ಪಾಲಿಗೆ ಇವು ಊರುಗೋಲಾಗಿವೆ. ಕೆಲವು ಪಾಶ್ಚಾತ್ಯ ದೇಶಗಳಲ್ಲಿ ನಾಯಿಯ ಪಂದ್ಯಗಳ ಪ್ರದರ್ಶನಗಳೂ ನಡೆಯುತ್ತವೆ. ನಾಯಿಗಳ ಮೇಲೆ ಹಣ ಕಟ್ಟಿ ಜೂಜಾಡುವುದೂ ಉಂಟು.

ಲಂಡನ್ನಿನಲ್ಲಿ ಪ್ರತಿ ವರುಷ ನಾಯಿಗಳ ಪ್ರದರ್ಶನ ಏರ್ಪಡಿಸಲಾಗುತ್ತಿದೆ. ಕೆನ್ನೆಲ್ ಕ್ಲಬ್ಬು ಅಲ್ಲಿನ ಗೆದ್ದ ನಾಯಿಗಳಿಗೆ ಪ್ರಶಸ್ತಿಪತ್ರ ನೀಡುತ್ತದೆ. ಪ್ರಪಂಚದಾದ್ಯಂತದಿಂದ ನಾಯಿಗಳು ಪ್ರದರ್ಶನದಲ್ಲಿ ಪಾಲ್ಗೊಳ್ಳುವುದುಂಟು.

ಮರಿ ಆರು ವಾರಗಳವರೆಗೆ ತನ್ನ ತಾಯಿಯ ಹಾಲನ್ನು ಕುಡಿಯುತ್ತದೆ. ಅನಂತರ ಮೃದುವಾದ ತಿನಿಸು, ಹಾಲು ಮುಂತಾದವನ್ನು ಸೇವಿಸಬಲ್ಲದು. ಸ್ವಭಾವತಃ ನಾಯಿಗಳು ಮಾಂಸಾ-ಹಾರಿಗಳು. ನಾಯಿಗಳಿಗೂ ರೋಗ ಬರುತ್ತದೆ.



ಸೇಂಟ್ ಬರ್ನಾರ್ಡ್

ಕ್ಷಯ, ಸನ್ನಿಪಾತ, ವಿಷಮಶೀತಜ್ವರ, ಮೂತ್ರ ಜನಕಾಂಗ ಮತ್ತು ಹೃದಯದ ಕಾಯಿಲೆಗಳು, ಕ್ಯಾನ್ಸರ್ ಮುಂತಾದವು ನಾಯಿಗಳಿಗೆ ಬರುವ ಕಾಯಿಲೆಗಳು. ಇನ್‌ಫ್ಲುಯೆಂಜಾ ಕಾಯಿಲೆಯನ್ನು ಹೋಲುವ ಡಿಸ್‌ಟೆಂಪರ್ ಕಾಯಿಲೆ ನಾಯಿಗಳಲ್ಲಿ ಸಾಮಾನ್ಯ. ಇವು ಜೀವಕ್ಕೆ ಮಾರಕ. ರೇಬಿಸ್ ಕಾಯಿಲೆ ಒಂದು ಭಯಂಕರ ಕಾಯಿಲೆ. ಇದು ನಾಯಿಗೂ ಅಪಾಯಕಾರಿಯಲ್ಲದೆ ಮನುಷ್ಯರಿಗೂ ಅದರಿಂದ ಅಪಾಯ.

ಶ್ವಾನಪಾಲಕ ಸಂಘಗಳು ಜಗತ್ತಿನ ಅನೇಕ ಕಡೆಗಳಲ್ಲಿ ಸಂಸ್ಥಾಪಿಸಲ್ಪಟ್ಟಿವೆ. ❁

## ವರದಿಗೂ ವರಾತಕ್ಕೂ ಸಂಬಂಧವಿಲ್ಲ

– ೯೦ –

ವರದಿಗಳು ನಮ್ಮ ಇಂದಿನ ಬದುಕಿನಲ್ಲಿ ಎಷ್ಟು ಸಾಮಾನ್ಯವಾಗಿಬಿಟ್ಟಿವೆಯೆಂದರೆ ಅದು ನಮ್ಮದೇ ಪದ ಎಂಬುದಾಗಿ ಅನಿಸುವ ಸಂಭವ ಇದೆ. ವಾಸ್ತವವಾಗಿ ಕೆಲವರಿಂದ ಅದನ್ನು ಕನ್ನಡದ ಒರೆ(=ವಿವರಿಸು, ಹೇಳು) + ತಿ ಎಂದು ನಿರ್ವಚಿಸುವ ಪ್ರಯತ್ನಗಳು ಆಗಿವೆ; ಕಿಟ್ಟೆಲ್ ಅದನ್ನು ಸಂಸ್ಕೃತದ ವಾರ್ತಾ(=ಸುದ್ದಿ)ದ ತದ್ಭವವೆಂದು ಹೇಳಿದ್ದಾನೆ. ಆದರೆ ಈ ವ್ಯುತ್ಪತ್ತಿಗೆ ನಿಜವಾದ ಪ್ರಾಚೀನ ಪ್ರಯೋಗಗಳ ಆಧಾರವಿಲ್ಲ, ಅದು ನಮ್ಮ ಮೇಲಿನ ಮುಸ್ಲಿಂ ಆಳಿಕೆಯ ವರವಾಗಿದೆ. ಪಾರಸೀಕ ಭಾಷೆಯ ರುಏದಾದ್, ರೂದಾದ್ ಪದದ ಕನ್ನಡೀಕರಣ (ಮಲೆಯಾಳಿ-ಯಲ್ಲಿಯೂ ಅದು ವರುದಿ ಎಂಬ ರೂಪದಲ್ಲಿದೆ). "ರೂದಾದ್" ಎಂದರೆ ಟಿಪ್ಪಣಿ-ರಿಪೋರ್ಟ್; ಉರ್ದುವಿನಲ್ಲಿ ಸಮಾಚಾರ, ವೃತ್ತಾಂತ; ಪರಿಸ್ಥಿತಿ; ವಿವರಣೆ, ನ್ಯಾಯಾಲಯದ ಪ್ರಕ್ರಿಯೆ ಎಂಬರ್ಥಗಳು ಅದಕ್ಕೆ ಬಂದಿವೆ. ರೂ ಎಂದರೆ ಕಾರಣ, ಸಬೂಬು; ದಾದ್ ಎಂದರೆ ದಾನ, ದತ್ತ; ನ್ಯಾಯ. ಕಾರಣ ಕೊಡುವುದು ಇಲ್ಲವೆ ಕೇಳುವುದು ರೂಏದಾದ್.

ಒಂದೇ ಸಮನೆ ವರಾತ ಹಚ್ಚಿದ ಎನ್ನುತ್ತೇವೆ. ಎರಡು ವರಾತಗಳು ಇವೆ. ಒಂದು ಹಿಂದಿಯ ಬರಾತ್, ಬಾರಾತ್. ಇದು ಸಂಸ್ಕೃತದ ವರಯಾತ್ರಾ (ಮದುಮಗನ ಯಾತ್ರೆ)ದ ಅಪಭ್ರಂಶ- ಅಂದರೆ ದಿಬ್ಬಣ. ಆದರೆ ವರಾತ ಹಚ್ಚುವುದರ ವರಾತ ಬೇರೆ. ಅದಕ್ಕೆ ತಗಾದೆ ಎಂದರ್ಥ. ಅರಬೀ ಭಾಷೆಯಲ್ಲಿ ವರಾತ್ ಎಂದರೆ ಹಣ ವಸೂಲಿಗಾಗಿ ಹೊರಡಿಸಿದ ಹುಂಡಿ, ಚೆಕ್ ಅಥವಾ ಕಂದಾಯ ವಸೂಲಿಯ ಆಜ್ಞೆ. ಇಂಥ ಆಜ್ಞೆಯನ್ನು ಜಾರಿಗೆ ತರಲು ಬೆಂಬಿಡದೆ ಕ್ರಮ ತೆಗೆದುಕೊಳ್ಳುವುದರಿಂದ ಎಲ್ಲ ತರದ ತಗಾದೆಯೂ ವರಾತ ಎನಿಸಿದೆ— ಕನ್ನಡಕ್ಕೆ ಬರುವಾಗ. ಈ ತಗಾದಾ ಎಂಬುದೂ ತಕಾಜಃ ಎಂಬ ಅರಬೀ ಶಬ್ದದ ಹಿಂದೀರೂಪವೇ. ತಕಾಜಃ ಎಂದರೆ ತನಗೆ ಬರಬೇಕಾದ ಅಥವಾ ಹಕ್ಕು ಇರುವ ಇಲ್ಲವೆ ವಚನಕೊಡಲಾದ ವಸ್ತುವನ್ನು ಕೊಡೆಂದು ಕೇಳುವುದು.

ಕಚಡಾ ಅಥವಾ ಖಚಡಾ ಮನುಷ್ಯ, ಕೆಲಸ, ಪದಾರ್ಥ ಎಂಬುದಾಗಿ ತಿರಸ್ಕಾರದಿಂದ ಹೇಳುತ್ತೇವೆ. ಈ ಶಬ್ದ ಇತರ ದ್ರಾವಿಡ ಭಾಷೆಗಳಲ್ಲಿ ಸ್ವಲ್ಪ ಉಚ್ಚಾರಭೇದದೊಡನೆ ಕಾಣಿಸಿ-ಕೊಳ್ಳುತ್ತದೆ. ಹೊಲಸುತನವಿರುವಂಥಾದ್ದೆಂದು ಅದರ ತಾತ್ಪರ್ಯ. ಮರಾಠಿಯಲ್ಲಿ ಕಚರಾ ಇದೆ. ಹಿಂದಿಯಲ್ಲಿ ಖಚರಾ ಎಂದರೆ ವರ್ಣಸಂಕರ. ಬಂಗಾಲಿಯಲ್ಲಿ ಖಚ್ಚರ ಎಂದರೆ ಹೇಸರಗತ್ತೆ. ಇವುಗಳ ಬಗ್ಗೆ "ಕಃಪದಾರ್ಥ", "ಕುತ್ಸಿತ", "ಕದರ್ಥ" ಇತ್ಯಾದಿಗಳ ಮಾದರಿಯಲ್ಲಿ ವ್ಯುತ್ಪತ್ತಿ ಹೇಳುವುದು ಕಷ್ಟವಲ್ಲದಿದ್ದರೂ ಅದು ನಿಜಕ್ಕೂ ಪಾರಸೀಕ ಅರಬ್ಬೀ ಮೂಲದ್ದೇ ಶಬ್ದವೆಂದು ಸುನೀತಿಕುಮಾರ ಚಟರ್ಜಿಯವರ ಅಭಿಪ್ರಾಯ. ಅರಬ್ಬಿಯಲ್ಲಿ ಖಿಸ್ಸ್ ಎಂದರೆ ಕೀಳು, ಕೆಲಸಕ್ಕೆ ಬಾರದ್ದು, ಆಸೆಬುರುಕ ಇತ್ಯಾದಿ ಅರ್ಥಗಳಿವೆ. ಸಂಗಡಲೆ "ಬೆರಕೆ", ಜಾರತನದಿಂದ ಹುಟ್ಟಿದ್ದು ಇತ್ಯಾದಿ ತುಚ್ಛ ಅರ್ಥಗಳೂ ಅದಕ್ಕೆ ಇವೆ. ಆದ್ದರಿಂದಲೇ ಖಚ್ಚರ ಎಂದರೆ ಹೇಸರಗತ್ತೆ (ಅದು ಕತ್ತೆ ಕುದುರೆಗಳ ಬೆರಕೆಯಿಂದಾದ ಪ್ರಾಣಿಯಲ್ಲವೇ?) ಖಿಸ್ಸ್‌ಗೆ ತಿರಸ್ಕಾರ ಸೂಚಕ ಹಿಂದೀ "ಡಾ" ಪ್ರತ್ಯಯ ಸೇರಿ ಖಚಡಾ ಆಯಿತು ಎಂದು ಚಟರ್ಜಿ ಹೇಳಿಕೆ. ಆದರೂ ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಜ್ಞಾತಿಪದಗಳುಳ್ಳ ಕಸ, ಕಸವು, ಗಸಿ, ಗಷ್ಟು, ಕಜೆ (ತುಳು = ಕಗ್ಗ ಗುಣದ ಧಾನ್ಯ) ಇತ್ಯಾದಿ ಪದಗಳನ್ನು ನೋಡಿದರೆ ಕಚಡಾದ ಮೂಲಕ್ಕೆ ದೇಶಾಂತರ ಹೋಗಬೇಕೆ ? ಎಂಬ ಸಂಶಯ ಬಾರದೆ ಇಲ್ಲ.

ಹವ್ಯಾಸ ಶಬ್ದ ಸಂಸ್ಕೃತದಂತೆ ಕಾಣಿಸುತ್ತಿದ್ದರೂ ಅದು ಈಚೆಗೆ ತಾನೆ ಕನ್ನಡದಲ್ಲಿ ತಲೆದೋರಿ ಬೇಗನೆ ಅರ್ಥವಿಸ್ತರಣೆ ಹೊಂದಿದ ಪದ. ಯಾವುದಾದರೊಂದು ಚಟ, ಹಂಬಲ

ಎಂಬರ್ಥದಲ್ಲಿ ವೊದಲು ಪ್ರವೇಶಿಸಿ ಮುಂದೆ amateur (ಅಮೆಚೂರ್) ಎಂಬರ್ಥದಲ್ಲಿ (ಉದಾ: ಹವ್ಯಾಸಿ ನಾಟಕ ಮಂಡಲಿ) ಈಗ ಬಹಳ ಪ್ರಚಲಿತವಾದ ಈ ಪದಕ್ಕೆ ಅರಬ್ಬಿ ಪಾರಸೀಕ ಹವಸ್ ಶಬ್ದವೇ ಮೂಲ. ಹವಸ್ ಎಂದರೆ ಉತ್ಕಂಠೆ, ಆಸಕ್ತಿ, ಶೋಕಿ, ಹಂಬಲ, ಮರಳು, ಕಾಮನೆ ಎಂದಿತ್ಯಾದಿ ಅರ್ಥಗಳು. ಕನ್ನಡದ ಹವ್ಯಾಸ, ಹವ್ಯಾಸಿ ಸ್ವಲ್ಪ ಉಚ್ಚಾರಭೇದ ಮಾಡಿಕೊಂಡಿದ್ದರೂ ಅರ್ಥವ್ಯಾಪ್ತಿ ಮೂಲದ್ದೇ ಇದೆ.

ವರಾಂಡಾ ಇಲ್ಲದ ಮನೆಗಳೇ ಈಗ ಇಲ್ಲ ಎಂಬಷ್ಟು ಸಾಮಾನ್ಯವಾದ ಈ ಶಬ್ದದ ಕತೆ ಸ್ವಲ್ಪ ಸುತ್ತು ಬಳಸಿನದೇ ಆಗಿದೆ. ಪ್ರಸ್ತುತ ರೂಪದಲ್ಲಿ ಇದು ಇಂಗ್ಲೀಷಿನಿಂದಲೇ ನಮಗೆ ಬಂದದ್ದು. ಆದರೆ ಇದು ಹಿಂದಿಯಿಂದಲೇ ಇಂಗ್ಲೀಷಿಗೆ ಹೋಯಿತು. ಸಂಸ್ಕೃತದ ವೃಂದ, ವೃಂದಾವನದ ಒಂದು ರೂಪವಾಗಿ ವರಂಡಕ, ವರಂಡ ರೂಪಿತವಾಗಿದೆಯೆಂದೂ (=ಅಂಬಾರಿ, ಗೋಡೆ) ಆದರಿಂದಲೇ ವರಾಂಡಾ ಹುಟ್ಟಿ ಹಿಂದಿಯಲ್ಲಿ ಹೊಕ್ಕಿತೆಂದೂ ಹೇಳಲಾಗುತ್ತಿದ್ದರೂ ಇದು ಪಾರಸೀಕ ಬರಾಮದ್‌ನ ಅಪಭ್ರಂಶವೇ ಎಂದೂ ಸಕಾರಣವಾಗಿ ನಿರ್ಣಯಿಸಲಾಗಿದೆ. ಬರ್-ಆಮದ್ ಅಂದರೆ ಮುಂದೆ ಚಾಚಿದ್ದು ಎಂದರ್ಥ. ಆದರೆ ಇದು ಕೂಡ ಪೋರ್ತುಗೀಸ್ ಭಾಷೆಯಿಂದ ಪಾರಸೀಕ ಭಾಷೆಗೆ ಬಂದಿರಬೇಕೆಂದೂ ಭಾವಿಸಲಾಗುತ್ತದೆ. ಪೋರ್ತುಗೀಸಿನಲ್ಲಿ ವರಂಡಾ ಅಂದರೆ ಬಾಲ್ಕನಿ; ಅಂದರೆ ಕಟಕಟೆಯಿಂದ ಆವೃತವಾದ ಚಾಚು ಭಾಗ. ಸ್ಪಾನಿಶ್, ಪೋರ್ತುಗೀಸ್ ಭಾಷೆಗಳಲ್ಲಿ ವರ (Vara) ಎಂದರೆ ಸರಳು. ಅಂಡಾ (anda) ಎಂಬುದು ವಿಶೇಷಣ ಪ್ರತ್ಯಯ. ಈ ವ್ಯುತ್ಪತ್ತಿ ಗಟ್ಟಿ ಸುತ್ತಿ ಮೈಲಾರಕ್ಕೆ ಬಂದಂತೆ ಎನಿಸಿದರೂ ಶಬ್ದವ್ಯಾಪಾರದಲ್ಲಿ ಇಂಥ ಸಂಗತಿಗಳು ಅಶ್ರುತಪೂರ್ವವಲ್ಲ.

ಉತ್ತರ ಕರ್ನಾಟಕ ಭಾಗದಲ್ಲಿ ಮೇಜವಾನಿ ಎಂಬ ಶಬ್ದ ಅವುತಣ ಎಂಬರ್ಥದಲ್ಲಿ ಬಳಕೆಯಲ್ಲಿದೆ. ಇಂಗ್ಲೀಷಿನ ಟೇಬಲ್ಲಿಗೆ ಪಾರಸೀಕ ಭಾಷೆಯಲ್ಲಿ ಮೇಜ್ ಎಂಬ ಹೆಸರಿರುವುದರಿಂದಲೂ ಪಾಶ್ಚಾತ್ಯರಲ್ಲಿ ಟೇಬಲ್ಲಿಗೂ ಊಟಕ್ಕೂ ಅವುತಣಕ್ಕೂ ಸಾಂಸ್ಕೃತಿಕ ಸಂಬಂಧವಿರುವುದರಿಂದಲೂ ಮೇಜ್‌ವಾನ್ ಎಂದರೆ ಊಟದ ಟೇಬಲ್ಲಿನಲ್ಲಿ ಉದಾರನಾದವನೆಂಬ ಭ್ರಮೆ ಹುಟ್ಟುತ್ತದೆ. ಆದರೆ ಪಾರಸೀಕ ಭಾಷೆಯಲ್ಲಿ ಮೇಜ್ ಎಂದರ ಭೋಜನಸಾಮಗ್ರಿ; ಅದು ಧಾರಾಳವಾಗಿ ಉಳ್ಳವನೇ ಮೇಜವಾನ್; ಅವನು ನೀಡುವ ಆತಿಥ್ಯ ಮೇಜವಾನಿ. ಟೇಬಲ್ ಎಂಬರ್ಥದ ಮೇಜ್ ಪಾರಸೀಕ ಭಾಷೆಗೆ ಪೋರ್ತುಗೀಸಿನಿಂದ ಬಂದದ್ದು. ಅದು ಲ್ಯಾಟಿನ್ ಮೆನ್ಸಾದ (=ಮೇಜು, ಹಲಗೆ) ಅಪಭ್ರಂಶ. ಇನ್ನು ನಮ್ಮ ಅವುತಣವೋ ಅದು ಪ್ರಾಕೃತದ ಔದಣ, ಓದಣ (ಸಂಸ್ಕೃತ— ಓದನ, ಔದನ)ದ ಒಂದು ರೂಪ, ಓದನ ಎಂದರೆ ಅನ್ನ.

ಬಹಿರಂಗ ಮಾರಾಟಕ್ಕೆ ಹರಾಜು ಹಾಕುವುದು ಎನ್ನುವುದುಂಟು. ಈ ಹರಾಜ್ ಅರಬೀ ಪದ. ಆದರೆ ಅದೇ ಅರ್ಥದ ಏಲಂ, ಲಿಲಾವು ಮಾತ್ರ ಪೋರ್ತುಗೀಸ್ ಶಬ್ದ. ಹಿಂದಿಯಲ್ಲಿ ಅದೇ ನ-ಲ ವ್ಯತ್ಯಾಸದಿಂದ ನೀಲಾಂ ಆಗಿದೆ. ಅದರ ಅರ್ಥ ಮಾರಾಟ ಎಂದು. ಅದರ ಪೋರ್ತುಗೀಸ್ ರೂಪ ಲೇ ಇಲಾವ್. ಇದೇ ಅರ್ಥದ ಇಂಗ್ಲೀಷ್ ಪದ ಆಕ್ಷನ್ (auction) ಅದರ ಅರ್ಥ (ಬೆಲೆಯನ್ನು) ಏರಿಸುತ್ತ ಹೋಗುವುದು.

ಮೋಚಿ ಎಂದರೆ ಪಾದರಕ್ಷೆ ಹೊಲಿಯುವವ. ಇದು ಸಾಕಷ್ಟು ಪ್ರಾಚೀನ ಕಾಲದಿಂದ, ಇಸ್ಲಾಮಿ ಆಕ್ರಮಣದ ಮುಂಚೆಯೇ, ಭಾರತದಲ್ಲಿ ನೆಲೆಯೂರಿದ್ದು. ಮಧ್ಯಪಾರಸೀಕದ ಮೋಚಕ ಎಂದರೆ ಬೂಟು-ಬೂಟು ಹೊಲಿಯುವವ. ಸಂಸ್ಕೃತದಲ್ಲಿ ಮೋಚಿಕ ಸಮಗಾರ ಆಧುನಿಕ ಪಾರಸೀಕ ಭಾಷೆಯಲ್ಲಿ ಇವನು ಮೋಜಾ ಆಗಿದ್ದಾನೆ. ಹಿಂದಿನ ಕಾಲದಲ್ಲಿ ಒಂದು ವಿಶಿಷ್ಟ ತರದ ಕಾಲ್ಮರಿಗೆ ಪಾಪಾಸು ಎಂಬ ಹೆಸರಿತ್ತು. ಇದು ಆಧುನಿಕ ಪಾರಸೀಕ ಪದ ಪಾ ಪೋಶ್-ಪಾದವನ್ನು ಮುಚ್ಚುವಂತಾದ್ದು, ರಕ್ಷಿಸುವಂಥಾದ್ದು-ಪಾದ+ರಕ್ಷೆ. **-ಶಾವೆಂ.**

ಮಲೆಯಾಳಂ : ಮೇತಿಲ್ ರಾಜೇಶ್ವರಿ
ಕನ್ನಡಕ್ಕೆ : ಡಾ. ಅಶೋಕ ಕುಮಾರ್

# ರಣಹದ್ದುಗಳು

ಕಾಲದ ಯಾವುದೋ ಬಿಂದುವಿನಲ್ಲಿ ನಿದ್ರಿಸುತ್ತಿರುವ ಮಹಡಿ ಮನೆ.

ಅಪೂರ್ಣವಾಗಿ ಲಭಿಸುವ ನಿದ್ರೆಯ ಹಾದಿಯಲ್ಲಿ ಮೋಸದ ಹಳ್ಳಗಳನ್ನು ತೋಡುವ ಭೀಕರ ಸ್ವಪ್ನಗಳ ನೆನಪುಗಳು ತಂಗಿ ನಿಂತ ಮನಸ್ಸಿನೊಂದಿಗೆ ಶಾಲಿನಿ ಮೇಲಿನ ಕೋಣೆಯ ಕಿಟಕಿಯ ಸರಳುಗಳಿಂದಾಚೆ ನೋಡುತ್ತಾ ತನ್ನನ್ನೇ ಮರೆತು ನಿಂತಿದ್ದಾಳೆ.

ಹೊರಗಿನ ತೋಟದ ಮರಗಳಲ್ಲಿ ಮಧ್ಯಾಹ್ನದ ನೆನಪಿನ ಹಾಗೆ ಗಾಳಿ ಅಲುಗಾಡುತ್ತಿದೆ.

ಈ ಮಹಡಿ ಮನೆಯಲ್ಲಿ, ಇರುಳು ದುಂಬಿದ ಒಳ ಕೋಣೆಗಳಲ್ಲಿ ಶಾಲಿನಿ ಏನನ್ನೂ ಅರಿಯಲಾರದವಳಾಗಿದ್ದಾಳೆ.

ಶಾಲಿನಿಗೆ ಶಾಲಿನಿ ನಷ್ಟಳಾಗಿದ್ದಾಳೆ.

ಶಾಲಿನಿಯ ಸಂಕಲ್ಪಗಳ ಬಣ್ಣದ ತುಪ್ಪಳಗಳು ದುಃಖ ಸತ್ಯದ ಕಪ್ಪು ಬಣ್ಣ ಬಳಿದುಕೊಂಡು ಕಪ್ಪಿಟ್ಟವು. ಶಾಲಿನಿಯ ಸ್ವಪ್ನಗಳು ನಿತಾಂತ ಮೂಕವಾದವು.

ಬದಲಾಗಿ ಮೃತ ಶರೀರಗಳನ್ನು ಕುಕ್ಕಿ ಎಳೆಯುವ ರಣಹದ್ದುಗಳು ಶಾಲಿನಿಯ ಏಕಾಂತತೆಯ ಸಂಗಾತಿಗಳಾದವು.

ಕಬಂಧಗಳ ಅವಶಿಷ್ಟಗಳಾಗಿ ಅವು ಶಾಲಿನಿಯ ಆತ್ಮದಲ್ಲಿ ರೆಕ್ಕೆ ಬಡಿಯುತ್ತಿವೆ. ರಣ ಹದ್ದುಗಳ ಸ್ಮಶಾನದಲ್ಲಿ ಶಾಲಿನಿ ಬಂಧಿಸಲ್ಪಟ್ಟಿದ್ದಾಳೆ.

"ಮಗೂ!...?"

ಕೆಳಗೆ, ಒಳಗಿನ ಮೆಟ್ಟಿಲ ತಳದಿಂದ ಸೋಮಣ್ಣನ ತಾಯಿಯ ಕರೆ.

ಮಾತುಗಳಿಗೆ ಜಿಪುಣತನ ತೋರುವ ತಾಯಿ.

ಮಗೂ ಎಂಬ ಒಂದು ಕೂಗಿನಲ್ಲಿ, ಅಥವಾ ಒಂದು ಹೂಂಕಾರದಲ್ಲಿ, ಒಂದು ನೋಟದಲ್ಲಿ ಆಗತ್ಯಗಳು, ಉಪದೇಶಗಳು, ಒತ್ತಾಯಗಳನ್ನೆಲ್ಲಾ ತುಂಬಿಸಲು ಯತ್ನಿಸುವ ತಾಯಿ.

ನವವಧುವಾಗಿ ಬಂದು ಸೇರಿದ ಮೊದಲ ದಿನಗಳಲ್ಲೇ ಶಾಲಿನಿ ಒಂದು ಸತ್ಯವನ್ನು ಕಂಡುಕೊಂಡಳು.

ಈ ವಿಶಾಲವಾದ ಮಹಡಿ ಮನೆಯಲ್ಲಿ ಯಾರೂ ಯಾರೊಡನೆಯೂ ಹೆಚ್ಚು ಮಾತನಾಡುವುದಿಲ್ಲ. ಮಾತುಗಳಿಲ್ಲದೆಯೆ ಅವರು

ಪರಸ್ಪರ ಕಾರ್ಯ ಗ್ರಹಣ ಮಾಡಿಸುತ್ತಾರೆ, ಗ್ರಹಿಸುತ್ತಾರೆ. ಬೆರಳಿಗೆಸುತ್ತಿದ್ದ ಉದುರಿದ ಕೂದಲೆಳೆಗಳೊಂದಿಗೆ ಶಾಲಿನಿ ಮೆಟ್ಟಿಲು-ಗಳನ್ನಿಳಿದು ಕೆಳಕ್ಕೆ ಬಂದಳು.

ಮೆಟ್ಟಿಲ ಕೆಳಗೆ ಶಾಲಿನಿ ಒಂದು ಪ್ರಶ್ನಾರ್ಥಕ ಚಿಹ್ನೆಯಾಗಿ ನಿಂತಳು...ಮಂದ ಬೆಳಕಿನಲ್ಲಿ ಕುಳಿತು ದೇವೀ ಮಹಾತ್ಮ್ಯವನ್ನು ಓದುತ್ತಿದ್ದ ತಾಯಿ ವರಾಂಡದ ಕಡೆಗೆ ಬೆರಳು ತೋರಿಸಿದಳು.

ಈ ಮಹಡಿ ಮನೆಯಲ್ಲಿ, ಮಧ್ಯಾಹ್ನದ ಅಸಹಾಯಕತೆಯಲ್ಲಿ ಶಾಲಿನಿಯನ್ನು ಹುಡುಕಿ ಕೊಂಡು ಬರುವವರು ಯಾರಾಗಿರಬಹುದು?

ಪರಂಪರೆಗಳ ಕಾಲ್ಗೆಜ್ಜೆಗಳು ಅಡಕವಾದ ಮೌನದ ನೀಳವಾದ ಹಜಾರವನ್ನು ದಾಟಿ-ಕೊಂಡು ಶಾಲಿನಿ ವರಾಂಡಕ್ಕೆ ಬಂದಳು.

ಹೊರ ಬಾಗಿಲ ಅಂಗಳದಲ್ಲಿ ತುಳಸೀ ಕಟ್ಟೆಯ ಪಕ್ಕ ಆಕಾಂಕ್ಷೆಯಿಂದ ತನ್ನನ್ನು ನಿರೀಕ್ಷಿಸಿ ನಿಂತಿದ್ದಾಳೆ- ತನ್ನ ಪ್ರೀತಿಯ ಗೆಳತಿ!

ರೋಸೀ ಥಾಮಸ್!

ಶಾಲಿನಿ ಮನಸ್ಸಿನ ಉಪವನದಲ್ಲಿ ಹೊಮ್ಮಿದ ಸಂತಸದ ಬುಗ್ಗೆಗಳು ಮರುನಿಮಿಷವೇ ಸ್ತಬ್ಧ-ವಾದವು.

ಅತಿ ಅನಿರೀಕ್ಷಿತವಾದ ಗೆಳತಿಯ ಆಗಮನ ದಿಂದಾಗಿ, ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ನಿದ್ರೆ-ದೂಗಿ ನಿಂತ ತುಳಸಿಯೆಲೆಗಳಂತೆ ಶಾಲಿನಿಯ ಮುಖ ಬಾಡಿತು.

ಮರು ನಿಮಿಷವೇ, ಮನಸ್ಸು ಮುಖದಲ್ಲಿ ಪ್ರತಿ ಫಲಿಸದಿರಲು ಯತ್ನಿಸುತ್ತಾ, ತಡವಾಗಿ ಬಂದ ಪ್ರಭಾತದಂತೆ ಶಾಲಿನಿ ಸೌಮ್ಯವಾಗಿ ನಕ್ಕಳು.

ಸ್ವಾಗತದ ಸಾಮಾನ್ಯ ಉಪಚಾರವನ್ನೂ ಮರೆತು, ಅಂಗಳದ ತೀಕ್ಷ್ಣವಾದ ಬಿಸಿಲಿನಲ್ಲಿ ಹೊಳೆಯುತ್ತಿದ್ದ ರೋಸೀ ಥಾಮಸ್‌ಳ ಮುಖ ವನ್ನು ನೋಡುತ್ತಾ, ಶಾಲಿನಿ ಒಂದು ನಿಶ್ಚಲ ಚಿತ್ರವಾಗಿ ನಿಂತಳು.

ಗೆಳತಿಯೊಡನಿದ್ದ ಅಮಿತವಾದ ಸಲಿಗೆಯಿಂದ ರೋಸಿ, ಆಹ್ವಾನಿಸದೆಯೇ ವರಾಂಡದೊಳಕ್ಕೆ ಬಂದು ಸುಮ್ಮನೆ ನಕ್ಕಳು.

ರೋಸಿಯ ಮೃದು ಸ್ವರದಲ್ಲಿ, ವಿದ್ಯಾರ್ಥಿ ಜೀವನದ ರಂಗುರಂಗಿನ ನೆನಪುಗಳು ಶಾಲಿನಿಯ ಮನದಲ್ಲಿ ಬಿರಿದವು. ಗತಕಾಲ ಸ್ಮರಣೆಗಳಲ್ಲಿ ನಿಮಿಷಕಾಲ ಶಾಲಿನಿಯ ವಿಹ್ವಲತೆಗಳು ನಿದ್ರಿಸಿದವು.

"ಕ್ಷಮಿಸು. ಶಾಲಿನಿ! ಬಹಳ ದೂರದಲ್ಲಿದ್ದ ಕಾರಣ ನಿನ್ನ ಮದುವೆಗೆ ಬರಲಾಗಲಿಲ್ಲ. ಎರಡು ವರ್ಷಗಳು ಕಳೆದರೂ ಒಂದು ಪತ್ರವನ್ನೂ ನೀನು ನನಗೆ ಕಳಿಸಲಿಲ್ಲವಲ್ಲ. ಎರಡು ದಿನಗಳ ಹಿಂದೆ ನಾನು ನಿನ್ನ ಮನೆಗೆ ನಿನ್ನನ್ನು ಹುಡುಕಿಕೊಂಡು ಹೋಗಿದ್ದೆ. ಬಹಳ ಕಾಲದಿಂದ ನೀನು ಅಲ್ಲಿಗೆಲ್ಲಾ ಬರೋದೇ ಇಲ್ಲ ಎಂದು ನಿನ್ನ ತಾಯಿ ಹೇಳಿದರು. ಏನು? ಮದುವೆಯಾಗಿ ಎರಡು ವರ್ಷಗಳು ಕಳಿದಿವೆ! ಈಗಲೂ ಹನಿಮೂನೇ.?"

ಹಲವು ವರ್ಷಗಳು ಕಳೆದಿದ್ದರೂ ಯಾವ ಬದಲಾವಣೆಯೂ ಕಾಣದ ಹುಡುಗಿ. ಹಳೆಯ ರೀತಿ ತುಂಟತನ ತುಂಬಿದ ನಗೆ. ಉತ್ತರ ನಿರೀಕ್ಷಿಸದೆ ಹರಿದು ಬರುವ ಮಾತುಗಳು.

"ಮತ್ತೆ ನಿನ್ನನ್ನು ಮಾತ್ರವಲ್ಲ, ನಿನ್ನ ಮನೆಯವರನ್ನೂ ಕಂಡು ಪರಿಚಯ ಮಾಡಿ ಕೊಳ್ಳೋಣ ಎಂದು ಭಾವಿಸಿ ಭಾನುವಾರ ರಜಾದಿನ ನೋಡಿ ಬಂದೆ. ಏನು, ಇಬ್ಬರೂ ಸೇರಿ ಮೇಲೆ ಮಧ್ಯಾಹ್ನದ ಹೊತ್ತು, ಅಪ್ಪಿಕೊಂಡು ಮಲಗಿ ನಿದ್ರಿಸುತಿದ್ದಿರೇನು?"

"ಶ್, ಮೆಲ್ಲಗೆ!"

ಒಳಗೆ ತಾಯಿಯ ಕಾಲ ಹೆಜ್ಜೆಯ ಸದ್ದು ಕೇಳಿಸಿತು.

ಆತ್ಮದಲ್ಲಿ ಭದ್ರವಾಗಿ ತಾನು ಅಡಗಿಸಿ ಕಾಪಾಡುವ ದುಃಖಸತ್ಯಗಳು ಸಾವಿರ ರಣಹದ್ದು ಗಳಾಗಿ ಇವಳೆದರು ಒಂದಾಗಿ ರೆಕ್ಕೆ ಬಿಚ್ಚಿ ಹಾರಾಡುವುದೇ?

ದೂರದಲ್ಲಿ ಉಗ್ರಾಣದ ಮನೆಯಲ್ಲಿ ವಿಕೃತ-ವಾದ ಅಟ್ಟಹಾಸಗಳು ಕೇಳಿಸುತ್ತಿವೆಯೇ?

ಮುಚ್ಚಿದ ಬಾಗಿಲಿನ ಹೊರಗೆ ಶಂಕರನ್ ನಾಯರ್ ಗೊರಕೆ ಹೊಡೆದು ಮಲಗಿ ನಿದ್ರಿಸುತ್ತಿರಬೇಕು. ಶಬ್ದಗಳೂ ಅಟ್ಟಹಾಸಗಳೂ ಶಂಕರನ್ ನಾಯರ್‌ನ ನಿದ್ರೆಯನ್ನು ಶಿಥಿಲ-ಗೊಳಿಸಲಾರವು. ಅವು ಆತನಿಗೆ ಎಂದೋ ಪರಿಚಿತವಾಗಿಬಿಟ್ಟಿವೆ.

ಆದರೆ ಶಾಲಿನಿಯ ಶ್ರವಣೇಂದ್ರಿಯ ಏತಕ್ಕೋ ಕಾದುನಿಂತಿದೆ. ಶಾಲಿನಿಯ ಒಳ ಮನಸ್ಸು ರಣಹದ್ದುಗಳು ತುಂಬಿರುವ ಈ ವನಸೇವೆಯಿಂದ ಓಡಿ ಪಾರಾಗಲು ದಾರಿಗಳನ್ನು ಅರಸಿತು.

"ಶಾಲಿನೀ, ಮರೀ ಏನು ಒಂದು ಥರಾ! ನಾನು ಬಂದದ್ದು ಇಷ್ಟವಾಗಲಿಲ್ಲವೇ?"

ನಗದೇ ಇರುವ ಮನುಷ್ಯರ ನಡುವೆ ನಗು ಎಂಬ ಸಿದ್ಧಿಯನ್ನು ಕಳೆದುಕೊಂಡ ಶಾಲಿನಿ ಒತ್ತಾಯದಿಂದ ತಂದುಕೊಂಡ ನಗುವಿನೊಂದಿಗೆ ಹೇಳಿದಳು:

"ರೋಸೀ, ನೀ ಬಂದುದು ಬಹಳ, ಬಹಳ ಸಂತೋಷ."

"ಹಾಗಾದರೆ ಮರೀ, ನಿನ್ನ ಗಂಡನನ್ನು ಮೊದಲು ಒಮ್ಮೆ ಪರಿಚಯಿಸಿಕೊಡು. ನಂತರ ಉಳಿದ ಡೈಲಾಗ್."

"ಈಗ ನಿದ್ರಿಸುತ್ತಿರಬಹುದು."

"ಹಾಗಾದರೆ ಸರಿ, ಈಗ ಬೇಡ. ಚೆನ್ನಾಗಿ ಎಚ್ಚರಗೊಂಡ ಬಳಿಕ ಈ ನನ್ನನ್ನು ಚೆಂದವಾಗಿ ನಿರೂಪಿಸಿದರೆ ಸಾಕು. ನೀನು ಬಹಳ ಸೌಂದರ್ಯ ಪ್ರಜ್ಞೆಯುಳ್ಳವಳಾಗಿದ್ದುದರಿಂದ ನೋಡಲು ಸ್ವಲ್ಪ ಅವಸರ. ಮತ್ತೆ ಏನೇನಿದೆ ಮರೀ ವಿಶೇಷಗಳು?"

ಮಾತುಗಳಲ್ಲಿ ಹೇಳಿ ಮುಗಿಸಲಾಗದ ಶಾಲಿ-ನಿಯ ವಿಶೇಷಗಳು... ಎಲ್ಲಿಂದ ಆರಂಭಿಸುವುದು?

ಸಮಯವನ್ನು ಯಾರೋ ಹಿಡಿದು ನಿಲ್ಲಿಸಿ-ದಂತೆ.

ವಿಹ್ವಲ ಸ್ಮೃತಿಗಳಂತೆ ಅಂಗಳದಲ್ಲಿ ನಿಂತಿರುವ ದುಂಡುಮಲ್ಲಿಗೆಯ ನೆರಳು ಅಲ್ಲಾಡದೆ ಅದರ ಕಾಲಡಿಯಲ್ಲಿ ನಿಂತಿದೆ.

ತನ್ನನ್ನು ಕಾಣಲು ಮೈಲಿಗಳ ದೂರದಿಂದ ಬಂದ ಗೆಳತಿಯ ಎದುರು ತಾನು ನಿಶ್ಶಬ್ದಳಾಗಿದ್ದಾಳೆ.

"ಏನಾದರಾಗಲಿ, ನಿನ್ನ ಪ್ರಿಯತಮ ಏಳುವುದರೊಳಗೆ ಈ ಅರಮನೆಯನ್ನೆಲ್ಲಾ ಒಮ್ಮೆ ತೋರಿಸು." ವರಾಂಡ, ಮೊಗಸಾಲೆಯ ಬಾಗಿಲುಗಳನ್ನು ದಾಟಿ ಹೊಸ್ತಿಲನ್ನು ದಾಟಿ ಇರುಳು ದುಂಬಿದ ವಿಶಾಲವಾದ ಒಳಕೋಣೆಗಳ ಮೂಲಕ ಶಾಲಿನಿಯನ್ನು ಹಿಂಬಾಲಿಸಿ ರೋಸಿ ನಡೆದಳು.

ಓರ್ವ ಚರಿತ್ರ ವಿದ್ಯಾರ್ಥಿಯೆಂಬಂತೆ ಅಲ್ಲಿನ ಒಂದೊಂದು ದೃಶ್ಯವನ್ನೂ ರೋಸಿ ಸೂಕ್ಷ್ಮವಾಗಿ ಅವಲೋಕಿಸಿದಳು.

ಲಾಂದ್ರಗಳು ತೂಗಿರುವ ಒಳಕೋಣೆಗಳ ಭಿತ್ತಿಯಲ್ಲಿ ಒಂದು ಭಾಗದಲ್ಲಿ ವಂಶದ ರಾಜಕೀಯವಾದ ಕಾಲಘಟ್ಟದ ನೆನಪುಗಳನ್ನು ಉಳಿಸಿಕೊಂಡು ಮರೆಯಾದವರ ದೊಡ್ಡ ಫೋಟೋಗಳೂ ತೈಲಚಿತ್ರಗಳೂ ಇದ್ದವು.

ಕಿವಿಗಳಲ್ಲಿ ದೊಡ್ಡ ಓಲೆಗಳನ್ನೂ ಧಾರಾಳ ಆಭರಣಗಳನ್ನೂ ಧರಿಸಿದ ಸುಂದರಿಯರು. ಸೂಟ್ ಧರಿಸಿ ರುಮಾಲು ಸುತ್ತಿಕೊಂಡಿರುವ ಸುಂದರರು.

ಕಾಲದ ಧೂಳು ಆ ಪ್ರತಿಕೃತಿಗಳನ್ನು ಮಂಕಾಗಿಸಿದೆ.

ಇನ್ನೊಂದು ಭಾಗದ ತುಂಬಾ ಈಗ ಜೀವಿಸಿ-ರುವವರ ಫೋಟೋಗಳು.

"ಶಾಲಿನೀ, ಇವರೆಲ್ಲಾ ಯಾರು ಹೇಳು?"

"ಇದು ಅಮ್ಮ, ದೊಡ್ಡಮ್ಮ, ವಕೀಲ್‌ಮಾವ, ಸಿಂಗಪುರ್‌ನಲ್ಲಿರುವ ಸೋದರಮಾವ, ಬಾಂಬೆಯಲ್ಲಿರುವ ಕಮಲ ಚಿಕ್ಕಮ್ಮ......"

"ಇದು ಯಾರು, ಈ ಸುಂದರ ಮಾರ?"

"ಅದು... ಅದು... ನೀನು ನೋಡಬೇಕೆಂದು ಬಯಸಿದ ವ್ಯಕ್ತಿ ಸೋಮಣ್ಣ." ಯೌವನ ತುಂಬಿದ ಮುಗುಳ್ನಗುವ ಮುಖ.

"ಕೊನೆಗೆ, ನಿಮ್ಮ ತಂದೆಯ ಸೆಲಕ್ಷನ್ ಉತ್ತಮವಾಗಿದೆ."

ಎಪ್ಪತ್ತಮೂರು ಜಾತಕಗಳು ಹೊಂದದೆ ಹೋದವು. ಕೊನೆಗೆ ನವಗ್ರಹಗಳ ಸೆರೆಮನೆಯಿಂದ, ಜೋಯಿಸರ ಕವಡೆಗಳ ಹಾದಿಯಿಂದ, ಚೌಕಗಳಲ್ಲಿ ಏಳಕ್ಕೂ ಹೆಚ್ಚು ಅಂಶಗಳು ಹೊಂದಿ ಬಂದ ಶಾಲಿನಿಯ ಜಾತಕ. ತಂದೆ ಬಯಸಿದ ಇತರ ಎಲ್ಲಾ ಯೋಗ್ಯತೆಗಳೂ ಇದ್ದವು!

ಮೇಲೆ ಹಳೆಯ ಗಡಿಯಾರದಲ್ಲಿ ಸಮಯ ತಪ್ಪಿ ಗಂಟೆ ಬಾರಿಸಿತು.

"ಏನು ಮರೀ, ನಿನ್ನ ಗಂಡನ ಮನೆಯಲ್ಲಿ ಮನುಷ್ಯರಾರೂ ಇಲ್ಲವೇ?"

ಒಳಗಿನ ಕೋಣೆಯಲ್ಲಿ ತೂಗಮಂಚ ದನಿ ಮಾಡಿತು. ಯಾವುದೋ ನೆರಳು ಅಲುಗಾಡಿತು.

ಇಲ್ಲ, ಇಲ್ಲಿ ಮನುಷ್ಯರಿಲ್ಲ. ಜೀವಿಸಿರುವ ಮನುಷ್ಯರ ನೆರಳುಗಳು ಮಾತ್ರ ಇರುವುದು.

ಇರುಳಿನ ಕರಿನಾಗಗಳು ಸರಿದಾಡುವ ಮೊಗಸಾಲೆಗಳ ಮೂಲಕ ಅವರು ಪುನಃ ನಡೆದರು. ಮಧುರೆಯ ಮೀನಾಕ್ಷಿಯ ವಿಗ್ರಹದ ಎದುರಿಗೆ ರೋಸಿ ನಿಂತಳು.

ಮುಚ್ಚಿರುವ ಕಬ್ಬಿಣದ ಸರಳುಗಳ ಮೂಲಕ ಹೊತ್ತಿಸಿರುವ ಕಾಲುದೀಪದ ಸ್ವರ್ಣಪ್ರಭೆಯಲ್ಲಿ ತೇಜೋಮಯಿಯಾದ ದೇವಿ.

ಮಹಡಿ ಮನೆಯಲ್ಲಿನ ಎಲ್ಲಾ ಸಂಭವಗಳಿಗೂ ಮೂಕಸಾಕ್ಷಿಯಾಗಿ ನಿತ್ಯ ಸಮಾಧಿಯಲ್ಲಿ ಲಯಿಸಿದ್ದಾಳೆ ದೇವಿ.

ಹೊಸ್ತಿಲಿನ ಬಳಿ ಇನ್ನೊಂದು ನೆರಳು ಅಲುಗಾಡಿತು. ಕಾಫಿ ಕುಡಿಯಲು ಅಮ್ಮ ಕರೆಯುತ್ತಾರೆ ಎಂದು ಸನ್ನೆಯ ಭಾಷೆಯಲ್ಲಿ ಹೇಳಿ ಆ ರೂಪ ಮರೆಯಾಯಿತು.

ಹೊಸ ಅತಿಥಿಗಾಗಿ ಮೇಜಿನ ಮೇಲೆ ಜೋಡಿಸಿದ ತಿಂಡಿಗಳನ್ನು ರೋಸಿ ಒಂದೊಂದಾಗಿ ರುಚಿ ನೋಡಿದಳು.

ಸೋಮಣ್ಣನ ತಾಯಿ ಗ್ಲಾಸ್‌ನಲ್ಲಿ ಕಾಫಿ ಸುರುವಿ ಕೊಡುವಾಗ, ಅರ್ಧ ಅಳಿಸಿ ಹೋದ ಆಕೆಯ ಹಣೆಯಲ್ಲಿನ ವಿಭೂತಿಯನ್ನು ನೋಡುತ್ತಾ ರೋಸಿ ಹೇಳಿದಳು:

"ಶಾಲಿನೀ, ನಿಮ್ಮತ್ತೆ ಮಾಡಿದ ತಿಂಡಿಗಳೆಲ್ಲಾ ಬಹಳ ಚೆನ್ನಾಗಿವೆ."

ಆಕೆ ನಿರ್ವಿಕಾರಳಾಗಿ ರೋಸಿಯನ್ನು ತಲೆಯೆತ್ತಿ ನೋಡಿ ಆ ಪ್ರಶಂಸೆಯನ್ನು ಸಣ್ಣದೊಂದು ಹೂಂಕಾರದೊಂದಿಗೆ ಸ್ವೀಕರಿಸಿದಳು.

ಈ ಮನೆಯಲ್ಲಿ ಯಾರೂ ಯಾರೊಡನೆಯೂ ಜಾಸ್ತಿ ಮಾತನಾಡುವುದಿಲ್ಲವೆಂಬ ಸತ್ಯವನ್ನು ಇಷ್ಟರಲ್ಲಿ ರೋಸೀ ಮನಗಂಡಳು.

"ಶಾಲಿನೀ, ನಿನ್ನ ಸೋಮಣ್ಣ ನಿದ್ರಿಸಿ ಏಳುವ ವೇಳೆಯಾಯಿತು. ನನ್ನ ಸಹನೆ ಪರೀಕ್ಷಿಸ ಬೇಡ. ಆತನನ್ನು ಬೇಗ ಪರಿಚಯ ಮಾಡಿಕೊಡು."

ಅಡುಗೆ ಕೋಣೆಯೊಳಗೆ ಒಂದು ಪಾತ್ರೆ ಕೆಳಗೆ ಬಿತ್ತು. ತಾಯಿ ಒಮ್ಮೆ ಕೆಮ್ಮಿದಳು. ಒಂದು ಒತ್ತಾಯದ ಲಾಂಛನವನ್ನು ಶಾಲಿನಿ ಆ ಕೆಮ್ಮಿನಲ್ಲಿ ಕಂಡಳು.

"ರೋಸೀ, ಫೋಟೋ ನೋಡಿದೆಯಲ್ಲಾ. ಅದು ಸಾಲದೇ?"

"ಮಾ, ಅದು ಜೀವವಿಲ್ಲದ ಚಿತ್ರವಲ್ಲವೇ? ಜೀವಂತ ವ್ಯಕ್ತಿಯನ್ನು ನಾನು ಎದುರಿಗೆ ಕಾಣಬೇಕು. ಬಳಿಕ ನಾನು ನನ್ನ ಅಭಿಪ್ರಾಯವನ್ನು ತೆರೆದು ಹೇಳುವೆ."

ಅಡುಗೆ ಕೋಣೆಯೊಳಗೆ ಮೇಜಿನ ಮೇಲೆ ಏನನ್ನೋ ಗುದ್ದಿ ಇಟ್ಟ ಸದ್ದು.

"ರೋಸೀ, ನೋಡಲೇಬೇಕೆಂಬ ಒತ್ತಾಯವೇ? ಹಾಗಾದರೆ ನನ್ನೊಡನೆ ಬಾ ಸ್ವಲ್ಪ ನಡೆಯಬೇಕಾಗುತ್ತದೆ."

"ಏನು? ಅಜ್ಞಾತವಾಸವೇ?"

ಶಾಲಿನಿಯ ಅಂತರಂಗದ ಕತ್ತಲ ಗುಹಾಮುಖದಲ್ಲಿ ರಣಹದ್ದುಗಳು ಪುನಃ ರೆಕ್ಕೆ ಬಡಿದವು.

ಉದ್ದಕ್ಕೆ ಬಳುಕಿ ಸಾಗುವ ಕತ್ತಲಿನ ಕಿರಿದಾದ ಮೊಗಸಾಲೆಗಳ ಮೂಲಕ ಶಾಲಿನಿ ನಡೆದಳು. ಅವಳ ಹೆಜ್ಜೆಗಳು ಒಂದು ಪ್ರತೀಕಾರದ ಸುಖದಲ್ಲಿ

ಚಲಿಸಿದವು. ಬಹಳಷ್ಟು ವಿಶೇಷಗಳನ್ನು ಹೇಳುತ್ತಾ ರೋಸೀ ಥಾಮಸ್ ಶಾಲಿನಿಯನ್ನು ಅನುಸರಿಸಿದಳು.

ಶಾಲಿನಿ ಏನನ್ನೂ ಆಲಿಸಲಿಲ್ಲ. ಹಂಚಿನ ಮೇಲೆ ಬಂದು ಬೀಳುವ ಮಳೆಹನಿಗಳಂತೆ ರೋಸಿಯ ಮಾತುಗಳು ಚೆಲ್ಲಾಪಿಲ್ಲಿಯಾದವು.

ಬಹಳ ಹೊಸ್ತಿಲುಗಳನ್ನೂ ದಾಟಿ, ಚಿತ್ರದ ಕಂಬಗಳಿರುವ ಕೋಣೆಯನ್ನೂ ದಾಟಿ ಮಹಡಿ ಮನೆಯ ಹಿಂಬಾಗಿಲಿನ ಮೂಲಕ, ಮೆಟ್ಟಿಲುಗಳನ್ನಿಳಿದು ಅವರು ಹೊರಗಿನ ಸಂಪನ್ನವಾದ ಬೆಳಕಿಗೆ ಬಂದರು.

ವಿಶಾಲವಾದ ಹಿತ್ತಲನ್ನು ದಾಟಿ, ಬಿಸಿಲಿನ ರೇಖೆಗಳನ್ನು ಹಿಂದಿಟ್ಟು, ಫಲವೃಕ್ಷಗಳ ನೆರಳು ಬಿದ್ದು ಮಲಗಿರುವ ಹಾದಿಯ ಮೂಲಕ, ತೆರವಾದ ಕೊಟ್ಟಿಗೆಗಳು, ಹೊರಮನೆಗಳು, ದೈವ ಕ್ಷೇತ್ರ, ದೇಗುಲ ಭೂಮಿ ಇವುಗಳನ್ನು ಹಿಂದಿಟ್ಟು ಕನಸಿನಲ್ಲೆಂಬಂತೆ ಶಾಲಿನಿ ಮುಂದೆ ನಡೆದಳು.

ಇದ್ದಿಲ ಚೂರುಗಳು ಚದುರಿ ಬಿದ್ದಿರುವ ಹಾದಿಗೆ ಕೊನೆಯೇ ಇಲ್ಲದುದೇನೋ ಎನಿಸುತ್ತದೆ.

ಸಮಯವು ಹಿಂದಕ್ಕೆ ಗಮಿಸುತ್ತಿದೆ.

ನಡೆಯುವಾಗ ಶಾಲಿನಿಯ ಸೀರೆಯ ಕೊನೆ ಅಜ್ಞಾತದುಃಖವಾಗಿ, ಮಣ್ಣಿನಲ್ಲಿ ಬೆಳ್ಳಿನಾಗರದಂತೆ ಮಲಗಿ ತೆವಳಿತು.

ಕಾಲ ದೇಶಗಳಿಂದಾಚೆ ಎಲ್ಲಿಗೋ ಬಂದು ತಲುಪಿದ ಅನುಭವ ರೋಸಿಗಾಯಿತು.

ಗಂಡನನ್ನು ತೋರಿಸುತ್ತೇನೆ ಎಂದು ಹೇಳಿ ಶಾಲಿನಿ ತನ್ನನ್ನು ಇದೆಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾಳೆ?

ಉರಿಬಿಸಿಲಿನಲ್ಲಿ ಮಲಗಿರುವ ಊಟದ ಮನೆಯ ಮುಂದೆ ಬಂದಾಗ ಶಾಲಿನಿ ತಿರುಗಿ ನೋಡಿ, ಹಿಂದೆ ಜೊತೆಗೆ ನಡೆದು ಬರಲು ಆಯಾಸ ಪಡುತ್ತಿರುವ ರೋಸಿಯೊಡನೆ ಅವಳು ಹೇಳಿದಳು.

"ಬಾ, ಬೇಗ ಬಾ! ಆದರೆ ಈ ಪರಿಸರದ ತುಂಬಾ ರಣಹದ್ದುಗಳೇ ಎಚ್ಚರಿಕೆ! ಅವು ಚೂಪಾದ ಕೊಕ್ಕುಗಳಿಂದ ಗಾಯ ಮಾಡುತ್ತಲೇ ಇರುತ್ತವೆ. ಎಚ್ಚರ... ಎಚ್ಚರವಾಗಿರು..."

ಶಾಲಿನಿಯದಲ್ಲದ, ಸಂಪೂರ್ಣ ಅನ್ಯವಾದ ಸ್ವರ! ರೋಸಿ ಭೀತಳಾಗಿ ಸುತ್ತಲೂ ನೋಡಿದಳು.

ನಡೆದು ಸಾಗುತ್ತಿದ್ದಷ್ಟೂ ತನ್ನ ಗೆಳತಿಯ ನಡವಳಿಕೆಯಲ್ಲಿ ಬಂದು ಸೇರುವ ಅಸಾಧಾರಣತ್ವ ರೋಸಿಗೆ ಒಳಗೊಳಗೇ ಆತಂಕವುಂಟುಮಾಡಿತು.

ಬಿಸಿಲು ಸ್ವಲ್ಪ ಕುಂದಿತು. ಭ್ರಾಂತವಾದ ಒಂದು ಆವೇಶದಿಂದ ಎಲ್ಲಿಂದಲೋ ಒಂದು ಗಾಳಿ ಬೀಸಿತು. ಮಣ್ಣಲ್ಲಿ ಚೆದುರಿ ಬಿದ್ದಿದ್ದ ಎಲೆಗಳು ಚೆಲ್ಲಾಪಿಲ್ಲಿಯಾದವು. ಕಂಪಿಸಿದ ನೆಲ್ಲಿ ಮರದಿಂದ ಹಣ್ಣಾಗದ ನೆಲ್ಲಿಕಾಯಿಗಳು ಉದುರಿ ಬಿದ್ದವು.

ಇನ್ನೂ ಎಷ್ಟು ದೂರ?

ಬಿಚ್ಚಿದ ಕೆದರಿದ ತಲೆಗೂದಲಿನೊಂದಿಗೆ ಶಾಲಿನಿ ಅತಿ ವೇಗವಾಗಿ ಮುಂದೆ ನಡೆದು ಸಾಗಿದಳು.

ಹತ್ತಿರದಲ್ಲೆಲ್ಲೊ ಏನೋ ಒಡೆದು ಚೂರಾಗುವ ಶಬ್ದ. ಜೊತೆಗೇ ಪ್ರಾಕೃತವಾದ ಒಂದು ಅಟ್ಟಹಾಸವೂ ಮೊಳಗಿತು.

ಕೊನೆಗೆ ಕಾಲವು ಮರೆತುಬಿಟ್ಟು ಹೋದ ಒಂದು ಹಳೆಯ ಉಗ್ರಾಣದ ಮನೆಯ ವರಾಂಡಕ್ಕೆ ಬಂದು ಶಾಲಿನಿ ನಿಂತಳು. ರೋಸಿಯೂ ಬೇಗನೆ ನಡೆದು ತಲುಪಿದಳು. ಎಂದೋ ಪ್ರಯಾಣ ಪ್ರಾರಂಭಿಸಿದ್ದ ಯಾತ್ರಿಕಳಂತೆ ಅವಳು ಏದುಸಿರಿಟ್ಟಳು.

ಅವರನ್ನು ಕಂಡೊಡನೆ ವರಾಂಡದಲ್ಲಿ ಮಲಗಿ ವಿಶ್ರಮಿಸುತ್ತಿದ್ದ ಶಂಕರನ್ ನಾಯರ್‌ನ ಮುಖದಲ್ಲಿ ಅದ್ಭುತವನ್ನು ಕಂಡಂಥ ಆಶ್ಚರ್ಯಭಾವ. ಗೌರವದಿಂದ ಎದ್ದುನಿಂತು ಅವನು ಹೇಳಿದನು:

"ಅಯ್ಯೋ ಶಾಲಿನಿ, ಅಷ್ಟೂ ಕೊಳಕಾಗಿತ್ತು. ಐದಾರು ಬಕೆಟ್ ನೀರು ಸುರಿದು ಒಮ್ಮೆ ಸ್ನಾನ ಮಾಡಿಸಿಬಿಟ್ಟೆ. ಅದರ ಗಲಾಟೆಯೇ ಈಗ ಕೇಳಿಸಿದ್ದು. ಹೋಮ, ಮಂತ್ರ ಎಲ್ಲಾ ಮಾಡಿ ಬರೀ ಕಾಸು ಖರ್ಚು ಮಾಡಿದರೆ ಏನಾ-

ದರೂ ಫಲವಿದೆಯೇ? ಒಂದೊಂದು ಕರ್ಮಫಲ. ಪಾಪ, ಸುಬುದ್ಧಿಯಿದ್ದರೆ ಎಷ್ಟು ಒಳ್ಳೇ ಸ್ವಭಾವ... ಬುದ್ಧಿ ತಿರುಗಿಬಿದ್ದರೆ ನನ್ನೀದ ಹಿಡಿಯಲಾದೀತೇ? ಮಗೂ, ನನಗಂತೂ ಸಾಕಾಗಿ ಹೋಯ್ತು. ಎಲ್ಲಾ ಬಿಸಾಕಿ ಮಾತಾ ಡದೆ ಹೋಗಿಬಿಡೋಣ ಎಂದೆನಿಸುತ್ತದೆ. ಆದರೆ ಅದಂತೂ ಆಗೋದು ಇಲ್ಲ...ಒಂದು ವಿಧದಲ್ಲಿ ಈ ಶಂಕರನ್ ನಾಯರ್ ಸಹ ಸಂಕೋಲೆಯಲ್ಲೆ."

ಶಂಕರನ್ ನಾಯರ್‌ನ ಮಾತುಗಳ ಅರ್ಥ ವನ್ನು ತಿಳಿಯಲಾಗದೆ ರೋಸಿ ಶಾಲಿನಿಯ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದಳು.

ಶೂನ್ಯತೆಯತ್ತ ದಿಟ್ಟಿಸಿ. ವರಾಂಡದ ಒಂದು ಕೊನೆಯಲ್ಲಿ ಹೊರಗಿನಿಂದ ಬೀಗ ಹಾಕಲ್ಪಟ್ಟ ಒಂದು ಕೋಣೆಯ ಕಡೆಗೆ ಶಾಲಿನಿ ಬೆರಳು ತೋರಿದಳು.

ತೆರೆದಿದ್ದ ಕಿಟಕಿಯ ಮೂಲಕ ರೋಸಿ ಕೋಣೆ-ಯೊಳಕ್ಕೆ ಸಂಶಯದಿಂದ ನೋಡಿದಳು. ಯಾವುದೋ ಸಮ್ಮಿಶ್ರ ಗಂಧ ರೋಸಿಯ ಮೂಗನ್ನು ಚುಚ್ಚಿತು.

ಅಸ್ತವ್ಯಸ್ತವಾಗಿರುವ ಕೋಣೆಯ ಕತ್ತಲಿನಲ್ಲಿ ರೋಸಿಯ ಕಣ್ಣುಗಳು ತಡಕಾಡಿದವು. ಒಂದು ಮೂಲೆಯಲ್ಲಿ ಅಂಡರ್‌ವೇರ್ ಮಾತ್ರ ಧರಿಸಿ ನಿಂತಿದ್ದ, ಗಡ್ಡ ಬೆಳೆದ, ಅತಿ ಪ್ರಾಕೃತನಾದ ಯುವಕನಲ್ಲಿ ನಿಂತವು. ಆತನ ಕಾಲ ಕೆಳಗೆ ನೆಲದಲ್ಲಿ ಬಿಚ್ಚಿಟ್ಟ ಒಂದು ಕಬ್ಬಿಣದ ಸಂಕಲೆಯನ್ನು ಕಾಣ-ಬಹುದಾಗಿತ್ತು.

ಸ್ವಲ್ಪ ಕಾಲದ ಹಿಂದೆ ಫೋಟೋದಲ್ಲಿ ಕಂಡಿದ್ದ ಸುಂದರ ಯುವಕನ ಮತ್ತೊಂದು ರೂಪ!

ಅವಿಶ್ವಸನೀಯತೆಯ ನಿಮಿಷಗಳು ಎವೆ ಮುಚ್ಚಿ ತೆರೆದವು.

ರೋಸೀ ಥಾಮಸ್ ಭಾಷೆ ಮರೆತು ನಿಂತಳು.

ಮೈಲುಗಳ ದೂರದಿಂದ ಬಂದಿರುವ ತನ್ನ ಗೆಳತಿಯನ್ನು ನೋಡಿ ಶಾಲಿನಿ ನಕ್ಕಳು. ಕಣ್ಣು ನೀರಿಗಿಂತ ನೋವು ತುಂಬಿದ ನಗು; ಬಳಿಕ ಅತ್ಯಂತ ಅನ್ಯವಾದ ಸ್ವರದಲ್ಲಿ ಶಾಲಿನಿಯ ಮಾತುಗಳು ಚೆದರಿ ಬಿದ್ದವು.

"ನೋಡಬೇಕೆಂದು ನೀನು ಒತ್ತಾಯ ಮಾಡಿದೆ ಯಲ್ಲಾ? ಉಂ...... ನೋಡಿ ಪರಿಚಯ ಮಾಡಿಕೋ. ಸಂಕೋಲೆ ಬಿಚ್ಚಿಟ್ಟು ಕೆಲವು ದಿನ ಗಳಾದವಷ್ಟೆ. ಏಳಕ್ಕೂ ಹೆಚ್ಚು ಗುಣಗಳು ಸರಿ ಹೊಂದಿ ಬಂದ ನಮ್ಮ ಜಾತಕ! ಪರಿಪಾವನವಾದ ದಾಂಪತ್ಯ ಅಲ್ಲವೇ. ನನ್ನ ಮನೆಗೆ ಹೋಗಿ ಅಮ್ಮಂಗೆ ಹೇಳಿಬಿಡು, ಶಾಲಿನಿಗೆ ಇಲ್ಲಿ ಪರಮ ಸುಖವೆಂದುಪರಮ ಸುಖ!"

ರೋಸಿ ಸಾಂತ್ವನದ ನುಡಿಗಳನ್ನು ಹುಡುಕಿ ದಳು.

ಉನ್ಮಾದಿಯಂತೆ, ವನ್ಯವಾದ ರೌದ್ರ ಭಾವ ದಲ್ಲಿ ಶಾಲಿನಿ ಜೋರು ಜೋರಾಗಿ ಗಹಗಹಿಸಿ ನಗತೊಡಗಿದಳು. ಮರುನಿಮಿಷವೇ ಅಪ್ರತಿ-ರೋಧ್ಯವಾದ ಒಂದು ಆವೇಶದಲ್ಲಿ, ಹೊರಗಿ ನಿಂದ ಚಿಲಕ ಹಾಕಿದ್ದ ಬಾಗಿಲನ್ನು ತೆರೆದು ಮಿಂಚಿನ ವೇಗದಲ್ಲಿ ಒಳಸೇರಿ ಬಾಗಿಲನ್ನು ಮುಚ್ಚಿಕೊಂಡಳು. ಕಬ್ಬಿಣದ ಸಂಕೊಲೆಯನ್ನು ತೆಗೆದು ತನ್ನ ಕಾಲುಗಳಿಗೆ ಬಿಗಿದುಕೊಂಡಳು.

ಏನು ಮಾಡಬೇಕೆಂದು ತೋಚದೆ ರೋಸಿ ನಿಂತಿರಲು, ಕಿಟಕಿಯ ಸರಳುಗಳನ್ನು ಹಿಡಿದು ರೋಸಿ ಹುಚ್ಚುಚ್ಚಾಗಿ ಗಹಗಹಿಸಿ ನಗತೊಡಗಿ ದಳು. ಪೈಶಾಚಿಕವೂ, ಅವಿಶ್ರಾಂತವೂ ಆದ ನಗು!

ರೋಸಿ ಥಾಮಸ್ ಬೆಚ್ಚಿ ನಿಂತಾಗ, ದಿಗಂತ ಮೊಳಗುವಂತೆ ಕೋಣೆಯೊಳಗಿಂದ ಎರಡು ಶಬ್ದಗಳು ಒಂದಾಗಿ ಹೊರಹೊಮ್ಮಿದವು.

"ಓಡು. ಓಡು—ರಣಹದ್ದುಗಳು ಕುಕ್ಕಿ ಹರಿ ಯುವ ಮುನ್ನ ಓಡಿ ಪಾರಾಗು!" ಎದುರಿಗೆ ಕಂಡ ಕಾಲು ಹಾದಿಯ ಮೊಲಕ ರೋಸೀ ಥಾಮಸ್ ತಿರುಗಿ ಓಡಿದಳು.

ಅವಳ ಹಿಂದೆ ಕಾಲದ ನಿಶ್ಚಲತೆಯಲ್ಲಿ ರಣ ಹದ್ದುಗಳು ರೆಕ್ಕೆ ಪಟಪಟಾಯಿಸಿದವು. ❁

ಸ್ವಾಮಿ ಜಾನ್ ಸ್ಪೈಯರ್ಸ್ ಬೆಂಗಳೂರ ಬಳಿಯಲ್ಲೇ ಪ್ರಶಾಂತ ತಾಣವೊಂದರಲ್ಲಿ ಆಶ್ರಮ ಕಟ್ಟಿಕೊಂಡು ಕೊನೆಯ ವರೆಗೂ ಅಲ್ಲಿಯೇ ವಾಸವಾಗಿದ್ದರು. ಅವರು ಬೆಂಗಳೂರು ಆಕಾಶ ವಾಣಿ ನಿಲಯದಿಂದ ಬಿತ್ತರಿಸಿದ ಪ್ರಸಾರ ಭಾಷಣವಿದು. ೨೧ನೆಯ ಶತಮಾನದತ್ತ ಮುನ್ನಡೆ ಯುತ್ತಿರುವ ನವನಾಗರಿಕ ಭಾರತೀಯರು ಅವರ ವಿಚಾರಗಳತ್ತ ದೃಷ್ಟಿ ಹಾಯಿಸಬೇಕು.

# ಭಾರತವೇ ಏಕೆ?

ಮೂಲ: ಸ್ವಾಮಿ ಜಾನ್ ಸ್ಪೈಯರ್ಸ್
ಕನ್ನಡಕ್ಕೆ: ಹು. ಲ. ಚಂದ್ರಶೇಖರ

"ನೀವು ಭಾರತದಲ್ಲೇಕೆ ಮನೆಯನ್ನು ಮಾಡಿರುವುದು?" ಇದು ನನ್ನನ್ನು ನೂರಾರು ಬಾರಿ ಕೇಳಲಾಗುತ್ತಿರುವ ಪ್ರಶ್ನೆ. ನೀವು ಹಿಂದು-ಗಳಾಗಿದ್ದಲ್ಲಿ ಇದಕ್ಕೆ ಉತ್ತರಿಸುವುದು ಸುಲಭ. ಭಾರತವು ಬೆಳಕನ್ನು ಅರಸುವವರ ನೆಲೆ, ಬೃಹದಾರಣ್ಯಕೋಪನಿಷತ್ತಿನ ಪ್ರಾಚೀನ ಮಂತ್ರಗಳಲ್ಲಿ ಒಂದು ಮಂತ್ರ, "ಅಸತ್ಯದಿಂದ ಸತ್ಯದೆಡೆಗೆ, ಕತ್ತಲಿನಿಂದ ಬೆಳಕಿನೆಡೆಗೆ ಮತ್ತು ಮೃತ್ಯುವಿನಿಂದ ಅಮೃತತ್ವದೆಡೆಗೆ ನನ್ನನ್ನು ನಡೆಸು" ಎಂದು ಹೇಳುತ್ತದೆ.

ಸತ್ಯ, ಜ್ಞಾನ ಮತ್ತು ಅಮೃತತ್ವಗಳ ಅನ್ವೇಷಣೆಯು ಯಾವಾಗಲೂ ಭಾರತೀಯ ಜೀವನದ ಒಂದು ಮುಖ್ಯ ಅಂಗವಾಗಿದೆ. ಆದ್ದರಿಂದ ಸಹಜವಾಗಿಯೇ ಬಹುಜನರ ಅನ್ವೇಷಕರಂತೆ ನಾನೂ ಭಾರತದಲ್ಲೇ ನನ್ನ ಅಧ್ಯಾತ್ಮಿಕ ನೆಲೆ-ಯನ್ನು ಕಂಡುಕೊಂಡಿದ್ದೇನೆ. ಕ್ರಿಸ್ತಯುಗಕ್ಕೆ ಸಾವಿರಾರು ವರ್ಷಗಳ ಮೊದಲೇ ಪ್ರಕೃತ ಯುರೋಪಿನ ಜನರು ಭಾರತದತ್ತ ತಮ್ಮ ದೃಷ್ಟಿಯನ್ನು ಹರಿಸಿದ್ದರು. ನನ್ನ ಈ ದೂರದ ಪೂರ್ವಿಕರಂತೆ ನಾನು ಭಾರತದೆಡೆಗೆ ತಿರುಗಿದ್ದೇನೆ. ಲ್ಯಾಟಿನ್ನಿನಲ್ಲಿ "Exoriente lux, ex occidente lex" ಎಂಬ ಸೂಕ್ತಿಯಿದೆ. ಎಂದರೆ "ಪೂರ್ವದಿಂದ ಬೆಳಕು, ಪಶ್ಚಿಮದಿಂದ ಕಾನೂನುಗಳು." ಆದ್ದರಿಂದ, ಭಾರತದಲ್ಲೇ ಏಕೆ ನಿಮ್ಮ ನೆಲೆಯನ್ನು ಆಯ್ದುಕೊಂಡಿರುವಿರೆಂದು ಪ್ರಶ್ನಿಸುವ ಭಾರತೀಯ ಮಿತ್ರರಿಗೆ ಇದೇ ನನ್ನ ಉತ್ತರ. ಪತಂಗವು ಬೆಂಕಿಯೆಡೆಗೆ ಆಕರ್ಷಿಸಲ್ಪಟ್ಟಂತೆ ನನ್ನ ಚಿಕ್ಕ ವಯಸ್ಸಿನಿಂದಲೇ ನಾನು ಭಾರತದೆಡೆಗೆ ಸೆಳೆಯಲ್ಪಟ್ಟಿದ್ದೇನೆ.

ಯುರೋಪ್ ಮತ್ತು ಅಮೇರಿಕದ ಬಹುಜನರಿಗಾದರೋ ಈ ಪ್ರಶ್ನೆಯನ್ನು ಉತ್ತರಿಸುವುದು ಸುಲಭವಲ್ಲವೇ ಅಲ್ಲ. ಏಕೆಂದರೆ ಅವರು ತಮ್ಮ ಪ್ರಾಚೀನ ಪರಂಪರೆಯನ್ನು ಕಳೆದುಕೊಂಡುಬಿಟ್ಟಿದ್ದಾರೆ. ಬೌದ್ಧಿಕ ಅಥವಾ ಅಧ್ಯಾತ್ಮಿಕ ಮೌಲ್ಯಗಳ ಸ್ಥಾನವನ್ನು ಪ್ರಾಪಂಚಿಕ ಮೌಲ್ಯಗಳು ಆಕ್ರಮಿಸಿಬಿಟ್ಟಿವೆ. ಭಾರತದಲ್ಲಿ ಶ್ರೇಷ್ಠವೆಂದು ಎತ್ತಿಹಿಡಿಯಲ್ಪಟ್ಟ ಸಾರ್ವಕಾಲಿಕ ಮೌಲ್ಯಗಳ ಸ್ಥಾನವನ್ನು ಮತಾಂಧತೆ, ಸಿರಿವಂತಿಕೆ ಮತ್ತು ವಿಜ್ಞಾನಗಳು ಕಸಿದುಕೊಂಡುಬಿಟ್ಟಿವೆ.

ಈ ಸಂದರ್ಭದಲ್ಲಿ ನನಗೆ ವೈಯಕ್ತಿಕವಾಗಿರಬೇಕೆನಿಸುತ್ತದೆ. ಭೋಗ, ಆಡಂಬರಗಳಿಂದ ಕೂಡಿದ ಆಧುನಿಕ ಪಾಶ್ಚಾತ್ಯ ಜೀವನದ

ಸಮೃದ್ಧಿಯ ಅಶ್ಲೀಲತೆಯು ನನ್ನ ಉಸಿರನ್ನು ಕಟ್ಟಿಸುತ್ತದೆಂದು ನಾನು ಹೇಳಬೇಕು. ಹಣದಿಂದ ಪಡೆಯಬಹುದಾದುದೆಲ್ಲವನ್ನೂ ನೀವು ಹೊಂದಿದ್ದರೆ, ಶಂಕರರು ಹೇಳುವಂತೆ, ಮುಂದೇನು? ಮುಂದೇನು? ತತಃ ಕಿಂ? ತತಃ ಕಿಂ? ಇವೆಲ್ಲವೂ ಆಧ್ಯಾತ್ಮಿಕ ಶೂನ್ಯತೆ ಹಾಗೂ ಪೊಳ್ಳುತನಗಳಲ್ಲಿ ಪರ್ಯವಸಾನ ಹೊಂದುತ್ತವೆ. ಈ ಸಿರಿವಂತ ರಾಷ್ಟ್ರಗಳಲ್ಲಿ ನಾನಿರುವಷ್ಟು ಕಾಲವೂ ನನಗೆ ಎಷ್ಟು ಬೇಗ ಗಂಟುಮೂಟೆ ಕಟ್ಟಿ ನನ್ನ ತವರಾದ ಭಾರತಕ್ಕೆ ಧಾವಿಸುವೆನೋ ಎಂದೆನಿಸುತ್ತಿತ್ತು.

ನನ್ನ ಪ್ರಯಾಣದ ಕಾರ್ಯಕ್ರಮದ ಏರ್ಪಾಡಿಗೆಂದು ನಾನು ಸ್ವಲ್ಪ ಕಾಲದ ಹಿಂದೆ ಮಾಂಟ್ರಿಯಲ್‌ನಲ್ಲಿದ್ದೆ. ೧೯೫೦ ರಿಂದಲೇ – ನನ್ನ ೨೫ನೇ ವಯಸ್ಸಿನಿಂದಲೇ–ನಾನು ಭಾರತದಲ್ಲಿ ನೆಲೆಸಿರುವೆನೆಂದು ತಿಳಿದು ನನ್ನ ಟ್ರಾವೆಲ್ ಏಜೆಂಟ್ ದಿಗ್ಭ್ರಮೆಗೊಂಡ. ತನ್ನ ತಿರುಗುಕುರ್ಚಿಯನ್ನೊಮ್ಮೆ ಒರಗಿಕೊಂಡು ಏದುತ್ತ ಕೇಳಿದ, "ಭಾರತ? ನಿಜವಾಗಿಯೂ ನೀವು ಭಾರತದಲ್ಲಿ ವಾಸಿಸಲು ಇಚ್ಛಿಸುವಿರಾ?"

ಅವನ ಈ ದಿಗ್ಭ್ರಮೆಯ ಕಾರಣವು ನನಗೆ ತಿಳಿಯದಿರಲಿಲ್ಲ. ಇಂದು ಭಾರತವು ಯುರೋಪ್ ಮತ್ತು ಅಮೇರಿಕದ ಅನೇಕರಲ್ಲಿ ಕೆಟ್ಟ ಅಭಿಪ್ರಾಯವನ್ನು ಮೂಡಿಸಿದೆ. ಅವರು ಭಾರತವನ್ನು ಕುರಿತ ತಮ್ಮ ಕಲ್ಪನೆಯನ್ನು ಅಧಿಕ ಜನಸಂಖ್ಯೆಯಿಂದ ಕೂಡಿದ ಕೊಳಕು ನಗರಗಳನ್ನು, ಹಸಿವು, ಕ್ಷಾಮ, ಪ್ರವಾಹ ಮತ್ತು ರೋಗಗಳಿಂದ ಕಂಗೆಡುತ್ತಿರುವ ಲಕ್ಷೋಪಲಕ್ಷ ಜನರನ್ನು ಹಾಗೂ ಹಣದುಬ್ಬರ, ಸಂಪು, ಭ್ರಷ್ಟಾಚಾರಗಳನ್ನು ಭಾವೋದ್ರೇಕಕರವಾಗಿ ವರದಿ ಮಾಡುವ ಪತ್ರಿಕೆಗಳಿಂದಲೂ ಮತ್ತು ಅಂಥ ಚಿತ್ರಗಳನ್ನು ಮನ ಕರಗುವಂತೆ ತೋರಿಸುವ ದೂರದರ್ಶನಗಳಿಂದಲೂ ಪಡೆದಕೊಂಡಿರುತ್ತಾರೆ. ಹಾಗಾಗಿ ನಾನು ೧೯೫೦ ರಿಂದಲೇ ಭಾತದಲ್ಲಿ ವಾಸಿಸುತ್ತಿದ್ದವನೆಂದು ತಿಳಿದ ಆ ಟ್ರಾವೆಲ್ ಏಜಂಟನಿಗೆ ಆಶ್ಚರ್ಯವಾದದ್ದು ಸಹಜ.

ಕೆನಡಾ, ಅಮೇರಿಕ, ಬೆಲ್ಜಿಯಂ, ಫ್ರಾನ್ಸ್‌ಗಳಲ್ಲದೆ ನಾನು ಹೋದ ಕಡೆಗಳಲ್ಲೆಲ್ಲಾ ಭಾರತವನ್ನು ಕುರಿತ ಈ ವಿರೂಪ ಚಿತ್ರವನ್ನು ಅಳಿಸಲು ಅನೇಕ ಗಂಟೆಗಳನ್ನು ವ್ಯಯಿಸಿದ್ದೇನೆ. ಇದನ್ನು ಆಳವಾದ ಶ್ರದ್ಧೆಯಿಂದ ಕೇಳಿದವರಲ್ಲಿ ಕೆಲವು ಜನ ವಯಸ್ಕರ ಜೊತೆಗೆ, ಕೆಲ ತರುಣರೂ ವಿದ್ಯಾರ್ಥಿಗಳೂ ಮತ್ತು ಪಟ್ಟಭದ್ರರನ್ನು ವಿರೋಧಿಸಿ ಶಾಲೆ ಮತ್ತು ಸಮಾಜವನ್ನು ತೊರೆದು ಬಂದವರೂ ಇದ್ದರು. ಅವರು ಪತ್ರಿಕಾ ವರದಿಗಳಿಂದ ಮತ್ತು ದೂರದರ್ಶನ ಚಿತ್ರಗಳಿಂದ ಮರುಳಾಗಲಿಲ್ಲ. ಜಾತ್ಯತೀತ ಭಾರತದ ಗದ್ದಲಕ್ಕಿಂತಲೂ ಭಿನ್ನವಾದ ಶಾಂತ, ಆಧ್ಯಾತ್ಮಿಕ ಭಾರತದ ಬಗ್ಗೆ ಹೇಳಿದಾಗ, ನಾನು ಹೇಳಿದ್ದನ್ನು ಅವರು ಅರ್ಥ ಮಾಡಿಕೊಳ್ಳುತ್ತಿದ್ದರು. ನಾನು ಹೇಳುತ್ತಿದ್ದುದು ಮೌಲ್ಯಗಳಿಗೆ ಸಂಬಂಧಿಸಿದುದೆಂಬುದು ಅವರಿಗೆ ತಿಳಿಯುತ್ತಿತ್ತು. ಒಂದೇ ಬಗೆಯ ಜೀವನ ವಿಧಾನ ಮತ್ತು ಜ್ಞಾನಗಳು ಬಹು ಪುರಾತನ ಕಾಲದಿಂದಲೂ ಉಳಿದುಕೊಂಡು ಬಂದಿರುವ ದೇಶವೆಂದರೆ ಭಾರತವೊಂದೇ ಎಂದು ನಾನು ಅವರಿಗೆ ಹೇಳಿದಾಗ ಅವರು ನನ್ನ ಆಂತರ್ಯವನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು.

ವೃಕ್ಷದಡಿಯಲ್ಲಿ ಪದ್ಮಾಸನದಲ್ಲಿ ಕುಳಿತು ಧ್ಯಾನನಿರತನಾಗಿರುವ ಪುರುಷನ ಚಿತ್ರವೇ ಭಾರತದ ನಿಜವಾದ ಚಿತ್ರವೆಂದೂ, ಇದು ಸನಾತನ ಯೋಗಿಯ ಚಿತ್ರವೆಂದೂ ನಾನು ಅವರಿಗೆ ಹೇಳಿದೆ.

ಹಾಗೆಯೇ ಭೌತಿಕ ಮೌಲ್ಯಗಳ ಬಗ್ಗೆ ತಿಳಿಸಲೂ ನಾನು ಮರೆಯಬಾರದು. ಶೀತರಕ್ತದ ಮತ್ಸ್ಯನಲ್ಲದ, ಆದರೆ ಉಷ್ಣರಕ್ತದ ಜಂತುವಾಗಿರುವ ನಾನು ಸೂರ್ಯನ ಪ್ರೇಮಿ. ಆದಿತ್ಯನ ಹಿತವಾದ ಶಾಖವನ್ನು ಸ್ವಚ್ಛಂದವಾಗಿ ಅನುಭವಿಸಲು ಎಂಥ ವರವನ್ನು ಪಡೆದುಕೊಂಡು ಬಂದಿರಬೇಕು! ಇದು ಹೆಚ್ಚು ಹಿಮಪ್ರದೇಶಗಳಲ್ಲಿನ ಕಷ್ಟಕ್ಕಿಂತಲೂ ದಾರಿದ್ರ್ಯವನ್ನು ಸುಲಭವಾಗಿ

ಅನುಭವಿಸಲು ಸಹಾಯಕವಾಗಿದೆ. ಶೀತ ರಾಷ್ಟ್ರಗಳಲ್ಲಿ ಜನರು ಉರುವಲಿನ ಮುಗ್ಗಟ್ಟಿನ ಬಗ್ಗೆ ಬಹಳ ತಲೆ ಕೆಡಿಸಿಕೊಳ್ಳುವುದಷ್ಟೇ ಅಲ್ಲ, ಕೆಲವು ಸಲ ಹುಚ್ಚರೂ ಆಗಿ ಬಿಡುತ್ತಾರೆ. ಏಕೆಂದರೆ. ಅವರಿಗೆ ಶಾಖದ ಅವಶ್ಯಕತೆಯಿರುತ್ತದೆ. ನಾನು ತಮಾಷೆ ಮಾಡುತ್ತಿಲ್ಲ. ಇದು ಅವರ ಉಳಿವು ಅಳಿವುಗಳಿಗೆ ಸಂಬಂಧಿಸಿದ ವಿಷಯ. ಮಾಂಟ್ರಿಯಲ್‌ನ ನನ್ನ ಆತಿಥೇಯಳು ಒಂದು ತಿಂಗಳ ಉರುವಲಿಗಾಗಿ ೭೦ ಡಾಲರ್ ಎಂದರೆ ಐನೂರು ರೂಪಾಯಿಗಳನ್ನು ತೆರಬೇಕಾಯಿತೆಂದು ಒಮ್ಮೆ ನನಗೆ ಬರೆದಿದ್ದಳು.

ನವೆಂಬರ್‌ನಲ್ಲಿ ನಾನು ಬೆಲ್ಜಿಯಮ್ಮಿನಲ್ಲಿದ್ದಾಗ ನಾನು ಸುಖೋಷ್ಣವನ್ನು ಅನುಭವಿಸಲೇ ಇಲ್ಲ. ದಿನವಿಡೀ ನಡುಗುತ್ತಿದ್ದೆ. ಜಗತ್ತಿನಲ್ಲಿ ಭಾರತದಂತಹ ಉಷ್ಣವಲಯ ದೇಶಗಳು ಇನ್ನೂ ಅನೇಕ ಇವೆ. ಆದರೆ ಬಾಹ್ಯ ಮತ್ತು ಅಂತರಿಕ ಬೆಳಕನ್ನು ಹೊಂದಿರುವ ಏಕೈಕ ದೇಶವೆಂದರೆ ಭಾರತವೊಂದೇ. ಭಾರತ ಮಾತ್ರವೇ ಉಷ್ಣವಾತಾವರಣದ ಸಂಪತ್ತಿನೊಂದಿಗೆ ಪ್ರಾಚೀನ ಜ್ಞಾನದ ಸಿರಿಯನ್ನೂ ಹೊಂದಿರುವುದು.

ಇದಲ್ಲದೆ ಭಾರತದಲ್ಲಿ ಸಹನೆಯಿದೆ. ಬೆಂಗಳೂರು ಮತ್ತು ಭಾರತದ ಎಲ್ಲ ಕಡೆಗಳಲ್ಲೂ ನೀವು ದೇವಾಲಯ ಚರ್ಚು ಮತ್ತು ಮಸೀದೆಗಳು ಅಕ್ಕಪಕ್ಕಗಳಲ್ಲಿರುವುದನ್ನು ಕಾಣಬಹುದು; ಇದನ್ನು ನೀವು ಬೇರೆ ದೇಶಗಳಲ್ಲಿ ನೋಡಲಾರಿರಿ. ಇದು ಹಿಂದೂ ಸಹಿಷ್ಣುತೆ.

ನಾನು ಈಗ ಎಪ್ಪತ್ತನ್ನು ಸಮೀಪಿಸುತ್ತಿದ್ದೇನೆ. ಈ ಪರಿಸ್ಥಿತಿಯಲ್ಲಿ ನಾನು ವಿದೇಶದಲ್ಲಿದ್ದಿದ್ದರೆ ನನಗೇನಾಗುತ್ತಿತ್ತೆಂದು ನಿಮಗೆ ಗೊತ್ತೆ? ನನ್ನನ್ನು ವೃದ್ಧಾಶ್ರಮಗಳಿಗೆ ಕಳಿಸುತ್ತಿದ್ದರು. ವೃದ್ಧರನ್ನು ಗೌರವಿಸುವ, ಅವರ ಸೇವೆಯನ್ನು ಮಾಡುವ ಹಿಂದುವಿಗಾದರೋ ತನ್ನ ಅಜ್ಜ ಅಥವಾ ಅಜ್ಜಿಯನ್ನು ಈ ರೀತಿ ತೊರೆಯುವುದು ಅಸಹನೀಯ. ಅದು ಅವನಿಗೆ ಆಘಾತವನ್ನುಂಟುಮಾಡುತ್ತದೆ. ಈ ಸಾವಿನ ಮನೆಗಳಿಗೆ ವೃದ್ಧಾಶ್ರಮಗಳೆಂಬ ಸೌಮ್ಯೋಕ್ತಿ ಬೇರೆ. ಇಂಥ ಸಂಸ್ಥೆಯು ಮನೆಯೆಂದು ಕರೆಸಿಕೊಳ್ಳುವುದಿರಲಿ, ಅದು ದಂಡಿನ ಪಾಳೆಯ ಅಥವಾ ಜೈಲಿಗಿಂತಲೂ ಬೇರೆಯಲ್ಲ. ಇಂಥ ಬಂದಿ ಶಿಬಿರದಲ್ಲಿ ಸುಖವಾಗಿ ಜೀವಿಸಲು ಯಾರು ತಾನೆ ಇಚ್ಛಿಸುತ್ತಾರೆ?

ಭಾರತದ ಹೊರಗೆ ಪ್ರಯಾಣ ಮಾಡುತ್ತಿರುವ ಸಂದರ್ಭದಲ್ಲಿ ಮಾಂಸ ಭಕ್ಷಣದ ಹೊಲಸು ದೃಶ್ಯ ಮತ್ತು ಮಾಂಸದ ಕೆಟ್ಟ ನಾತಗಳು ನನ್ನನ್ನು ಜಿಗುಪ್ಸೆಗೊಳಿಸುತ್ತವೆ. ಬುದ್ಧನ ಕಾಲದಿಂದ ಬಹುಶಃ ಅವನಿಗಿಂತಲೂ ಬಹಳ ಮುಂಚಿನಿಂದಲೂ ಭಾರತವು ಭೂತದಯೆ ಮತ್ತು ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲಬಾರದೆಂಬ ತತ್ವಗಳನ್ನು ಎತ್ತಿ ಹಿಡಿದಿದೆ. ಲಕ್ಷೋಪಲಕ್ಷ ಜನರು ಸಸ್ಯಾಹಾರಕ್ಕೆ ಆದ್ಯತೆ ನೀಡುವುದನ್ನು ಭಾರತದಲ್ಲಿ ಅಲ್ಲದೆ ಬೇರೆಲ್ಲಿ ನೀವು ನೋಡಲು ಸಾಧ್ಯ? ಜೀವದ ಬಗ್ಗೆ ಈ ರೀತಿಯ ಅನಾದರ ಮತ್ತು ಆಹಾರಕ್ಕೆ ಹಾಗೂ ವೈದ್ಯಕೀಯ ಪ್ರಯೋಗಗಳಿಗೆಂದು ನಡೆಯುವ ಜೀವಂತ ಪ್ರಾಣಿಗಳ ಹತ್ಯೆ ಇವು ಮೂಲತಃ ಕ್ರೂರವಾಗಿರುವ ಮಾನವನ ಮನಸ್ಸನ್ನು ಯಾವ ಸ್ಥಿತಿಗೆ ಕೊಂಡೊಯ್ಯುವುದೆಂದರೆ ಇದು ಕೊನೆಗೆ ಹಿಂಸೆಗೆ, ಕದನಗಳಿಗೆ ಎಡೆಮಾಡಿಕೊಡುತ್ತದೆಂದು ನಾನು ಖಚಿತವಾಗಿ ಭಾವಿಸುತ್ತೇನೆ.

ರೋಮನ್ನರು ಒಪ್ಪಿಕೊಳ್ಳುವಂತೆ ಪಶ್ಚಿಮವು ಕಾನೂನುಗಳಿಂದ ತುಂಬಿಹೋಗಿದೆ. ಆದರೆ ಭಾರತವು ಈಗಲೂ ಅನುಕರಣೆಗೆ ಹೊರತಾದ ರಾಷ್ಟ್ರ. ನೀವು ಶಿರೋಮುಂಡನ ಮಾಡಿಸಿಕೊಂಡಿರಬಹುದು. ಇಲ್ಲವೇ ದೀರ್ಘವಾದ ಕೇಶಗಳನ್ನು ಬಿಟ್ಟಿರಬಹುದು. ನಿಮ್ಮ ಅಭಿರುಚಿಗೆ ತಕ್ಕಂತೆ ನೀವು ಯಾವ ರೀತಿಯ ಉಡುಪನ್ನಾದರೂ ಧರಿಸಬಹುದು ಇಲ್ಲವೇ ಬತ್ತಲೆಯಾಗಿರಲೂ ಬಹುದು. ಇತರರನ್ನು ನೋಯಿಸದೇ ಪರಮಾತ್ಮನನ್ನು ಸ್ಮರಿಸುತ್ತಾ ನಿಮಗಿಷ್ಟ ಬಂದಂತೆ ಇರುವುದೇ

ಭಗವದ್ಗೀತೆಯ ಸಂದೇಶ.

ನನ್ನ ತಂದೆಯು ಭಾರತದಲ್ಲಿ ಬಹಳ ವರ್ಷಗಳ ವರೆಗೆ ಸೈನಿಕನಾಗಿದ್ದನು. ಆತನಿಂದ ಆಗಿನ ಕಾಲದ ಪ್ರಪಂಚದಲ್ಲಿ ನಡೆಯುತ್ತಿದ್ದ ಕಥೆ ಸಾಹಸಗಳನ್ನೆಲ್ಲ ಮುಗ್ಧನಾಗಿ ಕುಳಿತು ಕೇಳುತ್ತಿದ್ದೆ. ಆತನ ಈ ಯಕ್ಷಿಣಿ ನನ್ನನ್ನು ಭಾರತದತ್ತ ಆಕರ್ಷಿಸಿತು.

ಥಿಯಾಸೊಫಿಕಲ್ ಸೊಸೈಟಿಯು ತನ್ನ ಚಟುವಟಿಕೆಯನ್ನು ನಡೆಸುವ ಕೇಂದ್ರವೊಂದು ಪರ್ತ್‌ನಲ್ಲಿದೆ. ಇದು ಬಹಳ ಒಳ್ಳೆಯ ಗ್ರಂಥಾಲಯವನ್ನು ಹೊಂದಿದೆ. ನಾನು ಆ ಸಂಸ್ಥೆಯ ಸದಸ್ಯನಾದೆ. ಇದು ಇಪ್ಪತ್ತರ ದಶಕದಲ್ಲಿ ಇದ್ದಾಗಿನ ಮಾತು. ಅಲ್ಲಿ ನಾನು ಭಾರತೀಯ ವಿದ್ಯಾರ್ಥಿಗಳನ್ನು ಸಂಧಿಸಿದೆ. ಅವರಿಂದ ಸ್ವಾತಂತ್ರ್ಯ ಚಳವಳಿಯ ಭಾರತದ ಇನ್ನೊಂದು ಚಿತ್ರವನ್ನು ಪಡೆದುಕೊಂಡೆ.

ಒಬ್ಬ ಹಿರಿಯ ಥಿಯೋಸೊಫಿಸ್ಟಳ ನೆರವಿನಿಂದ ಕೊನೆಗೆ ನಾನು ೧೯೩೦ರಲ್ಲಿ ಭಾರತಕ್ಕೆ ಬಂದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಚಿಕ್ಕ ಪಾತ್ರವನ್ನು ವಹಿಸುವದರ ಮೂಲಕ ಭಾರತದಲ್ಲಿನ ಜೀವನ ಪ್ರಾರಂಭವಾಯಿತು.

೧೯೪೦ ರಲ್ಲಿ ನನ್ನ ಅಗಲಿದ ಮಿತ್ರ ಫಿಲಿಪ್ ಸ್ಪ್ರ್ಯಾಟ್‌ನನ್ನೂ ನನ್ನನ್ನೂ ಪರೀಕ್ಷೆಗೆ ಒಳಪಡಿಸಲಾಯಿತು. ನಾವು ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುವ ಅರ್ಹತೆಯನ್ನು ಪಡೆದುಕೊಂಡೆವು. ಆದರೆ ಅಲ್ಲಿ ನಮ್ಮ ಅವಶ್ಯಕತೆಯಿರಲಿಲ್ಲ. ನಾನು ಕೆಲ ಸಹಸ್ರ ಸಂಖ್ಯೆಯಲ್ಲಿ ಇದ್ದ ಬರ್ಮಾ ನಿರಾಶ್ರಿತರ ಆರೈಕೆಯ ಹೊಣೆ ಹೊತ್ತೆ.

ಯುದ್ಧ ಮುಗಿಯಿತು. ೧೯೪೬ ರಲ್ಲಿ ಗುರು ನಟರಾಜನ್‌ರವರ ಶಿಷ್ಯನಾದೆ. ಅವರು ಕೇರಳದಲ್ಲೆಲ್ಲಾ ಪ್ರಖ್ಯಾತರೆನಿಸಿದ್ದ ಶ್ರೀ ನಾರಾಯಣ ಗುರುಗಳ ಪ್ರಮುಖ ಶಿಷ್ಯರಾಗಿದ್ದರು. ೧೯೫೨ ರಲ್ಲಿ ಬೆಂಗಳೂರಿಗೆ ಸಮೀಪವಿರುವ ನನ್ನ ಆಶ್ರಮದಲ್ಲಿ ನೆಲೆಸಿದೆ.

ಗುರುಭಾವವೆಂಬುದನ್ನು ನಾನು ಕಡೆಗೆ ಬಿಟ್ಟಿದ್ದೇನೆ, ಆದರೆ ನಿಜವಾಗಿಯೂ ಅದು ಪ್ರಾರಂಭಕ್ಕೆ ಸೇರಿದ್ದು. ಭಾರತವು ಗುರುವಿನ ಅತ್ಯಂತ ಉತ್ಕೃಷ್ಟವಾದ ನೆಲೆ. ಸತ್ಯಾನ್ವೇಷಕನಿಗೆ ಸದ್ಗುರುವು ದೊರೆಕುವುದು ಅವನ ಮಹತ್ತಾದ ಪುಣ್ಯವೇ ಸರಿ. ಈ ಗುರುಭಾವವೆಂಬುದು ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೂ ಹಿಂದೂ ಧರ್ಮದ ಎಲ್ಲ ವೈವಿಧ್ಯಗಳನ್ನು ಒಂದುಗೂಡಿಸುವ ಅಂಶ. ನನಗೆ ಇದು ಕೌತುಕವನ್ನುಂಟುಮಾಡುತ್ತದೆ. ಇದೇನೂ ಮತೀಯತೆಗೆ ಸಂಬಂಧಿದುದಲ್ಲ. ಹಿಂದೂ ಧರ್ಮಕ್ಕೆ ಮತವಿಲ್ಲ. ಅದು ಯಾವುದೋ ಒಂದೇ ಒಂದು ಸಿದ್ಧಾಂತಕ್ಕೆ ಅಂಟಿಕೊಂಡಿಲ್ಲ. ಅದರಲ್ಲಿ ಪಟ್ಟಭದ್ರತೆಯಿಲ್ಲ.

ನನ್ನ ಭಾರತ ಅದನ್ನು ಆಧುನಿಕ ವಿಜ್ಞಾನವೆಂಬ ವಾದ್ಯ ಬಂಡಿಯ ಮೇಲೆ ಬಲವಂತವಾಗಿ ಇರಿಸಲು ಯತ್ನಿಸುವ ರಾಜಕಾರಣಿಯ ಭಾರತವಲ್ಲ. ಅದು ಉಪನಿಷತ್ತುಗಳ ಶುದ್ಧ ಗಾಳಿಯನ್ನು ಉಸಿರಾಡಿಸಲು ತಾನು ಅಸಮರ್ಥನೆಂದು ಪ್ರಾಮಾಣಿಕವಾಗಿ ಬರೆದುಕೊಂಡ ನೆಹರೂರ ಭಾರತವೂ ಅಲ್ಲ. ಆದರೆ ನಾನು ಉಸಿರಾಡಬಹುದಾದ ಗಾಳಿ ಅದೊಂದೆ.

ಹಿಂದುಗಳು ಮತಾಂತರಿಸುವುದಿಲ್ಲ. ಮತಾಂತರ ಮತ್ತು ಶಿಷ್ಯರ ಅಥವಾ ಸದಸ್ಯರ ಸಂಗ್ರಹಕ್ಕಾಗಿ ಊರಿಂದೂರಿಗೆ ಅಲೆಯುವದು ಗುರು ಸಂಪ್ರದಾಯಕ್ಕೇ ವಿರುದ್ಧವಾದದ್ದು. ನನ್ನ ಭಾರತ ನಾಟ್ಯ ಶಿವನ ನಟರಾಜನ ಭಾರತ; ಅದು ವಾನಪ್ರಸ್ಥಾಶ್ರಮದ ಭಾರತ.

ಭಾರತವನ್ನು ನಾನು ತವರಾಗಿಸಿಕೊಂಡಿರುವುದಕ್ಕೆ ಇದೇ ಮುಖ್ಯ ಕಾರಣ.

ಈ ಎಲ್ಲ ಹಾಗೂ ಇನ್ನೂ ಅನೇಕ ಕಾರಣಗಳಿಂದ ನಾನು ಈ ಪುಣ್ಯ ಭರತಭೂಮಿಯನ್ನು ನನ್ನ ದೈಹಿಕ ಮತ್ತು ಆಧ್ಯಾತ್ಮಿಕ ನೆಲೆಯನ್ನಾಗಿ ಮಾಡಿಕೊಂಡಿದ್ದೇನೆ. ✡

ಕಲ್ಪನೆಯು ಗರಿಗೆದರಿದಾಗ....

# ಕೂಜಂತಂ ರಾಮ ರಾಮೇತಿ

**–ಗೋಪಾಲಕೃಷ್ಣ ಪೈ**

ಬಹಳ ವರ್ಷಗಳ ಹಿಂದೆ ಕಸ್ತೂರಿಯ ಒಂದು ಸಂಚಿಕೆಯಲ್ಲಿ ಶ್ರೀ ಗೌರೀಶ ಕಾಯ್ಕಿಣಿಯವರ "ವಾಲ್ಮೀಕಿ ಯಾರು?" ಎಂಬ ಒಂದು ಲೇಖನ ಪ್ರಕಟವಾಗಿತ್ತು. ಅದರಲ್ಲಿ ಅವರು ವಾಲ್ಮೀಕಿಯ ವಿಚಾರವಾಗಿ ಕೆಲವು ಪ್ರಶ್ನೆಗಳನ್ನು ಎತ್ತಿದ್ದರು. ರಾಮಾಯಣದಲ್ಲಿ ಎಲ್ಲಿಯೂ ಅದನ್ನು 'ಬರೆದ' ವಾಲ್ಮೀಕಿ ತನ್ನ ಬಗ್ಗೆ ಏನನ್ನೂ ಹೇಳಿಲ್ಲವೆಂದೂ, ತಾನೊಬ್ಬ ರಾಜನ ಮಗ ಎಂದು ಒಂದು ಶ್ಲೋಕದಲ್ಲಿ ಹೇಳಿದೆ ಎಂದೂ, ಉಳಿದ ಯಾವ ಕಾವ್ಯದಲ್ಲೂ ಅವನ ಬಗ್ಗೆ ವಿವರ ದೊರಕುವುದಿಲ್ಲ ವೆಂದೂ ಅವರು ಹೇಳಿದ ಹಾಗೆ ನೆನಪು. ಆ ಸಂಚಿಕೆ ಯಾಗಲೀ, ಲೇಖನದ ತಲೆ ಬರಹವಾಗಲೀ, ಉಳಿದ ವಿಚಾರಗಳಾಗಲೀ ನನಗೆ ನೆನಪಾಗುತ್ತಿಲ್ಲ. ಅದನ್ನು ನಾನು ಓದಿದ್ದೂ ಒಂದೇ ಬಾರಿ. ಆ ಮೇಲೆ ಆ ಲೇಖನ ಬೇರೆಲ್ಲೂ ಪ್ರಕಟವಾದ ಹಾಗೆ ನನಗೆ ಗೋಚರಿಸಿಲ್ಲ. ಹಾಗಾಗಿ ಅದರ ಬಗ್ಗೆ ಹೆಚ್ಚು ಹೇಳಲು ನಾನು ಸಮರ್ಥನಲ್ಲ.

ಎಲ್ಲರಿಗೂ ತಿಳಿದಿರುವ ಜನಪ್ರಿಯ ಕಥೆಯ ಪ್ರಕಾರ ವಾಲ್ಮೀಕಿ ಪೂರ್ವಾಶ್ರಮದಲ್ಲಿ ದಾರಿಗ ರನ್ನು ಕೊಳ್ಳೆ ಹೊಡೆಯುವ ಒಬ್ಬ ದರೋಡೆ- ಕೋರ. ಜಾತಿಯಲ್ಲಿ ಬೇಡ. ಅಪ್ಪಾವಸು ಗಳೊಮ್ಮೆ ಅವನ ಕೈಗೆ ಸಿಕ್ಕಿದಾಗ, ಇದರ ಪಾಪ ಯಾರಿಗೆ ಎಂಬ ಅವರ ಪ್ರಶ್ನೆಗೆ ತನ್ನ ಹೆಂಡತಿ ಮಕ್ಕಳನ್ನು ಪ್ರಶ್ನಿಸಿ, ನಿರಾಸೆ ಪರಿತಾಪಗಳಿಂದ ತಪಸ್ಸಿಗೆ ಕುಳಿತ. ಅವನ ಸುತ್ತ ವಲ್ಮೀಕ ಬೆಳೆಯಿತು. ಮನಸ್ಸು ಮಾಗಿ ಮಹರ್ಷಿಯಾದ. ಕ್ರೌಂಚ ಮಿಥುನದ ವಧೆ ಕಂಡು ಮನ ನೊಂದು ಕೊಟ್ಟ ಶಾಪ ಅವನ ಛಂದಸ್ಸಾಯಿತು. ರಾಮಾ ಯಾಣ ಬರೆದ. ಈ ಕಥೆಗೆ ಸರಿಯಾಗಿ ರಾಮಾ ಯಣ ಒಂದು ವಿರಹದ ಕಥೆ ಎಂಬ ವಿಮರ್ಶೆ ಬಂದಿದೆ. ರಾಮ ದೇವರು ಎಂದು ನಾವೆಲ್ಲ ಪೂಜಿಸುತ್ತಿದ್ದೇವೆ. ರಾವಣ ರಾಕ್ಷಸ ಎಂದು ನಾವು ದೂರುತ್ತೇವೆ. ಇತಿಹಾಸಜ್ಞರು ರಾಮನ ಕಥೆ ನಡೆದ ಕಾಲ, ಸ್ಥಳ ಎಲ್ಲ ಹುಡುಕುತ್ತಾ ಅಷ್ಟಿಷ್ಟು ಸಫಲರಾಗುತ್ತಿದ್ದಾರೆ. ದಕ್ಷಿಣ ಭಾರತದಲ್ಲಿ ಇದು ಆರ್ಯ–ದ್ರಾವಿಡ ಹೋರಾ- ಟದ ಕಥೆ ಎಂದೂ, ರಾವಣ ಮಹಾತ್ಮನೆಂದೂ ಹೊಸ ವಾದಗಳೂ ಬಂದಿವೆ. ರಾಮಾಯಣ ದಲ್ಲಿ ಬಂದ ಎಲ್ಲ ಪಾತ್ರಗಳನ್ನೂ ಒಂದೊಂದಾಗಿ ಹೆಕ್ಕಿ, ಹಿಂಜಿ, ಹಿಪ್ಪೆ ಮಾಡಿ ಹೊಸ ಅರ್ಥ ಕಾಣಲು ಪ್ರಯತ್ನಿಸಿದ್ದಾರೆ. ಅದೇ ರೀತಿ ಹಲವು ಹತ್ತು ರಾಮಾಯಣದ ಸ್ವರೂಪಗಳೂ ಹುಟ್ಟಿ, ಅವುಗಳ ಭಾರದಿಂದ ಭೂಮಿ ಹೊತ್ತ ಫಣಿರಾಯ ತಿಣುಕಿದ್ದಾನೆ! 'ರಾಮಾಯಣಂ

ಅದು ವಿರಾಮಾಯಣಂ ಕಣಾ!'

ನಾನು ರಾಮಾಯಣವನ್ನು ಕೂಲಂಕಷವಾಗಿ ಓದಿಲ್ಲ. ಅಥವಾ ಓದಿಯೇ ಇಲ್ಲ! ಚಿಕ್ಕಂದಿನಲ್ಲಿ ನನ್ನ ತಂದೆ ಹೇಳಿದ ಕಥೆ, ಒಂದನೆಯದೋ ಎರಡನೆಯದೋ ತರಗತಿಯಲ್ಲಿದ್ದಾಗ ಮಾಸ್ತರರು ತಿಂಗಳುಗಟ್ಟಲೆ ಮಾಡಿ ಹೇಳಿದ ಕಥೆ, ಚಂದ ಮಾಮದಲ್ಲಿ ಧಾರಾವಾಹಿಯಾಗಿ ಬರುತ್ತಿದ್ದ ಸಚಿತ್ರ ರಾಮಾಯಣ, ಎಲಿಮೆಂಟರಿ ಶಾಲೆಯಲ್ಲಿದ್ದಾಗ ಗ್ರಹಿಸಿಕೊಂಡಷ್ಟು ಓದಿದ ಕುವೆಂಪುರವರ ವಾಲ್ಮೀಕಿ ರಾಮಾಯಣ, ಆಗಾಗ ನೋಡುತ್ತಿದ್ದ ಯಕ್ಷಗಾನ ಬಯಲಾಟಗಳ ಪ್ರಸಂಗಗಳು—ಇಷ್ಟೇ ನನ್ನ ರಾಮಾಯಣ ಕಥಾನುಭವ! ನಾನು ರಾಮಾಯಣ ಓದದಿರಲು ಎರಡು ಕಾರಣಗಳೂ ಪ್ರಮುಖವಾಗಿವೆ. ಒಂದು, ಅದು ಸಂಸ್ಕೃತದಲ್ಲಿದ್ದು ನನಗೆ ಸಂಸ್ಕೃತ ಓದಲು ತಿಳಿಯದಿರುವುದು, ಓದುವಷ್ಟು ವ್ಯವಧಾನವಿಲ್ಲದಿರುವುದು ಮತ್ತು ಎರಡನೆಯದು, ಎಲ್ಲರಂತೆ ರಾಮಾಯಣದ ಕಥೆ ನನಗೆ ಗೊತ್ತು ಎನ್ನುವ ಅಹಂಭಾವದಿಂದ ಓದಲು ಮನಸ್ಸಿಲ್ಲದಿರುವುದು. ನನ್ನ ಮಕ್ಕಳಿಗೆ ನಾನು ಲೀಲಾಜಾಲವಾಗಿ ರಾಮಾಯಣದ ಕಥೆ ಹೇಳಿದ್ದೇನೆ. ಆಗಾಗ ರಾಮಾಯಣದ ಯಾವುದಾದರೂ ಘಟನೆಗಳನ್ನು ದಿನವಹಿ ಕಾರ್ಯಕ್ರಮಗಳಲ್ಲಿ ಉದ್ಧರಿಸಿದ್ದೂ ಉಂಟು! ಆದರೆ ಅದನ್ನು ಸೂಕ್ಷ್ಮವಾಗಿ ಓದಿ ಅರ್ಥಾರ್ಥಗಳನ್ನು ಪರಿಗ್ರಹಿಸಿ ವಾದ ಮಾಡಲು ಸಾಧ್ಯವಿಲ್ಲ ಎಂದು ಮೊದಲೇ ಹೇಳಿಬಿಡುತ್ತೇನೆ!

ಶೇಕ್ಸ್‌ಪಿಯರನ ವಿಮರ್ಶಕರು ಒಂದು ಮಾತನ್ನು ಹೇಳುತ್ತಾರೆ—ಜಗತ್ತಿನಲ್ಲಿ ಶೇಕ್ಸ್‌ಪಿಯರನ ಮಾತನ್ನು ಉದ್ಧರಿಸುವವರಲ್ಲಿ ನೂರಕ್ಕೆ ತೊಂಭತ್ತೊಂಭತ್ತು ಮಂದಿ ಅವನನ್ನು ಓದಿಲ್ಲ. ಉಳಿದ ಒಂದು ಮಂದಿ ಅವನನ್ನು ಅರ್ಥ ಮಾಡಿಕೊಂಡಿಲ್ಲ! ನನ್ನ ಮತ್ತು ರಾಮಾಯಣದ ಸಂಬಂಧ ಇಷ್ಟೇ.

ಇಷ್ಟಾಗಿಯೂ ಶ್ರೀ ಗೌರೀಶ ಕಾಯ್ಕಿಣಿಯವರು ಅಲ್ಲಿ ಎತ್ತಿದ ಪ್ರಶ್ನೆ ನನ್ನನ್ನು ಆಗಾಗ ಕಾಡುತ್ತಿತ್ತು. ಕಾಡಿನಲ್ಲಿ ಬೆಳೆದ ವ್ಯಾಧನೊಬ್ಬ, ಅದರಲ್ಲೂ ದರೋಡೆಯನ್ನೇ ಮುಖ್ಯ ಕಸುಬಾಗಿಟ್ಟುಕೊಂಡ ಒಬ್ಬ ಬೇಡ, ಸಂಸ್ಕೃತದಂತಹ ಒಂದು ಸೂಕ್ಷ್ಮ ಭಾಷಾ ಮಾಧ್ಯಮವನ್ನು ತನ್ನದಾಗಿಸಿಕೊಂಡು ಕಾವ್ಯರ್ಷಿ ಹೇಗಾದ; ಜ್ಞಾನ ವಿಜ್ಞಾನಗಳನ್ನು ಅರಗಿಸಿಕೊಂಡು ಮಹರ್ಷಿ ಹೇಗಾದ; ಅವನು ಯಾವ ರೀತಿಯಲ್ಲಿ ರಾಜನೊಬ್ಬನ ಮಗ; ರಾಮ ಸೀತೆಯರ ಕಥೆಯನ್ನು ಯುಗ ಯುಗಗಳ ತನಕ ಪ್ರತಿಯೊಬ್ಬ ಭಾರತೀಯರ ಧಮನಿಗಳಲ್ಲಿ ಸೇರಿಸುವ ತಾಕತ್ತನ್ನು ಅವನು ಹೇಗೆ ಪಡೆದ; ಇಂಥ ಪ್ರಶ್ನೆಗಳು ಒಬ್ಬಂಟಿಯಾಗಿದ್ದಾಗ ನನ್ನನ್ನು ಆಗಾಗ ಬಾಧಿಸಿವೆ.

ಈಗ ತುಂಬ ಜನರಿಗೆ ವಾಲ್ಮೀಕಿಯ ಕಥೆ ಚೆನ್ನಾಗಿ ತಿಳಿದಿರಬಹುದು. ಶ್ರೀ ಗೌರೀಶ ಕಾಯ್ಕಿಣಿಯವರಿಗೆ ಕೂಡಾ ಅವರ ಪ್ರಶ್ನೆಗೆ ಉತ್ತರ ಸಿಕ್ಕಿರಬಹುದು. ರಾಮಾಯಣದಲ್ಲೋ ಇನ್ನಿತರ ಕಾವ್ಯಗಳಲ್ಲೋ ಅವನ ಬಗ್ಗೆ ಉಲ್ಲೇಖ ಕಂಡಿರಬಹುದು. ಉಳಿದ ವಿದ್ವಾಂಸರು ಈ ಬಗ್ಗೆ ಅಧ್ಯಯನ ನಡೆಸಿ ತಿಳಿಸಿರಬಹುದು. ಈ ಬಗ್ಗೆ ಅನೇಕ ಹೊತ್ತಗೆಗಳೇ ಬಂದಿರಬಹುದು. ಈಗ ಇದೊಂದು ಐತಿಹಾಸಿಕ ಸತ್ಯವೇ ಇರಬಹುದು. ಪ್ರಸ್ತುತದಲ್ಲಿ ನಾನು ಇವೆಲ್ಲದರ ಗೋಜಿಗೆ ಹೋಗುವ ಅಧಿಕಪ್ರಸಂಗ ಮಾಡುವುದಿಲ್ಲ.

ಮೇಲಿನ ಜನಪ್ರಿಯ ಕಥೆಯನ್ನು ಒಪ್ಪಿಬಿಡೋಣ. ಬೇಡ, ದರೋಡೆ, ಅಷ್ಟಾವಸುಗಳು, ತಪಸ್ಸು, ಹುತ್ತ, ಕ್ರೌಂಚವಧೆ, ಮಾನಿಷಾದ, ರಾಮಾಯಣ! ಆಯ್ತು. ಇನ್ನು ರಾಮಾಯಣದ ಕಥೆ. ಇದರ ಮೂರು ಮುಖ್ಯ ಭಾಗಗಳು ಇವು. ಒಂದು, ರಾಮ 'ಕಾಡಿಗೆ ಹೋಗುವುದು', ಎರಡು, ರಾವಣ ಸೀತೆಯನ್ನು ಅಪಹರಿಸಿ 'ನಗರಕ್ಕೆ ಒಯ್ಯುವುದು', ಮೂರು ರಾಮ ಅವನನ್ನು ಕೊಂದು ಸೀತೆಯನ್ನು ಮರಳಿ ತರುವುದು! ಉಸಿರಾಡುವ ಜೀವಿಯೊಬ್ಬನ ಸುತ್ತ ಹುತ್ತ

ಬೆಳೆಯುವ ಅತಿವಾಸ್ತವಿಕ ಘಟನೆಯಿಂದ (Surrealistic) ಹಿಡಿದು ಪುಂಖಾನುಪುಂಖ-ವಾಗಿ ಬರುವ ಅನೇಕ ಘಟನೆಗಳು (ಕಬಂಧ; ಹತ್ತು ತಲೆಯ ರಾವಣ, ಎತ್ತಲಾಗದ ಧನುಸ್ಸು, ಕಲ್ಲಾದ ಅಹಲ್ಯೆ ಇತ್ಯಾದಿ.) ಈಗ ರಾಮಾಯಣ ಗಳಲ್ಲಿ ಅತ್ಯಂತ ಸಹಜ ಘಟನೆಗಳಾಗಿವೆ! ಉತ್ತರ ರಾಮಾಯಣದಲ್ಲಿರಬೇಕು— ಗರ್ಭಿಣಿ ಸೀತೆ ಯನ್ನು ಆಶ್ರಮಕ್ಕೆ ಕರೆದೊಯ್ಯಲು ಸ್ವತಃ ವಾಲ್ಮೀಕಿಯೇ ಕಾವ್ಯದೊಳಗೆ ಪ್ರವೇಶಿಸುತ್ತಾನೆ! ಹಾಗೂ ಅವನು ಸೃಷ್ಟಿಸಿದ ಪಾತ್ರವೊಂದು ಅವನ ಪ್ರವೇಶಾರಂಭದಲ್ಲಿಯೇ ಅವನನ್ನು ಅನುಮಾನ ದಿಂದ ನೋಡುತ್ತದೆ!

ಒಬ್ಬ ಕವಿ ಅಥವಾ ಸಾಹಿತಿ ಒಂದು ಕೃತಿ ಯನ್ನು ರಚಿಸುವಾಗ ತಾನು ಕಂಡ ಉಂಡ ಅನು-ಭವಗಳನ್ನೇ ತಳಹದಿಯಾಗಿಟ್ಟುಕೊಳ್ಳುತ್ತಾ ನೆಂದು ನಾವು ಕೇಳಿದ್ದೇವೆ. ಏನನ್ನೇ ಅವನು ಬರೆಯಲಿ, ಅವನು ಸೃಷ್ಟಿಸಿದ ಪಾತ್ರಗಳೆಲ್ಲ ಅವನ ಅನುಭವಗಳನ್ನೋ ನೋವನ್ನೋ ಆಸೆಗಳನ್ನೋ ಹಂಚಿಕೊಳ್ಳುತ್ತವೆ. ಅವನ್ನೇ ಮೆಲುಕಾಡುತ್ತವೆ. ಕೃತಿಕಾರ ಕೆಲವೊಮ್ಮೆ ತಾನೇ ಕೃತಿಯಾಗುತ್ತಾನೆ. ಕೆಲವು ಸಲ ಕರ್ತೃವಾಗುತ್ತಾನೆ. ಅಲ್ಲದೇ ಬಹಳ ಹಿಂದೆ ಕೇಳಿದ ಒಂದು ಮಾತು ಮುಂದಾವಾಗಲಾ ದರೂ ಒಂದು ಕವನದಲ್ಲಿ ಹಣಿಕೆ ಹಾಕಬಹುದು. ಇದನ್ನು ಸ್ಥೂಲವಾಗಿ ಗಮನಿಸಿದರೆ ವಾಲ್ಮೀಕಿ ಒಮ್ಮೆ ದಶರಥನಾಗಿರಬಹುದು; ತನ್ನಲ್ಲಿ ರಾಮ ನನ್ನು ಆವಾಹನೆ ಮಾಡಿರಬಹುದು; ಅವನು ರಾವಣನೇ ಆಗಿರಬಹುದು; ಸೀತೆ, ಕೈಕೇಯಿ, ವಾಲಿ, ಸುಗ್ರೀವ, ಹನೂಮಂತ, ಜಾಂಬವ, ವಿಭೀಷಣ ಯಾರೂ ತಾನೇ ಅಂತಂದುಕೊಂಡಿರ-ಬಹುದು. ತನ್ನ ಅನುಭವವನ್ನೋ ಆಸೆಯನ್ನೋ ಹೇಳಿರಬಹುದು. ಕೆಲವೊಮ್ಮೆ ಹೀಗಾಯಿತು ಎಂದದ್ದನ್ನು ಹೀಗಾಗಿರಬೇಕಿತ್ತು ಎಂದು ಹೊಸ ಆವರಣವನ್ನೇ ಕಟ್ಟಿರಬಹುದು. ಕಾವ್ಯಕ್ಕೆ ಮೂಲ ಅನುಭವ ಮತ್ತು ಕಲ್ಪನೆ. ಅನುಭವ ಒಂದು ಕಡೆಯಲ್ಲಿ ಮಾಧ್ಯಮ, ಅನಿಸಿಕೆ, ಹೇಳ ಬೇಕೆಂಬ ತೀವ್ರತೆಯನ್ನು ಪಡೆಯುತ್ತಿದ್ದರೆ ಕಲ್ಪನೆ ಇನ್ನೊಂದು ಕಡೆ ಊಹೆಗಳು, ಪ್ರತಿಮೆಗಳು ಮತ್ತು ಆಸೆಗಳು ಇವುಗಳಿಗೆ ಮೂರ್ತರೂಪ ಕೊಡಲು ಶ್ರಮಿಸುತ್ತದೆ.

ಇದನ್ನು ಗಮನದಲ್ಲಿಟ್ಟುಕೊಂಡು ನಾವು ವಾಲ್ಮೀಕಿಯ ಪೂರ್ವಾಪರಗಳನ್ನು ಹುಡುಕಲು ಸಾಧ್ಯವೇ ಎಂದು ನೋಡಬಹುದಲ್ಲ? ಅಂದರೆ ರಾಮಾಯಣದಲ್ಲೇ ಅವನನ್ನು ಕಾಣಲು ಸಾಧ್ಯ-ವಾಗಬೇಕು. ಸೃಷ್ಟಿ ಫಲದ ಮೂಲಕ ಸೃಷ್ಟಿಕರ್ತ ನನ್ನು ನೋಡಬೇಕು. ಹುಡುಗನ ಚಹರೆ ಕಂಡೇ ನೀನು ಇಂಥವರ ಮಗನಲ್ಲವೇ ಎಂದು ಕೇಳುವ ಹಾಗೆ ಈ ದೃಷ್ಟಿಯಿಂದ ವಾಲ್ಮೀಕಿಯ ಪೂರ್ವಾ-ಪರ ಕಥೆ ಹೀಗಿರಬಹುದು:

ದಂಡಕಾರಣ್ಯದಲ್ಲಿ ಬೇಡರುಗಳ ನಾಯಕನಿದ್ದ. ದಾರಿಹೋಕರನ್ನು ದರೋಡೆ ಮಾಡುವುದು, ಮೃಗ ಪಕ್ಷಿಗಳನ್ನು ಕೊಂದು ತಿನ್ನುವುದು ಅವನ ಕಸುಬಾಗಿತ್ತು. ತನ್ನ ಸಂಸಾರ ಮಾತ್ರವಲ್ಲ ದಂಡಕಾರಣ್ಯದ ಬೇಡ ಜನಾಂಗದ ರಕ್ಷಣೆ ಮತ್ತು ಉತ್ಕರ್ಷವನ್ನು ಅವನು ನೋಡಬೇಕಿತ್ತು. ಆ ಜವಾಬ್ದಾರಿಯನ್ನು ಆ ನಾಯಕ ತುಂಬ ಮುತು ವರ್ಜಿಯಿಂದ ಪರಿಪಾಲಿಸುತ್ತಿದ್ದ. ಬೇಡರೆಲ್ಲ ಅವನನ್ನು ತಮ್ಮ ರಾಜನೆಂದೇ ಬಗೆದಿದ್ದರು. ಅವನಿಗೆ ಮೂರು ಜನ ಹೆಂಡುದಿರಾದರೂ ಮಕ್ಕಳು ಹುಟ್ಟಲೇ ಇಲ್ಲ. ಆದುದರಿಂದ ಅವನು ಬಹಳ ಚಿಂತಾಕ್ರಾಂತನಾಗಿರುತ್ತಿದ್ದ.

ಹೀಗಿರುತ್ತ ಒಂದು ದಿನ ಹತ್ತಿರದ ನಗರಕ್ಕೆ ಅವನು ಹೋಗಬೇಕಾಯ್ತು. ಆ ನಗರಕ್ಕೊಬ್ಬ ರಾಜ. ರಾಜನಿಗೊಂದು ಮಗು. ಆ ಮಗು ಕಣ್ಣಿಗೆ ಬಿದ್ದದ್ದೇ, ಅವನು ಅದನ್ನು ಅಪಹರಿಸಿಕೊಂಡು ದಂಡಕಾರಣ್ಯಕ್ಕೆ ತಂದು ತನ್ನ ಮಗನಂತೆಯೇ ಸಾಕತೊಡಗಿದ. ಅವನಿಗೆ (ನಮ್ಮ ಅನುಕೂಲಕ್ಕೆ ತಕ್ಕಂತೆ) ವಾಲ್ಮೀಕಿ ಎಂದು ಹೆಸರಿಟ್ಟು ಬೇಡನಂ-ತೆಯೇ ಬೆಳೆಸಿದ. ವಾಲ್ಮೀಕಿ ದೊಡ್ಡವನಾದ, ತನ್ನ ತಂದೆಯ ಕಸುಬನ್ನೇ ಮುಂದುವರಿಸಿದ. ಆದರೂ ಅವನ ಒಳಗೆ ಇನ್ನೊಂದು ಉತ್ಸಾಹ

ಪೂರಿತ ಆಸೆ ಸ್ಫುರಿತಗೊಳ್ಳುತ್ತಿತ್ತು. ತನ್ನ ಮಗ ಎಲ್ಲರಂತಿಲ್ಲ ಎಂದು ಗಮನಿಸಿದ ನಾಯಕ ಅವನಿಗೆ ಮದುವೆ ಮಾಡಿಸಲು ಯೋಚಿಸಿದ. ವಾಲ್ಮೀಕಿ ಪಕ್ಕದ ಕಾಡಿನ ಬೇಡಿತಿಯೊಬ್ಬಳನ್ನು ಮದುವೆಯೂ ಆದ. ಅವಳಲ್ಲಿ ಅವನಿಗೆ ನಾಲ್ಕು ಮಕ್ಕಳು ಹುಟ್ಟಿದರು. ಬೇಡರ ನಾಯಕ ತೀರಿಕೊಂಡಾಗ ವಾಲ್ಮೀಕಿಯೇ ಬೇಡರ ರಾಜನಾದ.

ವಾಲ್ಮೀಕಿ ದಾರಿಹೋಕರನ್ನು ಕೊಳ್ಳೆ ಹೊಡೆದು ಹಣ ಸಂಪಾದಿಸುತ್ತಿದ್ದ. ಅವನು ಬಲಿಷ್ಠನಾಗಿಯೂ ಸುಂದರನಾಗಿಯೂ ಇದ್ದ. ತನ್ನ ಹೆಂಡತಿ ಮಕ್ಕಳನ್ನು ಅತೀವ ಪ್ರೀತಿಯಿಂದ ಕಾಣುತ್ತಿದ್ದ. ಆದರೆ ದಾರಿಹೋಕರನ್ನು ಕಾಯುತ್ತಾ ಎತ್ತರದ ಮರದ ಗೆಲ್ಲಿನ ಮೇಲೆ ಕುಳಿತಿದ್ದಾಗ ತನ್ನ ಬೇಡ ಜನಾಂಗಕ್ಕೊಂದು ಹೊಸ ಬದುಕು ಕೊಡಬೇಕು, ಇಲ್ಲೊಂದು ದೊಡ್ಡ ದೊಡ್ಡ ಸೌಧಗಳ ನಿರ್ಮಾಣವಾಗಬೇಕು, ರಸ್ತೆಯಾಗಬೇಕು, ಅರಮನೆಯಾಗಬೇಕು ಎಂದೆಲ್ಲ ಕನಸು ಕಾಣುತ್ತಿದ್ದ. ತನ್ನ ಮದುವೆಯಾದ ಹೊಸ ದಿನಗಳಲ್ಲಿ ಅವನು ಬೇಡತಿಯೊಡನೆ "ಹೆಣ್ಣೇ, ಇದೇ ಕಾಡಿನಲ್ಲಿ ವ್ಯಾಧರ ಒಂದು ನಗರ ನಿರ್ಮಾಣವಾಗಬೇಕು, ಉಳಕೊಳ್ಳಲು ಎತ್ತರವಾದ ಸೌಧಗಳು ಬೇಕು; ಹೋಗಿ ಬರಲು ಅಗಲವಾದ ರಸ್ತೆಗಳು ಬೇಕು" ಎಂದು ತನ್ನ ಕನಸುಗಳನ್ನು ಹೇಳಿದ್ದ. ನಗರ ನೋಡದ ಆ ಬೇಡತಿ ಅವನ ಕನಸುಗಳನ್ನು ಹೀಯಾಳಿಸಿ ನಕ್ಕು ಬಿಟ್ಟಿದ್ದಳು.

ವಾಲ್ಮೀಕಿ ರಾತ್ರಿಯ ಹೊತ್ತು ಬೇಡರ ತರುಣರನ್ನು ಬೆಂಕಿಯ ಸುತ್ತ ಕೂರಿಸಿ ನಗರ ನಿರ್ಮಿಸುವ ತನ್ನ ಹುಚ್ಚನ್ನು ಬಿಡಿಸಿ ಬಿಡಿಸಿ ಹೇಳುತ್ತಿದ್ದ. ಅವನ ಮನಸ್ಸಿನಲ್ಲಿ ಅಲ್ಲೊಂದು ನಗರ ನಿರ್ಮಿಸಿದಂತೆಯೂ, ಪಟ್ಟಣವು ರಾಜ ವೀಥಿಗಳಿಂದಲೂ ಸುವಾಸಿನಿಯರಿಂದಲೂ ಎತ್ತರವಾದ ಸೌಧಗಳಿಂದಲೂ ಕಣ್ತುಂಬುವ ಹಾಗೆ ಕಾಣುತ್ತಿತ್ತು. ಆಗೆಲ್ಲ ಬೇಡ ತರುಣರು ಅವನಿಗೆ ತಿಳಿಯದಂತೆ ತಮ್ಮತಮ್ಮಲ್ಲೇ ಅವನ ನಿಜ ಹುಟ್ಟಿನ ಬಗ್ಗೆ ಗುಸು ಗುಸು ಮಾತಾಡಿಕೊಳ್ಳುತ್ತಾ ನಗುತ್ತಿದ್ದರು. ಈ ಕನಸುಗಳಿಂದ ವಾಲ್ಮೀಕಿ ಅವರಿಗೆ ವಿಚಿತ್ರವಾಗಿ ಕಾಣುತ್ತಿದ್ದ.

ವಾಲ್ಮೀಕಿಗೆ ಅಗಲವಾಗಿ ಹರಡಿರುವ ಕಾಡಿನ ಮರಗಳೆಲ್ಲ ಚೆನ್ನಾಗಿ ಪರಿಚಯವಿದ್ದುವು. ಮರಗಳೇ ಅಲ್ಲದೇ ದಂಡಕಾರಣ್ಯದಲ್ಲಿ ವಾಸಿಸುವ ಮಂಗಗಳು, ಕರಡಿಗಳು, ಜಿಂಕೆಗಳು ಎಲ್ಲ ಚೆನ್ನಾಗಿ ಪರಿಚಯವಿದ್ದವು. ಬೇಡತಿಗೆ ಜಿಂಕೆಯ ಚರ್ಮವೆಂದರೆ ಬಹಳ ಇಷ್ಟವೆಂದು ಅವನು ಆಗಾಗ ಜಿಂಕೆಗಳನ್ನು ಕೊಲ್ಲುತ್ತಿದ್ದ. ಅವುಗಳ ಚರ್ಮ ತಂದು ಹೆಂಡತಿಗೆ ಕೊಡುವಾಗ ಅವಳಿಗಿಂತ ಅವನಿಗೇ ಹೆಚ್ಚು ಸಂಭ್ರಮ. ಆಕಾಶದೆಡೆಗೆ ತಾನು ತಿನ್ನಲಿರುವ ಹಣ್ಣನ್ನು ಎಸೆದರೆ ಥಕ್ಕೆಂದು ಹಾರಿ ಅದನ್ನು ಹಿಡಿದು ಇನ್ನೊಂದು ಗೆಲ್ಲಿಗೆ ಆತು ಬೀಳುವ ಮಂಗ ತನಗೆಷ್ಟು ವಿಧೇಯವಿರಬಹುದೆಂಬ ಪರಿಜ್ಞಾನ ಅವನಿಗಿತ್ತು. ಮುದಿಯಾದ ಕೈಲಾಗದ ಕರಡಿಯೊಂದು ಮೂಲೆಯಲ್ಲಿ ಕಣ್ಣು ಮುಚ್ಚಿ ಕುಳಿತು ದೈನ್ಯಾವಸ್ಥೆಯಲ್ಲಿರುವ ಸ್ಥಿತಿಯನ್ನು ಕಂಡರೆ ಅವನ ಎದೆಯಲ್ಲಿ ಮರುಕದ ಚಿಲುಮೆ ಏಳುವುದು.

ಇಂಥ ಒಂದು ದಿನ ವಾಲ್ಮೀಕಿ ಕಾಡಿನ ದಾರಿಯಲ್ಲಿದ್ದ. ಒಂದು ಆಲದ ಮರವೇರಿ ದಾರಿಹೋಕರು ಯಾರಾದರೂ ಬರುವರೇ ಎಂದು ಕಾಯುತ್ತಿದ್ದ. ನಗರದ ಕಲ್ಪನೆಯಲ್ಲಿ ಮೈ ಮರೆತಿದ್ದ ಅವನು ಎಂಟು ಜನ ಬ್ರಾಹ್ಮಣರು ಅದೇ ಮರದ ಕೆಳಗೆ ಬಂದುದನ್ನು ಕಾಣಲಿಲ್ಲ. ಕಂಡ ಮೇಲೂ, ಅವರನ್ನು ಕೊಳ್ಳೆ ಹೊಡೆದರೆ ಏನೂ ಸಿಗಲಾರದೆಂದು ನಿರ್ಲಕ್ಷ್ಯವಾಗಿ ಕುಳಿತ. ಬ್ರಾಹ್ಮಣರು ವರ್ಣಾಶ್ರಮಗಳ ಕುರಿತು ಮಾತಾಡಿಕೊಳ್ಳುತ್ತಿದ್ದರು. ನಾಗರಿಕನಾಗುವ ಆಸೆಯಿಂದಿದ್ದ ವಾಲ್ಮೀಕಿಗೆ ತನ್ನ ಮಕ್ಕಳಿಗೆ ಈ ಬ್ರಾಹ್ಮಣರಿಂದ ಪಾಠ ಹೇಳಿಸಿಕೊಳ್ಳಲು ಆಸೆ ಹುಟ್ಟಿ, ತೀವ್ರ ಬಯಕೆಯಾಗಿ, ಒಮ್ಮೆಲೇ ಕೆಳಕ್ಕೆ ಜಿಗಿದ. ಬ್ರಾಹ್ಮಣರು ಹೆದರಿ ಚೆಲ್ಲಾಪಿಲ್ಲಿಯಾಗಿ ಓಡತೊಡಗಿದರು.

ಆದರೆ ವಾಲ್ಮೀಕಿ ಅವರನ್ನು ಬಿಡಲಿಲ್ಲ.

ಬ್ರಾಹ್ಮಣರು ಅತ್ತರು. "ನಮ್ಮನ್ನು ಬಿಟ್ಟು ಬಿಡೋ. ಇಲ್ಲಿ ಕಟ್ಟಿ ಹಾಕಿ ಪಾಪ ಕಟ್ಟಿ ಕೊಳ್ಳಬೇಡ" ಎಂದು ಬೇಡಿಕೊಂಡರು. ವಾಲ್ಮೀಕಿಗೆ ಪಾಪ – ಪುಣ್ಯಗಳ ಕಲ್ಪನೆಯಿರಲಿಲ್ಲ! ಹಾಗೆಂದರೇನು ಎಂದು ಕೇಳಿದ. ಒಬ್ಬ ಬ್ರಾಹ್ಮಣ "ನೀನು ನರಕಕ್ಕೆ ಹೋಗುತ್ತಿ" ಎಂದ. ನರಕ ಎನ್ನುವುದರಲ್ಲಿ ತನ್ನ ಬೇಡರೆಲ್ಲ ಇರುವುದಾದರೆ, ತನ್ನ ಬೇಡತಿ, ತನ್ನ ನಾಲ್ಕು ಜನ ಮಕ್ಕಳೂ ಇರುವುದಾದರೆ ಅಲ್ಲಿಗೆ ಹೋಗುವುದಕ್ಕೆ ಸಿದ್ಧ ಎನ್ನಿಸಿತು. ಬ್ರಾಹ್ಮಣರು ನಸು ನಕ್ಕರು. ವಾಲ್ಮೀಕಿ ಅದಕ್ಕೆ ಅರ್ಥಗಳನ್ನು ಕಟ್ಟಿದ, ಸಂದೇಹಿಸಿದ, ಹೆದರಿದ. ಇತ್ಯರ್ಥಕ್ಕೆ ಅವರನ್ನಲ್ಲೇ ಇರ ಹೇಳಿ ತನ್ನ ಪಾಳಯಕ್ಕೆ ಓಡಿದ!

"ಹೆಣ್ಣೇ, ಪಾಪಗಳಲ್ಲಿ ನಿನಗೂ ಒಂದು ಪಾಲಿದೆಯಲ್ಲವೇ?" ಎಂದು ಕೇಳಿದ. "ಮಕ್ಕಳೇ, ನಾನು ನರಕಕ್ಕೆ ಹೋದರೆ ನನ್ನೊಡನೆ ನೀವೂ ಬರುತ್ತೀರಲ್ಲವೇ?" ಎಂದು ಪ್ರಶ್ನಿಸಿದ "ಗೆಳೆಯರೇ, ಸತ್ತ ಮೇಲೆಯೂ ನಾವು ಒಟ್ಟಾಗಿ ಇರುವದಿಲ್ಲವೇ?" ಎಂದು ಕೇಳಿದ— ತನ್ನ ಒರಟು ಭಾಷೆಯಲ್ಲಿ!

ಬಂದ ಉತ್ತರ ಮಾತ್ರ ಅವನಿಗೆ ಸಿಡಿಲಿನಂತೆ ಬಡಿಯಿತು. ಹೆಂಡತಿ ತನ್ನ ಪ್ರೀತಿಪಾತ್ರಳಾದ ತನ್ನ ಸರ್ವಸ್ವವನ್ನೂ ಧಾರೆ ಎರೆದು, ಪ್ರೀತಿಯ ಹುಚ್ಚು ಹೊಳೆಯನ್ನೇ ಹರಿಸಿ ಕೊಟ್ಟ ಹೆಂಡತಿ ತಲೆಯಲ್ಲಾಡಿಸಿದಳು. ಮಕ್ಕಳು ಮುಖ ತಿರುಗಿಸಿದರು. ಊರ ಮಂದಿ ಬೆನ್ನು ತೋರಿಸಿದರು. ವಾಲ್ಮೀಕಿ ಕಾಡಿದ, ಬೇಡಿದ, ಹೆದರಿಸಿದ ಹೆಂಡತಿ "ಆ ಪಾಪದ ಪಾಲು ನಿನಗೆ ಇರಲಿ" ಎಂದು ಅವನನ್ನು ತ್ಯಜಿಸಿ ಹೊಳೆ ದಾಟಿ ತಂದೆಯ ಮನೆಗೆ ಹೋದಳು. ನಾಲ್ಕು ಮಕ್ಕಳೂ ಅವ್ವನ ಸೆರಗು ಹಿಡಿದಂತೆಯೇ ಹಿಂದೆ ನಡೆದರು. ಸಂಜೆಯಾಗುವುದರೊಳಗೆ ಬೇಡರ ಪಾಳಯ ಈ ಪಾಪ – ಪುಣ್ಯಗಳ ಹುಚ್ಚಿನಲ್ಲಿ ಬಿದ್ದ ರಾಜನನ್ನು ತೊರೆದು ಬೇರೆಡೆಗೆ ಹೋಗುವ ಸನ್ನಾಹದಲ್ಲಿದ್ದರು. ವಾಲ್ಮೀಕಿಯ ಒಳಗಿನ ಒಳಗು ಹಿಂಡಿ ಹಿಪ್ಪೆಯಾಗತೊಡಗಿತ್ತು. ತನ್ನ ಗುಡಿಸಲಿನ ಎದುರಿನ ನೆಲದ ಮೇಲೆ ಕುಕ್ಕರುಗಾಲಿನಲ್ಲಿ ಕುಳಿತು ವಾಲ್ಮೀಕಿ ಗೋಳೋ ಎಂದು ಅತ್ತು ಬಿಟ್ಟ.

ರಾತ್ರಿಯಾಯಿತು. ಪೌರ್ಣಮಿಯ ಚಂದ್ರ ಮೇಲೇರಿ ಬಂದಾಗ ಖಾಲಿಯಾದ ಪಾಳಯದಲ್ಲಿ ಒಂದೇ ಒಂದು ಮನೆಯಲ್ಲಿ ದೀಪವಿತ್ತು. ಹೆಣ್ಣೊಂದು ಅಲ್ಲಿ ಕುಳಿತು ಅವನನ್ನೇ ನೋಡು-ತ್ತಿದ್ದಳು. ತನ್ನ ತಪ್ತತೆಯಲ್ಲಿ ಅವನು "ನೀನೂ ಯಾಕೆ ಎಲ್ಲರೊಡನೆ ಹೋಗಲಿಲ್ಲ?" ಎಂದು ಕಿರು-ಚಿದ ವಾಲ್ಮೀಕಿ. ಆಕೆ ನಿಧಾನವಾಗಿ ಹತ್ತಿರ ಹತ್ತಿರ ಬಂದಳು. "ಊಟಕ್ಕೆ ಇಡುವೆ ಬರು-ವೆಯಾ?" ಎಂದಳು. ವಾಲ್ಮೀಕಿಗೆ ಹಸಿದಿರಬಹುದಾದ ಬ್ರಾಹ್ಮಣರ ನೆನಪಾಯಿತು. ಒಮ್ಮೆಲೇ ಅಲ್ಲಿಗೆ ಓಡಿದ.

ಬ್ರಾಹ್ಮಣರ ತಾಣ ವಾಲ್ಮೀಕಿಗೆ ಸಿಗಲಿಲ್ಲ. ಮರಮರಗಳ ಪರಿಚಯವಿದ್ದ ವಾಲ್ಮೀಕಿ ಅವರನ್ನು ಕಾಣದೇ ಹುಚ್ಚಾದ. ಅಲ್ಲಿ ಇಲ್ಲಿ ಅಲೆದ. ದಿನ ರಾತ್ರಿಗಳ ಅರಿವೇ ಇಲ್ಲದೆ ದಂಡಕಾರಣ್ಯದ ಉದ್ದಕ್ಕೂ ಅಲೆದ. ಅಲೆದು ಅಲೆದು ಬಸವಳಿದ, ಬೆಂಡಾದ. ಒಂದು ಕಡೆ ಹೆಂಡತಿ ಮಕ್ಕಳ ವಿಶ್ವಾಸ ದ್ರೋಹ; ಇನ್ನೊಂದು ಕಡೆ ತನ್ನ 'ಪ್ರಜೆ'ಗಳ ತ್ಯಾಜ್ಯ. ಬ್ರಾಹ್ಮಣರು ಕಾಣದ ಪರಿತಾಪ ಮಗುದೊಂದು ಕಡೆ. ವಾಲ್ಮೀಕಿ ಜರ್ಜರಿತನಾದ!

ದಂಡಕಾರಣ್ಯದಲ್ಲಿ ಒಬ್ಬ ಹುಚ್ಚ ಓಡಾಡ ತೊಡಗಿದ. ಕೂತರೆ ಕೂತ, ನಿಂತರೆ ನಿಂತ, ಮಲಗಿದರೆ ಮಲಗಿದ; ಅತ್ತರೆ ಗಂಟೆಗಟ್ಟಲೆ ಅತ್ತ. ದಿನಗಳು ಸರಿಯುತೊಡಗಿದವು. ಬಿಸಿಲು, ರಾತ್ರಿ, ಮಳೆ, ಚಳಿ, ಸುತ್ತು ಹಾಕಿದವು. ಆ ಹುಚ್ಚನ ಮೈ ಕಾಷ್ಟವಾಯಿತು. ಕಣ್ಣು ಇರುಸುಮುರುಸಾಯಿತು. ಅವನಿಂದ ಹಣ್ಣು ತಿನ್ನುತ್ತಿದ್ದ ಮಂಗ-ಗಳು ಅವನನ್ನೇ ಕರುಣಾಜನಕವಾಗಿ ನೋಡು-ತ್ತಿದ್ದವು. ಆ ಮುದಿ ಕರಡಿ ಕೂತ ವಾಲ್ಮೀಕಿಯ ಪಕ್ಕಕ್ಕೆ ಬಂದು ತಾನೂ ತತ್ವಜ್ಞಾನಿಯಂತೆ

ಕುಳಿತಿತು. ಥತ್ ಈ ಮನುಷ್ಯರಿಗಿಂತ ಈ ಮಂಗಗಳೇ ಒಳ್ಳೆಯ ಜೀವಿಗಳಲ್ಲವೇ?

ಎಂಥ ನಗರ ಕಟ್ಟಬೇಕೆಂದು ತನಗಾಸೆಯಿತ್ತು! ಅಲ್ಲಿಯ ಜನ ಎಂಥವರಾಗಿರಬೇಕೆಂದಿತ್ತು! ರಾಜ ಹೋದರೆ ಅವನನ್ನೇ ಹಿಂಬಾಲಿಸುವ ಪ್ರಜೆಗಳು, ಗಂಡನಿಗೆ ವಿಧೇಯಳಾದ ಹೆಂಡತಿ, ತಂದೆಯ ಮಾತನ್ನು ಪಾಲಿಸುವ ಮಕ್ಕಳು! ವಾಲ್ಮೀಕಿ ಮುಳು ಮುಳು ಅತ್ತ. ಹತ್ತಿರ ಬಂದು ಮೂಸಿ ನೋಡಿದ. ಆನೆಯ ಸೊಂಡಿಲಿನ ಮೇಲೆ ಕೈಯಾಡಿಸಿ ವಾಲ್ಮೀಕಿ ತನಗಿದ್ದ ಆಸೆಗಳನ್ನೆಲ್ಲ ಬಣ್ಣಿಸಿದ. ತನಗಾದ ವ್ಯಥೆಯನ್ನು ಬಣ್ಣಿಸಿದ. ತನ್ನ ವಿರಹವನ್ನು ಬಿಡಿಸಿಟ್ಟ.

ಆಗಲೇ ಅವನನ್ನು ಮೀರಿ ಅವನ ಕನಸುಗಳು ಗರಿಗೆದರತೊಡಗಿದ್ದವು. ಬೇಡ ವಾಲ್ಮೀಕಿಯೊಳಗಿದ್ದ ಕವಿ ವಾಲ್ಮೀಕಿ ಹೊರಬರಲು ಚಡಪಡಿಸಿದ. ತನ್ನ ನಗರದ ಹೆಂಡತಿಯ, ಮಕ್ಕಳ, ಬಂಧು ಬಾಂಧವರ, ಪ್ರಜಾಜನರ ಕಲ್ಪನೆಗಳನ್ನು ಮಾತಿನಲ್ಲಿ ಮೂಡಿಸತೊಡಗಿದ. ಕಂಡ ಪ್ರಾಣಿಗಳೊಡನೆ ಪಕ್ಷಿಗಳೊಡನೆ, ಮರಗಳೊಡನೆ, ನೀರಿನೊಡನೆ ಹಸಿವಿನೊಡನೆ, ಕನಸುಗಳೊಡನೆ, ಬಿಸಿಲಿನೊಡನೆ, ಚಂದ್ರನೊಡನೆ ಮಾತುಗಳನ್ನು ಮೂಡಿಸತೊಡಗಿದ.

ಅಹುದಂತೆ, ಅಯೋಧ್ಯೆ ಎಂಬ ನಗರವಿತ್ತಂತೆ. ದಶರಥನೆಂಬ ರಾಯನಂತೆ. ಅವನಿಗೆ ಮೂವರು ಹೆಂಡಿರಂತೆ. ರಾಮನೆಂಬ ಮಗನಂತೆ! ಶಿವನ ಧನುಸ್ಸು ಮುರಿದನಂತೆ, ಕಾಲಿಟ್ಟಲ್ಲಿ ಕಾಲಿಡುವ ಸೀತೆಯನ್ನು ಮದುವೆಯಾದನಂತೆ!

ಮದುವೆಯಾದನಂತೆ! ವಾಲ್ಮೀಕಿ ಹೇಳಿದ ಕಥೆಯನ್ನು ಆನೆ, ಮಂಗ, ಜಿಂಕೆ, ಕರಡಿ, ಕ್ರೌಂಚ, ಅಳಿಲು ಕಿವಿದೆರೆದು ಕೇಳಿದುವು. ಆದರೆ ಅವನಿಗದರ ಪರಿವೆಯಿಲ್ಲ. ಅಷ್ಟಷ್ಟು ಹೇಳುತ್ತಿದ್ದ. ಎದ್ದು ನಡೆಯುತ್ತಿದ್ದ. ಅವೆಲ್ಲ ಅವನನ್ನು ಹಿಂಬಾಲಿಸುತ್ತಿದ್ದುವು. ದಣಿವಾದಾಗ ಇನ್ನೊಂದು ಮರದ ಕೆಳಗೆ ಕೂರುತ್ತಿದ್ದ. ಇನ್ನೂ ಏನೇನೋ ಹೇಳುತ್ತಿದ್ದ. ಹೊಳೆಯ ದಡದಲ್ಲಿ ಕುಳಿತು ಆ ಕಡೆಯ ಕಾಡನ್ನು ನೋಡುತ್ತಾ ವಾಲ್ಮೀಕಿ ಒಂದು ದಿನ ಹೇಳಿದ--

ಅಯೋಧ್ಯೆಯಲ್ಲಿ ಪಟ್ಟಾಭಿಷೇಕವಂತೆ. ಆದರೆ



ಮಗ ಕಾಡಿಗೆ ಹೊರಟನಂತೆ. ತಾನು ನಗರ ಬಯಸಿದರೆ ಮಗ ಕಾಡು ಬಯಸಿದ. ತನ್ನ ಮಾತು ಮೀರದ ಪಿತೃವಾಕ್ಯ ಪರಿಪಾಲನಾ ದುರಂಧರನಲ್ಲವೇ ಅವ! ವಾಲ್ಮೀಕಿ ಹೊಳೆಯ ಬಳಿಯಿಂದ ಮತ್ತೆ ದಂಡಕಾರಣ್ಯದ ಮಧ್ಯಕ್ಕೆ ನಡೆದ. ಇನ್ನೆಂದೂ ಹೊಳೆಯ ಕಡೆಗೆ ಹೋಗುವು ದಿಲ್ಲವೆಂದು ಶಪಥ ಮಾಡಿದ. ಬೇಡತಿ ತನ್ನ ತಂದೆಯ ಬಳಿಗೆ ಹೋದಳಲ್ಲವೇ? ಅವನಾದರೂ ಎಂಥ ರಾಕ್ಷಸ? ಮಗಳನ್ನು ಗಂಡನ ಕಡೆ ಕಳುಹಿಸುವುದು ಬಿಟ್ಟು ಅಲ್ಲೇ ಇರಿಸಿಕೊಂಡನಲ್ಲ?

ವಾಲ್ಮೀಕಿ ತಪ್ತನಾದ. ಅವನ ಮೇಲೆ ಯುದ್ಧ ಮಾಡಬೇಕೆನ್ನಿಸಿತು. ಆದರೆ ಈಗ ಬೇಡರ ಜನಾಂಗ ತನ್ನ ಸಹಾಯಕ್ಕೆ ಬರುವುದೇ? ಯುದ್ಧ ಮಾಡಲೇಬೇಕಾದ ಪರಿಸ್ಥಿತಿ ಬಂದರೆ ಈ ಮಂಗ-ಗಳ ಸೈನ್ಯವನ್ನೇ ತಾನು ಕಟ್ಟಬೇಕಾಗುತ್ತದೇನೊ? ಆಗಲಿ ಮರದ ಬುಡವೊಂದರ ಬಳಿ ಕುಳಿತು ವಾಲ್ಮೀಕಿ ಮಂಗಗಳಿಂದಲೇ ವ್ಯೂಹ ರಚನೆ ಮಾಡುವ ಕಲ್ಪನೆಗೆ ತೊಡಗಿದ. ರಾಕ್ಷಸನೊಡನೆ ಯುದ್ಧ ಮಾಡಿದ;

ಅಳಿಲೊಂದು ಅವನ ಹೆಗಲ ಮೇಲೇರಿ ಕಚಗುಳಿ ಇಟ್ಟಿತು. ವಾಲ್ಮೀಕಿ ಅದನ್ನು ಕೈಗೆ ತೆಗೆದುಕೊಂಡು, "ನಾನು ಯುದ್ಧಕ್ಕೆ ತೊಡಗಿದರೆ ನೀನೂ ಬರುವೆಯಾ?" ಎಂದು ಕೇಳಿದ. ಅದು ಪುಣಕ್ಕನೇ ಹಾರಿದಾಗ ನಕ್ಕುಬಿಟ್ಟು ಎದ್ದ!

ವಾಲ್ಮೀಕಿ ಹುಚ್ಚನಂತೆ ಅಲೆಯತೊಡಗಿ ಹದಿನಾಲ್ಕು ವರುಷಗಳು ಸರಿದಿದ್ದವು. ಹಗಲು ರಾತ್ರಿ ಅವನು ಮನಸ್ಸಿನಲ್ಲೇ ಹೋರಾಡಿದ. ಕೊನೆಗೂ ಬೇಡತಿಯ ತಂದೆಯೊಡನೆ ಮಾನಸಿಕ ಮುಖಾಮುಖಿಯಾಗತೊಡಗಿತ್ತು. ತನ್ನೆಲ್ಲ ಶಕ್ತಿ ಮೀರಿ ಅವನು ಯುದ್ಧ ಮಾಡಿದ. ಅಂಥಿಂಥ ಯುದ್ಧವಲ್ಲ. ಆಕಾಶಕ್ಕೆ ಆಕಾಶವೇ ಉಪಮೆ ಸಮುದ್ರಕ್ಕೆ ಸಮುದ್ರವೇ ಉಪಮೆ. ಈ ಯುದ್ಧಕ್ಕೆ ಈ ಯುದ್ಧವೇ !

ಕಡೆಗೂ ಅವನು ಗೆದ್ದಾಗ ಮನಸ್ಸು ಶಾಂತ ವಾಗಿತ್ತು. ತನ್ನ ರೋಷ, ತಪ್ತತೆಗೆಲ್ಲ ಒಂದು ಅಭಿವ್ಯಕ್ತಿ ದೊರೆತಂತಾಗಿತ್ತು. ಈಗ ಬೇಡತಿ ಬಂದರೆ ಅವಳನ್ನು ಪರಿಗ್ರಹಿಸಲು ತಾನು ಸಿದ್ಧ ನಿದ್ದೇನೆಯೇ ಎಂದು ಪ್ರಶ್ನಿಸಿಕೊಂಡ. ಎದ್ದು ಪಾಳಯದ ಕಡೆಗೆ ನಡೆಯತೊಡಗಿದ. ಗುಡಿಸಲು ಗಳೆಲ್ಲ ವಾಸವಿಲ್ಲದೇ ಉರುಳಿಬಿದ್ದಿದ್ದುವು. ಅವು ಗಳನ್ನು ದಾಟುತ್ತಾ ತನ್ನ ಗುಡಿಸಲಿದ್ದ ಕಡೆ ನಡೆದ. ಅದು ಸಂಪೂರ್ಣ ನಾಶವಾಗಿತ್ತು. ಅಲ್ಲಿಯೇ ಕುಳಿತ. ರಾತ್ರಿಯಾದಂತೆ ಒಂದು ಮನೆಯಲ್ಲಿ ದೀಪ ಕಂಡಿತು. ಹತ್ತಿರ ಹೋಗಿ ನೋಡುತ್ತಾನೆ; ಬೆಳ್ಳನೆಯ ತಲೆಗೂದಲ ಮುದುಕಿಯೊಂದು ಅವನನ್ನು ಕಾಯುತ್ತಾ ಕುಳಿ ತಿತ್ತು. "ಬಂದೆಯಾ?" ಎಂದಿತು. ಅವನಿಗೆ ಅವಳ ಪರಿಚಯ ಸಿಕ್ಕಿತು. ಕಣ್ಣಲ್ಲಿ ನೀರು ತುಂಬಿತು. ಆಕೆ ಎಲೆಯ ತುಂಬ ಬೋರೆ ಹಣ್ಣು ಗಳನ್ನಿಟ್ಟು ಅವನ ಮೈದಡವಿದಳು. ನದಿಯ ಆ ದಡದಲ್ಲಿದ್ದ ನಿನ್ನ ಮಾವ ನಿನ್ನನ್ನು ಹುಡುಕಿ ಬಂದಿದ್ದನೇ ಎಂದಳು. ಮಕ್ಕಳಿಗೆ ನೆನಪಿರಬ ಹುದೇ ಎಂದಳು. 'ಅವಳ' ನೆನಪು ಮಾತ್ರ ತೆಗೆಯಲಿಲ್ಲ. ವಾಲ್ಮೀಕಿ ಅತ್ತೇ ಬಿಟ್ಟ. ತನ್ನ ಹೆಂಡತಿ ಇವಳಂತೆ ತನ್ನನ್ನು ಕಾದಿದ್ದರೆ? ತನ್ನನ್ನು ಹಿಂಬಾಲಿಸಿದ್ದರೆ?

ಅವಳ ಪಾಲನೆಯಲ್ಲಿ ವಾಲ್ಮೀಕಿ ಶಾಂತವಾಗಿ ಬದುಕತೊಡಗಿದ. ಅಯೋಧ್ಯೆಯ ಕನಸನ್ನು ಅವಳಿಗೆ ಹೇಳಿದ. ತನಗಿದು ಮೊದಲೇ ಗೊತ್ತಿತ್ತು ಎಂದಳು ಆಕೆ. ಹೇಗೆ ಎಂದ ವಾಲ್ಮೀಕಿ. ಆ ಮುದುಕಿ ನಕ್ಕಳು "ಹೋಗು, ಗುಡಿಸಲ ಹೊರಗೆ ಇರುವ ಯಾವುದೇ ಜೀವಿ ಯನ್ನು ಕೇಳು. ನಿನ್ನ ಕನಸನ್ನು ಹೇಳುತ್ತವೆ. ದಂಡಕಾರಣ್ಯದ ಮೃಗ–ಪಕ್ಷಿಗಳಿಗೆಲ್ಲ ಇದು ಗೊತ್ತು. ದಿನಾ ನೀನು ಕುಳಿತು ಅವಕ್ಕೆ ನಿನ್ನ ಕನಸುಗಳನ್ನು ಹೇಳುತ್ತಿಯಂತೆ. ಈ ಕಡೆ ಹಾಯುವ ಕ್ರೌಂಚಗಳು ನನಗೆ ಅವನ್ನು ಹೇಳು ತ್ತಿದ್ದುವು" ಎಂದಳು.

ವರುಷಗಳು ಕಳೆದುವು. ವಾಲ್ಮೀಕಿ ತನ್ನ ಕಥೆ ಯನ್ನೇ ಆಗಾಗ ಮೃಗ – ಪಕ್ಷಿಗಳಿಂದ ಕೇಳಿದ.

ಶಬರಿಯ ಪಾಲನೆಯಲ್ಲಿ ಅವನ ಮನಸ್ಸು ಮಾಗಿತು. ಬೇಡತಿ ಬಂದರೆ ಈಗಲೂ ಅವಳೊಂದಿಗೆ ಬಾಳಲು ಸಾಧ್ಯ ಅನಿಸಿತು. ಒಂದು ದಿನ ಶಬರಿ ತೀರಿಕೊಂಡಳು. ಆಕೆಯು ಕೊನೆಯ ದಿನ ವಾಲ್ಮೀಕಿಯನ್ನು ಹತ್ತಿರ ಕುಳ್ಳಿರಿಸಿ ಆತನ ಜನ್ಮ ರಹಸ್ಯವನ್ನು ಆಕೆ ಹೇಳಿ ಉಸಿರೆಳೆದಳು! ವಾಲ್ಮೀಕಿ ಒಂದಷ್ಟು ವ್ಯಗ್ರನಾದದ್ದು ನಿಜ. ಆದರೆ ಅದು ತನ್ನ ಹುಟ್ಟಿನ ಬಗ್ಗೆ ಅಲ್ಲ. ದೈವದ ಕೈವಾಡಕ್ಕೆ. ಆ ಬೇಡತಿಯೂ ತನ್ನ ಹುಟ್ಟನ್ನು ಹೀಗೇ ಎಂದು ತಿಳಿದಿದ್ದರೆ?

ವಾಲ್ಮೀಕಿ ಈಗ ಇನ್ನೂ ಹೆಚ್ಚು ಶಾಂತನಾಗಿದ್ದ. ಶಬರಿಯಿಂದ ಅವನು ಪ್ರೀತಿಸಲ್ಪಡುವುದು ಹೇಗೆ ಎಂದು ತಿಳಿದಿದ್ದ. ಪ್ರೀತಿಯ ನಾನಾ ಮುಖಗಳನ್ನು ಅರಿತುಕೊಂಡಿದ್ದ, ಬೇಡತಿಯನ್ನು ತಾನು ನಿಜವಾಗಿ ಪ್ರೀತಿಸಬೇಕು ಎಂದುಕೊಂಡ. ಕಳೆದ ಹದಿನಾಲ್ಕು ವರುಷಗಳಲ್ಲಿ ಅವಳ ಬಗ್ಗೆ ತನಗಾದ ನಿರಾಶೆ, ರೋಷಗಳಿಗಾಗಿ ತನ್ನನ್ನು ತಾನೇ ಹಳಿದುಕೊಂಡ. ಒಂದು ದಿನ ತನ್ನ ಜಿಂಕೆಯ ಚರ್ಮವನ್ನು ಒಗೆಯುತ್ತಿರುವಾಗ ಅವಳನ್ನು ಮತ್ತೆ ಈ ಗುಡಿಸಲಿಗೆ ಕರೆತರಬೇಕು, ಹೊಸ ಬಾಳನ್ನು ಬಾಳಬೇಕು ಅಂತ ತೀವ್ರ ಬಯಕೆಯಾಯಿತು. ಆದರೆ ತಂದೆಯ ಮನೆಯಲ್ಲಿದ್ದ ಆಕೆ ತನ್ನನ್ನು ಗುರುತಿಸುವಳೋ ಇಲ್ಲವೋ ಅಂತ ಅನುಮಾನ ಕಾಡಿತು!

ಸೀತೆ ಬೆಂಕಿಯಿಂದ ಪರಿಶುದ್ಧಳಾದಳಂತೆ! ಅಯೋಧ್ಯೆಯಲ್ಲಿ ರಾಮ ಪಟ್ಟಾಭಿಷೇಕವಾಯಿತಂತೆ! ಜನ ಶಾಂತಿಯಿಂದ ಬದುಕಿದರಂತೆ! ಆದರೆ ರಾಮ ಅಗಸನ ಮಾತು ಕೇಳಿ ಸೀತೆಯನ್ನು ಬಿಟ್ಟನಂತೆ! ಕಾಡಿನಲ್ಲಿದ್ದ ಸೀತೆಯನ್ನು ತಾನೇ ವಾಲ್ಮೀಕಿ ಆಶ್ರಮಕ್ಕೆ ಕರೆತಂದನಂತೆ! ತನ್ನ ಮಾನಸಿಕ ಆಡುಂಬೊಲದಲ್ಲಿ ಅವಳಿಗೆರಡು ಮಕ್ಕಳೂ ಹುಟ್ಟಿದುವಂತೆ! ತಂದೆ ಮಕ್ಕಳ ಮಿಲನವಾಯಿತಂತೆ!

ಕೇಳಲು ಮನುಷ್ಯರಿಲ್ಲದ ಕಡೆ ವಾಲ್ಮೀಕಿ ತನ್ನ ಕಲ್ಪನೆಗಳನ್ನು ಮೃಗ ಪಕ್ಷಿಗಳಿಗೇ ಹೇಳಿದ. ಅವು ಒಬ್ಬರಿಗೊಬ್ಬರು ಆ ಕಥೆಯನ್ನು ಹೇಳಿದವು. ಅವುಗಳ ಆಯುಸ್ಸು ಕಡಿಮೆ. ಆದರೆ ತಂದೆ ತಾಯಿಯರು ಮಕ್ಕಳಿಗೆ, ಗಂಡ ತನ್ನ ಹೆಂಡತಿಗೆ ವಾಲ್ಮೀಕಿಯ ಕಥೆ ಹೇಳುತ್ತಾ ಸಾಗಿದ್ದುವು.

ವಾಲ್ಮೀಕಿಯ ಗಡ್ಡ ಹಣ್ಣಾಗಿತ್ತು. ಮನಸ್ಸು ಮಾಗಿತ್ತು. ದಿನಾ ಅವನು ತನ್ನ ಗುಡಿಸಲ ಹೊರಗೆ ಬಂದು ಜಿಂಕೆಯನ್ನು, ಮಂಗವನ್ನು, ಕರಡಿಯನ್ನು, ಕ್ರೌಂಚವನ್ನು ಕಂಡು ಮೈ-ದಡವುತ್ತಿದ್ದ. ಅವರೊಡನೆ ಮಾತನಾಡುತ್ತಿದ್ದ. ಒಂದು ದಿನ ಬೆಳಿಗ್ಗೆ ಅವನೊಂದು ಮರದ ಹಿಂದೆ ನಿಂತು. ಕ್ರೌಂಚವೊಂದು ತನ್ನ ಇನಿಯೆಗೆ ಹೇಳುವ ಕಥೆಯನ್ನು ಕೇಳಿ ಪುಳಕಗೊಂಡ. "ನೋಡಿದೆಯಾ, ವಾಲ್ಮೀಕಿಯ ಪ್ರೀತಿಯನ್ನು! ಹೆಂಡತಿಯನ್ನು ಅಗಲಿದ ವಿರಹವನ್ನು ನಗರ ಕಟ್ಟುವ ಆಸೆಯನ್ನು!" ಎಂದಿತು ಗಂಡು ಕ್ರೌಂಚ. ರೊಯ್ಯೆಂದು ಬೀಸಿ ಬಂದ ಬಾಣವೊಂದು ಆಗಲೇ ಹೆಣ್ಣು ಕ್ರೌಂಚದ ಕೊರಳನ್ನು ಕೊಯ್ದಿತ್ತು. ಕೀರಲು ಧ್ವನಿಯಲ್ಲಿ ಅದು ಕಿರುಚುತ್ತಾ ಕೆಳಗೆ ಬಿತ್ತು. ವಾಲ್ಮೀಕಿ ಹಿಂತಿರುಗಿ ನೋಡಿದ. ಜನಸ್ಥಾನಕ್ಕೆ ಬಂದ ಈ ಹೊಸ ವ್ಯಾಧ ಯಾರು ಎಂದು. ಹತ್ತಿರ ಹೋಗಿ ಕ್ರೌಂಚವನ್ನು ಕೈಗೆತ್ತಿಕೊಂಡಾಗ ಅವನ ಕಣ್ಣಲ್ಲಿ ನೀರು ಉಕ್ಕಿತು. ಬದುಕು ಇಷ್ಟೇ ಎಂಬ ಸತ್ಯವೊಂದು ಥಕ್ಕನೆ ಹೊಳೆದು, ಸತ್ಯದ ಪರಿಚಯ ಮಾಡಿಕೊಟ್ಟ ಆ ವ್ಯಾಧನತ್ತ ನೋಡಿ ತಲೆ ಬಗ್ಗಿಸಿ ನಮಸ್ಕರಿಸಿದ ವಾಲ್ಮೀಕಿ.

ಆ ಮೇಲೆ ವಾಲ್ಮೀಕಿಯನ್ನು ಕೇಳಿದವರಿಲ್ಲ. ಆದರೆ ಅವನ ಕಥೆಯನ್ನು ಪಶು ಪಕ್ಷಿಗಳು ಮುಂದಿನ ಜನಾಂಗಕ್ಕೆ ಹೇಳತೊಡಗಿದುವು. ದಂಡಕಾರಣ್ಯದ ಕೊಂಬೆ ಕೊಂಬೆಗಳಿಂದ ವಾಲ್ಮೀಕಿಯ ಕಥೆ ಕೇಳಿ ಬರತೊಡಗಿತು.! ◉



# ಅಂತರಂಗಿ ಶುದ್ಧಿ

ಕೆ. ಪ್ರಭಾಕರರಾವ್

ಅಷ್ಟೊಂದು ಬೆಳಕಿಗೆ ಬಾರದ, ಆದರೆ ಭಾರತದ ಯುವಜನತೆ ತೀವ್ರವಾಗಿ ಎದುರಿಸುತ್ತಿರುವ ಸಮಸ್ಯೆಗಳು ಹಲವು. ಈ ಸಮಸ್ಯೆಗಳಲ್ಲಿ ಅಂತರಂಗೀ ಶುದ್ಧಿ ಅಥವಾ ಅಂತರ್‌ಅಂಗಿ ಶುದ್ಧೀಕರಣದ್ದೂ ಒಂದಾಗಿರುತ್ತದೆ. ಬನಿಯನ್ ಕೊಂಡ ಮರುದಿನದಿಂದಲೇ ಈ ಪೀಡೆ ಕಾಡಲಾರಂಭಿಸುತ್ತದೆ. ನೀರಿಗೆ ಬರವಿರುವ ಊರಿನಲ್ಲಿ, ನೀರು ಮುಟ್ಟಲಾಗದಷ್ಟು ಚಳಿಯಿರುವಲ್ಲಿ, ಸಾಬೂನಿಗೆ ನೊರೆ ಬಾರದ ಊರಲ್ಲಿ, ಒಗೆಯುವ ಕಲ್ಲಿಲ್ಲದ ನಾಡಲ್ಲಿ ನಾರದಂಥ ಬನಿಯನ್ ಧರಿಸುವುದು ಅಸಾಧ್ಯವೇ ಸರಿ. ವರ್ಗ ಮಾಡುವವರು ಬನಿಯನ್ ಒಗೆಯಲು ಅನುಕೂಲ ಪರಿಸರ ಆ ಊರಿನಲ್ಲಿದೆಯೆ ಎಂದು ನೋಡಿಕೊಂಡು ಕಳಿಸುತ್ತಾರೆಯೆ? ಬನಿಯನ್ ಬಿಡಿ, ನಮ್ಮ ಚರ್ಮದ ಪರಿವೆಯೂ ಅವರಿಗಿಲ್ಲ.

ಬನಿಯನ್ ಇರುವುದು ಒಗೆಯಲಿಕ್ಕಾಗಿಯೇ, ಭೂಮಿಗೆ ಬಿಸಿಲು ಇರುವುದು ಬನಿಯನ್ ಒಣಗಿಸಲಿಕ್ಕಾಗಿಯೇ ಎಂದು ಕೆಲವು ಅತಿಶ್ರದ್ಧೆಯುವರ ನಂಬಿಕೆ. ಇನ್ನು ಕೆಲವರು ಸೂರ್ಯಾಸ್ತಮಾನಕ್ಕೂ ಬನಿಯನ್ನಿಗೂ ಗಂಟುಹಾಕುತ್ತಾರೆ. ಮುಂಚಿನ ದಿನದ ಅನ್ನ ನೀರು ಮುಟ್ಟದ ಕೆಲವರ ಹಾಗೆ ಇಂಥವರು ಮುನ್ನಾ ದಿನದ ಬನಿಯನ್ ಧರಿಸುವುದಿಲ್ಲ. ಮುಂಚಿನ ದಿನ ಅದು ಎಷ್ಟು ಗಂಟೆಗಳ ಕಾಲ ತನ್ನ ಮೈಮೇಲೆ ಬಂದಿತ್ತು ಎಂದು ಅವರು ಲೆಕ್ಕ ಹಾಕುವುದಿಲ್ಲ. ರಾತ್ರಿ ಕಳೆದರೆ ಮುಗಿಯಿತು, ನಿನ್ನೆಯದೆಂದು ಮೂಲೆಗೆ ಒಗೆದರೇ. ಇಂತಹ ಜನರು ಊರಲ್ಲಿ ಮರ್ಯಾದಸ್ತರಂತೆ ಮೆರೆಯುವಷ್ಟು ಕಾಲ ಈ ಬಡ ಭಾರತ ಉದ್ಧಾರವಾದ ಹಾಗೆಯೇ.





"ದಿನಾ ಒಗೆದ ಬನಿಯನ್ನನ್ನೂ ಧರಿಸುವ ಶ್ರೇಷ್ಠ" ನೆಂದು ತಿಳಿಯಲ್ಪಡುವ ನನ್ನ ನಾಲ್ಕು ವರ್ಷಗಳ ಸಹವಾಸಿಯೊಬ್ಬನಿದ್ದಾನೆ. ಅಹರ್ನಿಶಿ ಧರಿಸಿ ಮೈಯಲ್ಲಿ ಬನಿಯನ್ನಿನ ಅಚ್ಚು ಬಿದ್ದಿದೆ. ಬನಿಯನ್ ತೆಗೆದಾದ ಮೇಲೆಯೂ ಇನ್ನೂ ಒಂದು ಉಳಿದಂತೆ ಕಾಣುತ್ತದೆ. ಅವನಿಗೆ ನಾಲ್ಕು ದಿನಗಳಿಗೊಮ್ಮೆ ನಾನು ಬನಿಯನ್ನಿಗೆ ನೀರು ಕಾಣಿಸುವುದು ಆಶ್ಚರ್ಯ. ನಾನು ಅವನಿಗೆ ವಿವರಿಸಿದೆ: "ನಾನು ದಿನಕ್ಕೆ ಆರು ಗಂಟೆ ಮಾತ್ರ ಬನಿಯನ್ ಉಪಯೋಗಿಸುವುದು. ಸೂರ್ಯಾಸ್ತಮಾನ ನನ್ನ ಒಗೆತದ ಸಮಯ ಪಟ್ಟಿಯನ್ನು ವಿಚಲಿತಗೊಳಿಸದು. ಗಂಟೆಗಳ ಲೆಕ್ಕ ಹಾಕಿ ನೋಡು. ನನಗಿಂತ ಹೆಚ್ಚು ಹೆಮ್ಮೆಗೆ ನಿನಗೆ ಅವಕಾಶವಿಲ್ಲ."

ಹಾಗೆ ನೋಡಿದಲ್ಲಿ ಒಗೆಯುವುದರ ಬದಲಿಗೆ ವಾರಕ್ಕೆರಡು ಸಲವಾದರೂ ಒಬ್ಬನಲ್ಲಿ ಬನಿಯನ್ ಶುದ್ಧೀಕರಣದ ಬಗ್ಗೆ ಮಾತೆತ್ತಿದರೂ ನಡೆಯುತ್ತದೆ ಎಂದು ನನಗನಿಸುತ್ತದೆ. ಮಡಿಕೇರಿಯಂತಹ ಚಳಿಯೂರುಗಳಲ್ಲಿಯೂ ಈ ತರದ



ಮಾತುಗಳು ಜಯಪ್ರದವಾಗಿ ಪ್ರಯೋಗಿಸಲ್ಪಡುತ್ತದೆಂದರೆ ಲೋಕ ಎಷ್ಟು ಕೆಟ್ಟಿದೆಯೆಂದು ನೀವೇ ಊಹಿಸಿಕೊಳ್ಳಿ. ಈ ಕಲಿಕಾಲದಲ್ಲಿ ಕುಡಿಯಲು ನೀರಿಲ್ಲ ಎನ್ನುವವನಿಗಿಂತ ಬನಿಯನ್ ಒಗೆಯಲಿಕ್ಕೆ ಸಹ ನೀರಿಲ್ಲ ಎನ್ನುವವನಿಗೆ ಎರಡು ಮಾರ್ಕು ಜಾಸ್ತಿ.

ಮೈಗೆ ಕೊಳೆಯಾಗಬಾರದೆಂದು ಬನಿಯನ್ ಧರಿಸಿ ಅದಕ್ಕೆ ಕೊಳೆಯಾಗಬಾರದೆಂದು ಅದರ ಮೇಲೆ ಅಂಗಿಕೋಟುಗಳನ್ನು ಹೇರಿಕೊಂಡು ಎಲ್ಲವನ್ನೂ ನೀರಲ್ಲಿ ಅದ್ದಿಕೊಂಡಿರುವವರನ್ನು ಕಂಡು ಎನಗೆ ನಗೆಯು ಬರುತಿದೆ ಸದಾ ಒಗೆಯುವವರ ಕಂಡು.

ತಥಾಕಥಿತ ದಿನಾ ಒಗೆಯುವವರ ಬನಿಯನ್ನುಗಳು ಕೊಕ್ಕರೆಯಂತೆ ಬೆಳ್ಳಗಿರಬಹುದು – ಯಾಕೆ ಗೊತ್ತೆ? ಕಲ್ಲು ಮನಸ್ಸಿನ ಅವರು ತಿಕ್ಕುವುದರಿಂದಲೋ, ಶಕ್ತಿ ಮೀರಿ ಹಿಂಡಿ ಶೋಷಣೆ ನಡೆಸುವುದರಿಂದಲೋ ಸರಿಗೆಯ ಗಂಟಿಗೆ ಸಿಕ್ಕಿಯೋ ಬ್ರಶ್‌ನಿಂದ ಎಳೆಯಲ್ಪಟ್ಟೋ ಇತ್ಯಾದಿ ಕಾರಣಗಳಿಂದ ಅವರ ಬನಿಯನ್ನುಗಳು ಜಲ್ಲರಿ-

ಯಂತಾಗಿ ಎಲ್ಲೆಡೆಗಳಲ್ಲೂ ತಲೆಹಾಕುವಂತಾಗುವುದು ಬೇಗ. ಬಿಳವೆಯಲ್ಲಿಯೇ ಅಂದರೆ ಎಳವೆಯಲ್ಲಿಯೇ ಅದಕ್ಕೆ ಮುಪ್ಪು, ವಿನಾ ಅವರ ಒಗೆತದಿಂದ ಬನಿಯನ್ನಿಗೆ ಮುಪ್ಪು ಬಂದಿರುವುದಿಲ್ಲ. ನನ್ನ ಹಾಗೆ ಕಾಲಿಕವಾಗಿ ಒಗೆಯುವವರ ಬನಿಯನ್ನು ಬಹುಕಾಲ ಸೇವೆ ಸಲ್ಲಿಸಿ ಮಾಗಿ ಮುಪ್ಪಡರಿ ಅದರ ವರ್ಣಾಂತರವಾಗಿರುತ್ತದೆ. ಅವರು ಹೊಸ ಬನಿಯನ್ನುಗಳನ್ನು ಆಗಾಗ ಉಪಯೋಗಿಸಬೇಕಾಗಿ ಬಂದು ಅವರದು ಯಾವಾಗಲೂ ಒಂದನೇ ಕ್ಲಾಸಿನ ಕನಕಳ ಲಂಗದಂತೆ ರಥುಳ ರಥುಳ ಇರುತ್ತದೆ. ಬಣ್ಣ, ವಾಸನೆ ಇತ್ಯಾದಿಗಳು ಒಂದೇ ವಿಷಯದ ರಾಸಾಯನಿಕ ರೂಪಾಂತರಗಳು ಎನ್ನುವ ಶುದ್ಧ ವೈಜ್ಞಾನಿಕ ಮನೋಭಾವ ನಮ್ಮಲ್ಲಿ — ತತ್ರಾಪಿ ನಮ್ಮ ಗೃಹಿಣಿಯರಲ್ಲಿ ಮೂಡಬೇಕಾದರೆ ಅದಿನ್ನೆಷ್ಟು ಬನಿಯನ್‌ಗಳ ಬಾಹುಚ್ಛೇದನ, ಆತ್ಮಾಹುತಿಗಳು ನಡೆಯಬೇಕೊ! ಹಾಗೆಂದು ಲೋಟ ಹಾಲಿಗೋಸ್ಕರ ಎಮ್ಮೆ ಕಟ್ಟಿಕೊಂಡಂತೆ ಈ ಶುದ್ಧೀಕರಣ ಸಮಸ್ಯಾ ನಿವಾರಣೆಗಾಗಿ ಒಂದು ಮದುವೆ ಮಾಡಿಕೊಂಡಿರೋ ಅಲ್ಲಿಗೂ ನಿಮ್ಮ ಬವಣೆ ತಪ್ಪುವುದಿಲ್ಲ. ಬನಿಯನ್ನಿನ ಮೇಲೆ ಮಡದಿಯನ್ನು ಪ್ರಯೋಗಿಸುವುದೆಂದರೆ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಬಿಟ್ಟಂತೆ. ಮತ್ತೆ ನಿಮಗೆ ಕೊಳೆಯೂ ಇಲ್ಲ, ಬನಿಯನ್ನೂ ಇಲ್ಲ. ಈ ಗೃಹಿಣಿಯರಲ್ಲಿ ಪ್ರತಿಶತ ತೊಂಬತ್ತೈದು ಈ ರೀತಿಯ 'ಕೊಳ-ರೋಗ'ದವರೆಂದು ಅಂಕಿಸಂಖ್ಯೆಗಳಿಂದ ಸಾಬೀತಾಗಿದೆ. ತನ್ನ ತವರಿನ ಮೇಲ್ಮೆಯನ್ನು ಬನಿಯನ್ ಒಗೆಯುವುದರಲ್ಲಿ ತೋರಿಸುವ ಭರದಲ್ಲಿ ನಮ್ಮ ಮೈಮೇಲಿನ ಬನಿಯನ್ನಿನ ಮೇಲ್ಮೈ ಮಾಯ!

ಬನಿಯನ್ ಬಿಳಿಯಿರಬೇಕೆಂಬ ಭ್ರಮೆ ಮನುಷ್ಯನನ್ನು ಎಲ್ಲಿಯ ವರೆಗೆ ತರುತ್ತದೆಂದು ನೋಡಿ. ಕೆಲವರಿರುತ್ತಾರೆ, ಅವರಿಗೆ ಮನೆ ಬಿಟ್ಟು ಹೊರಡಬೇಕಾದರೆ ಹೊಸ ಬನಿಯನ್ನೇ ಬೇಕು. ಹೊಸ ಕೆಲಸದ ಸ್ಥಳಕ್ಕೆ ಅಥವಾ ಒಂದು ಮದುವೆಗೆ ಅವರು ಹೋಗಬೇಕಾದರೆ ಅವರಿಗೆ ಹೊಸ ಬನಿಯನ್ನೇ ರಕ್ಷಾಕವಚ. ಹೊಸ ಬನಿಯನ್ ಅಂದಾಗ ನೆನಪಾಗುತ್ತದೆ, ನನ್ನೊಬ್ಬ ಮಿತ್ರ - ಅವನನ್ನು ಮಿತ್ರ ಎನ್ನಲು ನನಗೇನೂ ನಾಚಿಕೆಯಿಲ್ಲ – ಬನಿಯನ್ ಒಗೆಯುವುದನ್ನು ಸ್ವಲ್ಪ ಸರಿಯಾಗಿಯೇ ತಪ್ಪು ತಿಳಿದಿದ್ದಾನೆ. ಅವನು ಅದನ್ನು ಸತತವಾಗಿ ತಿಂಗಳೆರಡು ತಿಂಗಳ ಕಾಲ ಧರಿಸಿ ಕೊನೆಗೊಂದು ದಿನ ದೂರ ಒಗೆಯುವನು. ಮತ್ತೆ ಇನ್ನೊಂದು ಹೊಸತು. ಅವನದು ಹಾಕು ಮತ್ತು ಹರಿ ನೀತಿ. ಅವನ ಹತ್ತಿರ ಬರಲು ನಮಗೆ ಸುಲಭಸಾಧ್ಯವಲ್ಲದಿದ್ದರೂ ಅವನ ಆದರ್ಶವನ್ನು ನಾವು ಮುಂದಿಟ್ಟುಕೊಂಡು ಪ್ರಯತ್ನಿಸುವುದರಲ್ಲಿ ನಮ್ಮ ಶ್ರೇಯಸ್ಸು ಅಡಗಿದೆ.

ಬನಿಯನ್ ನಾರುತ್ತಿದ್ದರೆ ಅದನ್ನು ಒಗೆಯುದೊಂದೇ ತಾರಕವಲ್ಲ. ಅಂಥ ಸಂಶಯ ಬಂದಲ್ಲಿ ಯಾರನ್ನೂ ಹತ್ತಿರ ಸೇರಿಸಿಕೊಳ್ಳಬೇಡಿರಿ. ಅಥವಾ ನೀವೇ ಅವರ ಬನಿಯನ್ ವಾಸನೆ ಬೀರುತ್ತಿದೆಯೆಂದು ಆಕ್ರಮಣ ಆರಂಭಿಸಿರಿ. ಏಕೆಂದರೆ, ಎಲ್ಲರ ಬನಿಯನ್ನುಗಳೂ ತೂತೇ. ಸೇಂಟಿನ ವಾಸನೆಯವರು ಹತ್ತಿರ





ಸುಳಿದಾಗ ಅವರ ಬನಿಯನ್ನೇ ವಾಸಿ ಎಂದು ತಿಳಿಯ ಹೇಳಿರಿ. ಜನರೊಂದಿಗೆ ಬೆರೆಯುವಾಗ ಒಂದು ಮರ್ಯಾದಸ್ಥ ದೂರವನ್ನು ಇಟ್ಟು ಕೊಳ್ಳಿ. ಈ ವಿಚಾರಗಳನ್ನು ನೀವು ಜಗತ್ತಿನಲ್ಲಿ ಮೊದಲ ಬಾರಿಗೆ ಹರಡಬೇಕಾಗಿ ಬರುವಾಗ ನಿಮಗೆ ಗೆಲಿಲಿಯೋ, ಗಾಂಧಿ ಮುಂತಾದವರಿಗೆ ಬಂದ ಕಷ್ಟಗಳು ಬರಬಹುದೆಂದು ನಾನು ಬಲ್ಲೆ. ಆದರೂ ನಾಳಿನ ಮಂದಿಗಾಗಿ ಈ ಕೆಲಸ ಮಿಶನರೀ ಉತ್ಸಾಹ ಶ್ರದ್ಧೆಯಿಂದ ನಡೆಯ ಬೇಕು.

ನನ್ನ ಹತ್ತಿರ ಕೇಳಿದರೆ ಚೆನ್ನಾಗಿ ಶುಭ್ರ ವಾಗಿರಬೇಕಾದ ಏಕಮಾತ್ರ ಚರಾಚರ ವಸ್ತು ವೆಂದರೆ ಕನ್ನಡಿ. ಅದನ್ನು ಬಿಟ್ಟು ಪಾತ್ರೆ ಪರಡಿಗಳು, ಬಟ್ಟೆ ಬರೆಗಳು ಇತ್ಯಾದಿಗಳು ಲಕ ಲಕ ಹೊಳೆಯಬೇಕೆಂದರೆ ಹೊಳೆಯಲ್ಲಿ ಹುಣಸೇ ಹಣ್ಣು ತೊಳೆದಷ್ಟು ಅಜ್ಞಾನ ಸಂಬಂಧೀ ವ್ಯರ್ಥ ವಿಚಾರವು. ಈ ದರ್ಪಣೇತರ ವಸ್ತುಗಳ ಅಸ್ತಿತ್ವದ ಉದ್ದೇಶವೇ ಬೇರೆ ಇರು ತ್ತದೆ. ಅಂಗಿಯ ಆತ್ಮ ಅಂತರಂಗಿಗೆ ವರ್ಣಾಕಾರ ಶೌಭ್ರ್ಯಗಳ ಹಂಗೇಕೆ? "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ..." ಗೀತೆಯ ಮಾತೇ ಇಲ್ಲಿಗೂ ತಾಗಿತು.

ಈ ನಿಟ್ಟಿನಲ್ಲಿ ಕಬಡ್ಡಿ ಆಟಗಾರರ ಬನಿಯನ್ ಬಗೆಗಿನ ಧೋರಣೆ ವರ್ತನೆ ಅನುಕರಣೀಯ. ಅಲ್ಲಿ ಬನಿಯನ್ ಒಂದು ಉಪಚಾರ, ಸೂಪರ್ ಫಿಶಿಯಲ್ ಸಂಗತಿ. ಎದುರಾಳಿ ಕೈಯಿಕ್ಕಿ–ದನೋ ಇಕ್ಕಲ್ಪಟ್ಟವನ ಬನಿಯನ್ ಮಣ್ಣು ಗೂಡಿತು, ಎಳೆದನೋ ಹರಿದು ಮುದ್ದೆ ಮುದುಡಿತು. ಆದರಲ್ಲಿ ರಾರಾಜಿಸುವ ವಿಜಯ ವಿಕ್ರಮ ಇತ್ಯಾದಿ ಮಹಾ ಹೆಸರುಗಳು ಮೊದ ಲಿನ ಕೆಲವೇ ರೈಡುಗಳಲ್ಲಿ ಕೆಸರಾಗಿ ಬಿಡುತ್ತವೆ. ಮೊದಲು ಹೆಸರು ಕೆಡಿಸಿಬಿಟ್ಟರೆ ಮುಂದಿನ ಕೆಲಸ ಸುಗಮ. ಈ ಆವರಣಭಂಗ ಕ್ರಿಯೆ ಯಿಂದ ಮೈಕಟ್ಟಿನ ಪ್ರದರ್ಶನಕ್ಕೂ ಅನುಕೂಲ

ಎನ್ನಿ.

ವಿಷಯ ಹೀಗಿರುತ್ತ ಈ ಅಂತರಂಗಿ ಶುದ್ಧಿಯ ಸಮಸ್ಯೆಯನ್ನು ಬಗೆಹರಿಸುವಲ್ಲಿ ಸರಕಾರ ಹೇಗೆ ಮಹತ್ವದ ಪಾತ್ರ ವಹಿಸಬಹುದು ಎಂಬುದರ ಬಗ್ಗೆ ನನ್ನ ಕೆಲವು ಸಲಹೆಗಳಿವೆ. ಕಂದು ಬಣ್ಣಕ್ಕೆ ತಿರುಗಿದ ಬನಿಯನ್ನುಗಳನ್ನು ತೊಟ್ಟ ಹೀರೋಗಳನ್ನು ಧೈರ್ಯವಾಗಿ ತೋರಿಸುವ ರಿಯಲಿಸ್ಟಿಕ್ ಸಿನೇಮಗಳಿಗೆ ತೆರಿಗೆ ವಿನಾಯತಿ ಕೊಡಬಹುದು. 'ಮುಕ್ತಿ' ಚಿತ್ರಕ್ಕೆ ಅವಾರ್ಡು ಬಂದದ್ದು ಇದೇ ಕಾರಣಕ್ಕಾಗಿ ಎಂದು ನನ್ನ ಅಣ್ಣನ ನಂಬುಗೆ. ಡಿ. ಎಂ. ಕೆ. ಯವರ ಅನುಭವವನ್ನು ಉಪಯೋಗಿಸಿಕೊಂಡು ನಮ್ಮ ನೀರಿಲ್ಲದ ಪ್ರದೇಶಗಳಲ್ಲೂ ಕಪ್ಪು ಬನಿಯನ್ ಉತ್ಪಾದನೆಯನ್ನು ಪ್ರೋತ್ಸಾಹಿಸಿ ರೇಶನ್ ಕಾರ್ಡುಗಳ ಮೂಲಕ ಅವುಗಳನ್ನು ಹಂಚುವ ವ್ಯವಸ್ಥೆ ಮಾಡಬಹುದು. ಒಟ್ಟಾರೆ, ಬೆವರು ಸುರಿಸಿದ ದುಡಿಮೆಯ ಪ್ರತೀಕವಾಗಿರುವ ಮಾಸಲು ಒಳಂಗಿಯನ್ನು ಸಮಾಜ ಒಪ್ಪುವ ಒಂದು ವಸ್ತುವಾಗಿ ರೂಪಿಸುವ ದಿಶೆಯಲ್ಲಿ ಸರಕಾರ ಕಾರ್ಯಮಗ್ನವಾಗಬೇಕು.

ಅಂತರಂಗ ಶುದ್ಧಿಯೇ ಬೇರೆ, ಅಂತರಂಗಿ ಶುದ್ಧಿಯೇ ಬೇರೆ. ಜಿನ್ನಾರವರ ಜೀವನ ಚರಿತ್ರೆಯಲ್ಲಿ ಒಂದು ವಿಷಯ ಬರುತ್ತದೆ. ಅವರು ದಿನಕ್ಕೆ ನಾಲ್ಕು ಬಾರಿ ಬನಿಯನ್ ಬದಲಾಯಿಸುತ್ತಿದ್ದರಂತೆ. ಅಂಥವರ ಅಂತರಂಗ ಹೇಗಿತ್ತೆಂಬುದು ಈಗ ಚರಿತ್ರೆಯಾಗಿದೆ. (ಖಂಡಿತ, ಅವರ ಕೆಲಸದ ಆಳು ಅದನ್ನು ಸುಮ್ಮನೆ ನೀರಲ್ಲದ್ದಿ ತರುತ್ತಿದ್ದ ಫಲವೇನು?) ಜಾತಿಯಲ್ಲಿ ಬನಿಯನೇ ಆಗಿದ್ದರೂ ಗಾಂಧೀಜಿ ಈ ಕಾಂಟ್ರವರ್ಸಿ ಬೇಡವೆಂದೋ ಒಗೆಯುವ ಬಗ್ಗೆ 'ಬಾ' ರವರೊಂದಿಗೆ ತಕರಾರಿನಿಂದಾಗಿಯೋ ಬರಿಮೈಗೂಡಿಸಿಕೊಂಡಿರಬೇಕು.

ಇತ್ತೀಚೆಗೆ ನಮ್ಮ ವ್ಯೋಮಯಾತ್ರಿಗಳು ಅವರ ವಿಶೇಷ ನೌಕೆಯಲ್ಲಿ ದಿನಗಳೆಯುವುದನ್ನು



ಜಗತ್ತು ಕಾತರದಿಂದ ಗಮನಿಸುತ್ತಿರುವಾಗ ನಮ್ಮ ಹೋಟೆಲ್ ಹಯವದನಾಚಾರಿಗೆ ಒಂದೇ ಚಿಂತೆ: ಅವರು ಬನಿಯನ್ ಹೇಗೆ ಒಗೆದುಕೊಳ್ಳುತ್ತಾರೆ ಎಂದು. ಅವನ ಬಾಯಿಗೆ ಆಗ ಅವನದೇ ಹಳೇ ಬನಿಯನ್ ತುರುಕುವಷ್ಟು ಸಿಟ್ಟು ಬಂತು ನನಗೆ. ತನ್ನ ಬನಿಯನ್ನಿನಲ್ಲಿ ಸಂಚಯವಾಗುವ ಕೊಳೆ ಕಾಣಬಾರದೆಂದು ಅದನ್ನು ಅರಿಶಿನದ ನೀರಲ್ಲಿ ಅದ್ದುತ್ತಾನೆ, ಆಚಾರಿ! ಅವನ ದೋಸೆಯೂ ಅಷ್ಟೆ, ಬನಿಯನ್ ಸಹ ಅಷ್ಟೆ; ವಿಷಯಕ್ಕಿಂತ ತೂತೇ ಜಾಸ್ತಿ.

ಅಯ್ಯಯ್ಯೋ ನಾನು ಯಾಕೆ ಹೀಗೆ ಕಾಲಹರಣ ಮಾಡುತ್ತಿದ್ದೇನೆ! ನಿನ್ನೆ ಮಾತ್ರ ಧರಿಸಿದ ಬನಿಯನ್ನನ್ನು ನನಗೆ ಈಗಲೇ ಒಗೆಯಲಿಕ್ಕಿದೆ. ಒಗೆಯುವ ಮೊದಲು ಏನು ನಾನು ಅದರಲ್ಲಿ ಕುರ್ಚಿ ಮೇಜುಗಳ ಧೂಳು ಝಾಡಿಸಲಿಕ್ಕಿದೆಯೆ? ಇಲ್ಲಪ್ಪ—ಇಲ್ಲವೇ ಇಲ್ಲ. (ಶಿವ ದೇವಸ್ಥಾನಕ್ಕೆ ಪೂಜೆಗೆ ತಡವಾಗಿ ಧಾವಿಸುವ ಅರ್ಚಕನ ಧಾಟಿಯಲ್ಲಿ ನಿರ್ಗಮನ.) ✲

# ಸೇತುವೆ ಮುರಿದು ಬಿದ್ದಾಗ

ರೇಣುಕ

೧೯೬೫ ರಲ್ಲಿ ಭಾರತ ಮತ್ತು ಪಾಕಿಸ್ತಾನಗಳ ನಡುವೆ ನಡೆದ ಸಮರದಲ್ಲಿ ಮದ್ರಾಸ್ ರೆಜಿಮೆಂಟಿನ ದಕ್ಷಿಣ ಭಾರತೀಯ ಸೈನಿಕರು ಧೈರ್ಯದಿಂದ ಹೋರಾಡಿದರು. ಅನೇಕ ಸೈನಿಕರು ರಣರಂಗದಲ್ಲಿ ಪ್ರಾಣಾರ್ಪಣೆ ಮಾಡಿದರು. ರಣದಲ್ಲಿ ತಾವು ತೋರಿದ ಅಸಮಾನವಾದ ಶೌರ್ಯ ಸಾಹಸಗಳಿಗಾಗಿ ಅನೇಕರು ಅತ್ಯುನ್ನತ ಪ್ರಶಸ್ತಿಗಳನ್ನು ಪಡೆದರು. ಕಾಶ್ಮೀರದಲ್ಲೊಂದೆಡೆ ನಡೆದ ಸೈನಿಕ ಕಾರ್ಯಾಚರಣೆಯಲ್ಲಿ ನಾಲ್ಕನೇ ಮದ್ರಾಸ್ ಬೆಟಾಲಿಯನ್ ಭಾಗವಹಿಸಿತ್ತು. ಈ ಸೈನಿಕ ಕಾರ್ಯಾಚರಣೆಯಲ್ಲಿ ಬೆಟಾಲಿಯನ್ನಿನ ಸುಬೇದಾರ ಮಾಧವನ್ ಅಸೀಮ ಶೌರ್ಯದಿಂದ ಶತ್ರುಗಳೊಂದಿಗೆ ಹೋರಾಡಿ ರಣದಲ್ಲಿ ಮಡಿದು ಹುತಾತ್ಮರಾದರು. ಭಾರತ ಸರಕಾರ ಶ್ರೀ ಮಾಧವನ್ ರವರಿಗೆ ಮರಣಾನಂತರ 'ವೀರಚಕ್ರ'ವನ್ನಿತ್ತು ಗೌರವಿಸಿತು.

ಈ ಸೈನಿಕ ಕಾರ್ಯಾಚರಣೆಯಲ್ಲಿ ಮಾಧವನ್‌ರವರೊಂದಿಗೆ ಭಾಗವಹಿಸಿದ್ದ ಹವಲ್ದಾರ್ ಮುತ್ತಯ್ಯನವರ ಬಾಯಿಂದಲೇ ಈ ವೀರ ಗಾಥೆಯನ್ನು ಕೇಳೋಣ.

ಆಗಸ್ಟ್ ೧೯೬೫ರ ಮೊದಲ ವಾರದಲ್ಲಿ ಝಾನ್ಸಿಯ ಬಳಿಯ ಬಬಿನಾದಲ್ಲಿ ಬೀಡು ಬಿಟ್ಟಿದ್ದ ನಮ್ಮ ನಾಲ್ಕನೇ ಮದ್ರಾಸ್ ಬಟಾಲಿಯನ್ನು ತುರ್ತಾಗಿ ಕಾಶ್ಮೀರಕ್ಕೆ ರವಾನಿಸಲಾಯಿತು. ಪಾಕಿಸ್ತಾನಿಗಳ ಅನಿರೀಕ್ಷಿತ ದಾಳಿಯಿಂದ ಕಾಶ್ಮೀರದ ಜನತೆಯಲ್ಲಿ ಹಾಹಾಕಾರ ಎದ್ದಿತ್ತು. ದೇವಾಲಯಗಳ ಮತ್ತು ಮಸೀದಿಗಳ ಮೇಲೆ ಪಾಕಿಸ್ತಾನಿ ವಿಮಾನಗಳು ಬಾಂಬಿನ ಸುರಿಮಳೆಯನ್ನು ಸುರಿಸಿ ಹಾಳುಗೆಡವಿ ಎಲ್ಲೆಲ್ಲಿಯೂ ಭಯೋತ್ಪಾದನೆಯನ್ನುಂಟು ಮಾಡಿದ್ದರು. ಗಡಿ ಪ್ರದೇಶಗಳಲ್ಲಿನ ಕಾಶ್ಮೀರಿಗಳು ಪ್ರಾಣಭಯದಿಂದ ಜಮ್ಮು ನಗರದೆಡೆಗೆ ನಾಲ್ಕೂ ಕಡೆಗಳಿಂದ ಧಾವಿಸುತ್ತಿದ್ದರು. ಹೀಗೆ ಮನೆ ಮಠಗಳನ್ನು ತೊರೆದು ಬಂದ ನಿರಾಶ್ರಿತರು ತವಿ ನದಿಯ ದಂಡೆಯ ಮೇಲೆ ನೆಲೆಸುತ್ತಿದ್ದರು. ಬಗಲಲ್ಲಿ ಎಳೆಯ ಮಕ್ಕಳನ್ನಿರಿಸಿಕೊಂಡು, ತಲೆಯ ಮೇಲೆ ಸಾಮಾನಿನ

ಹೊರೆಯನ್ನು ಹೊತ್ತು, ಇದ್ದ ನೆಲೆಯನ್ನು ತೊರೆದು ಕಾಣದ ನೆಲೆಯತ್ತ ಸಾಗುತ್ತಿದ್ದ ಮಾತೆಯರನ್ನು ಕಂಡು ನಮ್ಮ ಸೈನಿಕರ ರಕ್ತ ಕುದಿಯುತ್ತಿತ್ತು. ಕಾಶ್ಮೀರಿಗಳ ದನಕರುಗಳನ್ನು ಹಿಡಿದೊಯ್ದು ಅವರ ಹೊಲಮನೆಗಳನ್ನು ಸಮರಾಂಗಣವನ್ನಾಗಿ ಮಾರ್ಪಡಿಸಿದ್ದರು ಪಾಕಿಸ್ತಾನಿಗಳು.

ನಮ್ಮ ಬಟಾಲಿಯನ್ ಬಾರಾಮುಲ್ಲಾದಿಂದ ಹತ್ತು ಮೈಲು ದೂರದಲ್ಲಿದ್ದ ಬಲ್ಲಾ ಎಂಬ ಹಳ್ಳಿಯ ಬಳಿ ಬೀಡು ಬಿಟ್ಟಿದ್ದಿತು. ಶ್ರೀನಗರದಲ್ಲಿದ್ದ ಹತ್ತೊಂಬತ್ತನೇ ಬ್ರಿಗೇಡಿನ ಆದೇಶದಂತೆ ನಾವು ನಮ್ಮ ಕಾರ್ಯಾಚರಣೆಯನ್ನು ನಡೆಸಬೇಕಾಗಿತ್ತು. ಬಲ್ಲಾ ಹಳ್ಳಿಯಿಂದ ನಾಲ್ಕು ಮೈಲು ದೂರದಲ್ಲಿ ಜೀಲಂ ನದಿಯ ಉಪನದಿಯೊಂದು ಗುಡ್ಡಗಳ ನಡುವೆ ರಭಸದಿಂದ ಹರಿಯುತ್ತಿತ್ತು. ಆ ನದಿಯ ಆಚಿನ ಪ್ರದೇಶವೇ ೧೯೪೮ರಲ್ಲಿ ಪಾಕಿಸ್ತಾನ ಆಕ್ರಮಿಸಿಕೊಂಡಿದ್ದ ಕಾಶ್ಮೀರದ ಒಂದು ಭಾಗವಾದ ಆಜಾದ್ ಕಾಶ್ಮೀರ್. ಕಾಶ್ಮೀರದಲ್ಲಿ ಭಯೋತ್ಪಾದಕ ಚಟುವಟಿಕೆಗಳನ್ನು ನಡೆಸುತ್ತಿದ್ದ ಮುಜಾಹಿದರ ಭಾರಿ ನೆಲೆ ಅಲ್ಲಿದ್ದಿತು.

ನಾವು ಬಲ್ಲಾ ಗ್ರಾಮದ ಬಳಿ ಬೀಡು ಬಿಟ್ಟಾಗ ಜನರೆಲ್ಲರೂ ಹಳ್ಳಿಯನ್ನು ತೊರೆದು ರಕ್ಷಣೆಗಾಗಿ ಶ್ರೀನಗರ ಮತ್ತು ಜಮ್ಮು ನಗರಗಳೆಡೆಗೆ ಸಾಗಿ ಹೋಗಿದ್ದರು. ರಾಂಪುರ ಮತ್ತು ದಿನಾಜಪುರದಲ್ಲಿನ ಗ್ರಾಮವಾಸಿಗಳು ಸ್ವಯಂ ರಕ್ಷಕ ದಳಗಳನ್ನು ರಚಿಸಿ ಮುಜಾಹಿದರ ದಾಳಿಯನ್ನು ಎದುರಿಸುತ್ತಿದ್ದರು. ಪಾಕಿಸ್ತಾನಿಗಳು ಗೋದಿ ಹೊಲಗಳಿಗೆ ಬೆಂಕಿ ಇಟ್ಟು ಸುಟ್ಟು ಹಾಕಿದ್ದರು. ಊರ ನಡುವಿನಲ್ಲಿದ್ದ ಮಸೀದಿಯೊಂದು ಪಾಕಿಸ್ತಾನಿಗಳ ವಿಮಾನ ದಾಳಿಯಿಂದ ಕುಸಿದು ಬಿದ್ದಿತ್ತು. ಶಂಸುದ್ದೀನ್ ಬಕ್ಷಿ ಎಂಬ ಫಕೀರರೊಬ್ಬರು ಮಾತ್ರ ಹಾಳು ಬಿದ್ದ ಮಸೀದಿಯಲ್ಲಿಯೇ ವಾಸಿಸುತ್ತಿದ್ದರು. ಸುಮಾರು ಮೂವತ್ತು ವರ್ಷಗಳ ಹಿಂದೆ ಅವರೇ ಆ ಮಸೀದಿಯನ್ನು ಕಟ್ಟಿಸಿದ್ದರು. ಅವರಿಗೆ ಸುಮಾರು ಎಪ್ಪತ್ತೈದು ವರ್ಷ ವಯಸ್ಸಾಗಿರಬಹುದು. ಆದರೆ ವೃದ್ಧಾಪ್ಯ ಅವರ ದೃಢಕಾಯದ ಮೇಲೆ ದಾಳಿ ಮಾಡಿದಂತೆ ಕಾಣುತ್ತಿರಲಿಲ್ಲ. ಆರಡಿಗೂ ಮೀರಿದ ಆಜಾನುಬಾಹು. ನೀಳವಾದ ಬಿಳಿಯ ಗಡ್ಡ ಎದೆಯನ್ನು ಸೋಂಕುತ್ತಿತ್ತು. ಕಳೆದ ಶತಮಾನದ ಅಂತ್ಯದಲ್ಲಿ ಅವರ ಪೂರ್ವಜರು ಬಲೂಚಿಸ್ಥಾನದಿಂದ ಬಂದು ಕಾಶ್ಮೀರದಲ್ಲಿ ನೆಲೆಸಿದ್ದರಂತೆ. ಅವರ ಹೆಂಡತಿ ಮತ್ತು ಒಬ್ಬನೇ ಮಗ ನಲವತ್ತೆಂಟರಲ್ಲಿ ನಡೆದ ಪಾಕಿಸ್ತಾನಿಗಳ ದಾಳಿಗೆ ಆಹುತಿಯಾಗಿದ್ದರಂತೆ. ಲೂಟಿಕೋರರಾದ ಪಾಕಿಸ್ತಾನಿ ದಾಳಿಕಾರರಿಗೆ ಹಿಂದೂ ಮುಸ್ಲಿಮರೆಂಬ ಭೇದವಿರಲಿಲ್ಲ.

ಆ ಪ್ರದೇಶಕ್ಕೆ ಹೊಸಬರಾದ ನಮಗೆ ಅವರು ಪಾಕಿಸ್ತಾನಿಗಳು ಗಡಿಯಿಂದ ನುಸುಳಿ ಬರುತ್ತಿದ್ದ ಕಣಿವೆಯ ದಾರಿಗಳನ್ನು ಪರಿಚಯಿಸಿದರು. ಅವರು ಕೊಟ್ಟ ಸುಳುಹುಗಳಿಂದ ಮುಂದೆ ನಮಗೆ ಪ್ರಯೋಜನವಾಯಿತು. ನಮ್ಮ ಪಡೆ ಆ ಹಳ್ಳಿಯ ಬಳಿ ಬೀಡು ಬಿಟ್ಟು ಒಂದು ವಾರವಾಗಿತ್ತು. ಒಂದು ದಿನ ನಮಗೆ ತಲುಪಿದ ವರದಿಯ ಪ್ರಕಾರ ಬಲ್ಲಾ ಹಳ್ಳಿಯಿಂದ ಆರು ಮೈಲು ದೂರದಲ್ಲಿನ ರಾಂಪುರ ಗ್ರಾಮ ಪಾಕಿಸ್ತಾನಿ ದಾಳಿಕಾರರ ದೌರ್ಜನ್ಯಕ್ಕೆ ಹಿಂದಿನ ರಾತ್ರಿ ತುತ್ತಾಗಿತ್ತು. ಅಲ್ಲಿಂದ ನಾಲ್ಕು ಮೈಲು ದೂರದಲ್ಲಿನ ದಿನಾಜಪುರದ ಮೇಲೆ ದಾಳಿಕಾರರು ಆ ರಾತ್ರಿ ದಾಳಿ ಮಾಡುವ ಸಂಭವವಿತ್ತು. ಮೇಜರ್ ಕರ್ತಾರ್‌ಸಿಂಗ್ ಪಂಜಾಬಿಯವರ ಕೈಕೆಳಗೆ ಒಂದು ಕಂಪನಿ ತ್ವರಿತವಾಗಿ ದಿನಾಜಪುರದೆಡೆಗೆ ಸಾಗಿತು.

ಆ ದಿನ ರಾತ್ರಿ ಹತ್ತೊಂಬತ್ತನೇ ಬ್ರಿಗೇಡಿನಿಂದ ನಮ್ಮ ಬಟಾಲಿಯನ್ ಕಮಾಂಡರಿಗೆ ಒಂದು ಆದೇಶ ಬಂದಿತು. ಆ ಆದೇಶದ ಪ್ರಕಾರ ನಮ್ಮ ಬಟಾಲಿಯನ್ನಿನಿಂದ ಒಂದು ಚಿಕ್ಕ ಪೆಟ್ರೋಲಿಂಗ್ ತುಕಡಿಯನ್ನು ನದಿಯ ಆಚೆಗಿದ್ದ ಪಾಕಿಸ್ತಾನಿ ಆಕ್ರಮಿತ ಪ್ರದೇಶಕ್ಕೆ ರಹಸ್ಯ

ವಾಗಿ ಕಳುಹಿಸಿ, ಅಲ್ಲಿನ ಮುಜಾಹಿದರ ನೆಲೆಯ ಬಗ್ಗೆ ಹೆಚ್ಚು ಮಾಹಿತಿಯನ್ನು ಸಂಗ್ರಹಿಸಿ ಕಳುಹಿಸಬೇಕಿತ್ತು.

ಈ ಕಾರ್ಯವನ್ನು ಸಬೇದಾರ್ ಮಾಧವನ್ ರಿಗೆ ವಹಿಸಲಾಯಿತು. ನದಿಯನ್ನು ದಾಟಿ ಪಾಕಿಸ್ತಾನಿ ಗಡಿ ಕಾವಲು ಪಡೆಯುವರ ಕಣ್ಣು ತಪ್ಪಿಸಿ ಶತ್ರು ಪ್ರದೇಶಕ್ಕೆ ನುಸುಳಿ ಹೋಗುವುದು ಸುಲಭ ಸಾಧ್ಯವಿರಲಿಲ್ಲ. ಅದೂ ಅಲ್ಲದೇ ನದಿಯ ಪಾತ್ರ ವಿಶಾಲವಾಗಿತ್ತು. ನದಿಯಾಚೆ ಯಿದ್ದ ಪಾಕಿಸ್ತಾನಿ ಸತ್ಲಜ್ ರೇಂಜರುಗಳ ಠಾಣೆ ಗಳ ದೃಷ್ಟಿ ತಪ್ಪಿಸಿ ನದಿಯನ್ನು ದಾಟುವುದು ಸಾಧ್ಯವಿರಲಿಲ್ಲ. ಆ ಸಮಯದಲ್ಲಿ ಶಂಸುದ್ದೀನ್ ಬಕ್ಷಿಯವರು ನಾಲ್ಕು ಮೈಲು ದೂರದಲ್ಲಿ ಗುಡ್ಡ ಗಳ ಸಾಲಿನ ಬಳಿ ಅದೇ ನದಿ ಕೊಳ್ಳವೊಂದರಲ್ಲಿ ಕಿರಿದಾದ ಪಾತ್ರದಲ್ಲಿ ಹರಿಯುತ್ತಿದ್ದ ಸ್ಥಳವನ್ನು ತೋರಿಸಿದರು.

ಪಾಕಿಸ್ತಾನಿ ಗಡಿ ಕಾವಲು ಪಡೆಯ ಠಾಣೆ ಆ ಸ್ಥಳದಿಂದ ಸುಮಾರು ನಾಲ್ಕು ಫರ್ಲಾಂಗ್ ದೂರದಲ್ಲಿನ ಚಿಕ್ಕ ಗುಡ್ಡವೊಂದರ ಮೇಲಿತ್ತು. ದಟ್ಟ ಕಾಡಿನಿಂದ ನಿಬಿಡವಾದ ಆ ಪ್ರದೇಶದ ಮೇಲೆ ಕಾವಲು ಪಡೆಯುವರು ತಮ್ಮ ಗಮನ ವನ್ನು ಹೆಚ್ಚಾಗಿ ಕೇಂದ್ರೀಕರಿಸಿರಲಿಲ್ಲ. ಸುಮಾರು ಅರವತ್ತು ಅಡಿಗಳಷ್ಟು ಆಳದ ಪ್ರಪಾತದಲ್ಲಿ ರಭಸದಿಂದ ಹರಿಯುತ್ತಿದ್ದ ನದಿಯ ತಾಣವನ್ನು ಬಗ್ಗಿ ನೋಡಿದರೆ ತಲೆ ತಿರುಗಿ ಬೀಳುವಂತಾಗುತ್ತಿತ್ತು.

ಆ ದಿನ ರಾತ್ರಿ ನಮ್ಮ ಪಯನೀರ್ ಪ್ಲಾಟೂನಿ ನವರು ನದಿಯನ್ನು ದಾಟಲು ಹಗ್ಗದ ಸೇತುವೆ ಯನ್ನು ನಿರ್ಮಿಸಿದರು. ಸೇತುವೆಯನ್ನು ಮರದ ಕೊಂಬೆ ಎಲೆಗಳಿಂದ ಶತ್ರುಗಳ ಕಣ್ಣಿಗೆ ಕಾಣದಂತೆ ಮರೆ ಮಾಡಲಾಯಿತು. ರಾತ್ರಿ ಹತ್ತು ಗಂಟೆಯ ಸುಮಾರಿಗೆ ಸುಬೇದಾರ್ ಮಾಧವನ್‌ರ ಕೈ ಕೆಳಗೆ ಹೊರಡಲು ಬೇದಿ-ರಿಸಿನ ಹನ್ನೆರಡು ಮಂದಿಯ ತುಕಡಿಯೊಂದು ಸಿದ್ಧವಾಯಿತು. ಈ ತುಕಡಿ ತಮಗೆ ವಹಿಸಿದ್ದ ಗುರುತರವಾದ ಹೊಣೆಯನ್ನು ಚಾಕಚಕ್ಯ ದಿಂದಲೂ ಪ್ರಾಣದ ಮೇಲಿನ ಆಸೆಯನ್ನು ಬಿಟ್ಟೂ ನಿರ್ವಹಿಸಬೇಕಾಗಿದ್ದಿತು.

ಅಷ್ಟರಲ್ಲಿ ದಿನಾಜಪುರದೆಡೆಗೆ ಹೋಗಿದ್ದ ಮೇಜರ್ ಕರ್ತಾರ್‌ಸಿಂಗ್ ಪಂಜಾಬಿಯವರು ಹತ್ತು ಮಂದಿ ಮುಜಾಹಿದ ದಾಳಿಕಾರರನ್ನು ಸೆರೆ ಹಿಡಿದುಕೊಂಡು ಬಂದಿದ್ದರು. ಅವರು ಬೇದಿರಿಸಿನಲ್ಲಿದ್ದ ಪಾಕಿಸ್ತಾನಿ ಕಾಲಾಳು ಪಡೆಯ ಸೈನಿಕರೆಂದು ವಿಚಾರಣೆಯ ನಂತರ ತಿಳಿದು ಬಂತು. ಪಾಕಿಸ್ತಾನಿ ಸೇನೆ ಕಾಶ್ಮೀರದಲ್ಲಿ ಭಯೋತ್ಪಾದನೆಯನ್ನುಂಟು ಮಾಡಲು ತನ್ನ ಸೈನಿಕರನ್ನು ಮುಜಾಹಿದರ ರೂಪದಲ್ಲಿ ಕಳುಹಿಸುತ್ತಿದೆಯೆಂದೂ ಅಂತಹ ಐದು ಸಾವಿರ ಸೈನಿಕರ ಪಡೆಯೊಂದು ಜೀಲಂ ನದಿಯಾಚೆ ಏಳು ಮೈಲು ದೂರದಲ್ಲಿ ಗುಡ್ಡಗಾಡಿನ ಸೆರಗಿನಲ್ಲಿ ಬೀಡು ಬಿಟ್ಟಿದೆಯೆಂದೂ ಸೆರೆ ಸಿಕ್ಕಿದ ಪಾಕಿಸ್ತಾನಿ ಸೈನಿಕರಿಂದ ತಿಳಿದುಬಂದಿತು.

ಕೆಲವಾರು ದಿನಗಳಲ್ಲಿ ಪಾಕಿಸ್ತಾನಿಗಳು ಹೆಚ್ಚು ಸಂಖ್ಯೆಯಲ್ಲಿ ಕಾಶ್ಮೀರಕ್ಕೆ ನುಗ್ಗಿ ಬರಬಹುದೆಂದು ಊಹಿಸಲಾಯಿತು. ಅವರು ನಮ್ಮ ಪ್ರದೇಶಕ್ಕೆ ನುಗ್ಗಿ ಬರುವುದಕ್ಕೆ ಮುಂಚಿತವಾಗಿ ಅವರು ಬೀಡು ಬಿಟ್ಟಿದ್ದ ಮೂಲ ನೆಲೆಯನ್ನು ಪತ್ತೆ ಮಾಡಿ ಇದ್ದಲ್ಲಿಯೇ ಅವರನ್ನು ನಾಶಪಡಿಸ ಬೇಕಾಗಿದ್ದಿತು. ಆ ದಿನ ರಾತ್ರಿ ನಮ್ಮ ತುಕಡಿ ಶತ್ರುಗಳ ನೆಲೆಯ ಮತ್ತು ಅವರ ಚಟುವಟಿಕೆಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿಕೊಂಡು ಬರಲು ನದಿಯನ್ನು ದಾಟಿ ಅಜಾದ್ ಕಾಶ್ಮೀರ ದೊಳಗೆ ಹೋಗುವ ಸಮಾಚಾರವನ್ನು ಮುಂದಾಗಿ ಬ್ರಿಗೇಡಿಗೆ ತಿಳಿಸಲಾಯಿತು.

ಆ ರಾತ್ರಿ ಹತ್ತು ಗಂಟೆಗೆ ಮೇಜರ್ ಪಂಜಾಬಿ ಮತ್ತು ಲೆ. ಕರ್ನಲ್ ಹರ್‌ಬನ್ಸ್‌ಲಾಲ್ ಮೆಹತಾರವರು ಮಾಧವನ್‌ರವರ ಹನ್ನೆರಡು ಜನರ ತುಕಡಿ ನದಿಯ ಮೇಲಿನ ಹಗ್ಗದ ಸೇತುವೆ ಯನ್ನು ದಾಟಿ ಕಾಡಿನಲ್ಲಿ ಕೊನೆಯ ಸೈನಿಕನು ಕಣ್ಮರೆಯಾಗುವ ವರೆಗೂ ನೋಡುತ್ತಾ ನಿಂತಿದ್ದು

ಕೊನೆಗೆ ಶಿಬಿರಕ್ಕೆ ಹಿಂದಿರುಗಿತು.

ಎರಡು ದಿನಗಳ ನಂತರ ಶತ್ರುಗಳ ಮೂಲ ನೆಲೆಯ ಬಗ್ಗೆ ಬಹು ಮುಖ್ಯವಾದ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ಶಿಬಿರಕ್ಕೆ ಮರಳಿತು ನಮ್ಮ ತುಕಡಿ. ಆ ಮಾಹಿತಿಗಳ ಆಧಾರದ ಮೇಲೆ ನಮ್ಮ ವಿಮಾನ ಪಡೆಯ ವಿಮಾನಗಳು ಯಶಸ್ವಿಯಾಗಿ ಶತ್ರುಗಳ ನೆಲೆಯನ್ನು ಧ್ವಂಸ ಮಾಡಿದವು ಕಾಶ್ಮೀರಕ್ಕೆ ನುಗ್ಗಿ ಬರುವ ಅವರ ಹಂಚಿಕೆಯನ್ನು ತಾತ್ಕಾಲಿಕವಾಗಿ ವಿಫಲಗೊಳಿಸಿದುವು ಆದರೆ ಶತ್ರು ನೆಲೆಯ ಅಮೂಲ್ಯ ಮಾಹಿತಿಯನ್ನು ಸಂಗ್ರಹಿಸಲು ಕಾರಣಕರ್ತರಾದ ಸುಬೇದಾರ್ ಮಾಧವನ್ ಮಾತ್ರ ಹಿಂದಿರುಗಿ ಬರಲಿಲ್ಲ.

ಆ ದಿನ ರಾತ್ರಿ ಶಿಬರದಿಂದ ಹೊರಬಿದ್ದ ನಮ್ಮ ತುಕಡಿ ಸುಬೇದಾರ್ ಮಾಧವನ್‌ರವರು ನಕ್ಷೆಯಲ್ಲಿನ ರಸ್ತೆಯನ್ನು ಗುರುತಿಸಿ ಮುಂದು-ವರೆಯುತ್ತಿದ್ದಂತೆ ಅವರ ಹಿಂದೆ ಹಿಂದೆ ಹೋಗುತ್ತಿತ್ತು. ರಾತ್ರಿಯ ಸಮಯದಲ್ಲಿ ನಕ್ಷೆಯಲ್ಲಿನ ಮುಖ್ಯವಾದ ಗುರುತುಗಳನ್ನು ಭೂಮಿಯ ಮೇಲೆ ಗುರುತಿಸಿಕೊಂಡು ಸಾಗುವುದು ದುಸ್ತರವಾದ ಕಾರ್ಯವಾಗಿತ್ತು. ಇದಕ್ಕೆ ಮೊದಲು ಸೆರೆ ಸಿಕ್ಕಿದ ಮುಜಾಹಿದರ ವೇಷದಲ್ಲಿದ್ದ ಪಾಕಿಸ್ತಾನಿ ಸೈನಿಕರಿಂದ ಸಂಗ್ರಹಿಸಿದ್ದ ಮಾಹಿತಿಯ ಪ್ರಕಾರ ನದಿಯಿಂದ ಏಳು ಮೈಲುಗಳ ದೂರದಲ್ಲಿ ಮುಜಾಹಿದರ ನೆಲೆ ನಮಗೆ ಸಿಗಲೇ ಇಲ್ಲ.

ಪಾಕಿಸ್ತಾನಿಗಳ ಕಣ್ಣಿಗೆ ಬೀಳದಂತೆ ರಾತ್ರಿಯೆಲ್ಲಾ ನಡೆದು ಬೆಳಗಾದಾಗ ಗುಡ್ಡದ ಕಿಬ್ಬಿಯ ಅಡವಿಯಲ್ಲೊಂದೆಡೆ ಆಶ್ರಯ ಪಡೆದೆವು. ನಮ್ಮ ಹಾದಿಯಲ್ಲಿ ಹಲವಾರು ಗ್ರಾಮಗಳು ಸಿಕ್ಕಿದುವು. ಸಾಧ್ಯವಾದಷ್ಟೂ ನಾವು ಗ್ರಾಮಗಳನ್ನು ಪ್ರವೇಶಿಸದೆ ಅಡವಿ ,ಗುಡ್ಡಗಳ ಸೆರಗಿನಲ್ಲಿಯೇ ಮುಂದುವರಿಯುತ್ತಿದ್ದೆವು. ನಾವು ಬೇದಿರಿಸಿ-ನಲ್ಲಿದ್ದುದರಿಂದ ರಾತ್ರಿಯಲ್ಲಿ ನಮ್ಮನ್ನು ಕಂಡವರಿಗೆ ಸಂಶಯ ಹುಟ್ಟುತ್ತಿರಲಿಲ್ಲ. ನಮ್ಮ ಬಳಿ ಒಂದು ಲೈಟ್‌ಮೆಷಿನ್‌ಗನ್ ಮತ್ತು ಸಣ್ಣ ವೈರ್‌ಲೆಸ್ ಸೆಟ್ಟೊಂದಿತ್ತು. ನಾವು ತಂದಿದ್ದ ಒಣ ಆಹಾರ ಸಾಮಗ್ರಿಗಳು ಒಂದೆರಡು ದಿನಗಳಿಗಾಗುವಷ್ಟಿತ್ತು. ಇಷ್ಟು ದೂರ ನಡೆದರೂ ಶತ್ರುಗಳ ನೆಲೆಯ ಬಗ್ಗೆಯಾಗಲೀ ಅವರ ಚಟುವಟಿಕೆಗಳಬಗೆಗಾಗಲಿ ಯಾವ ಸಮಾಚಾರವೂ ತಿಳಿದು ಬರಲಿಲ್ಲ.

ಆ ದಿನ ಬೆಳಿಗ್ಗೆ ಕಾಶ್ಮೀರಿ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದ ನಮ್ಮಿಬ್ಬರು ಸಿಪಾಯಿಗಳನ್ನು ಶತ್ರುಗಳ ನೆಲೆಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ತರಲು ಹತ್ತಿರದ ಗ್ರಾಮಗಳಿಗೆ ಕಳುಹಿಸಿಕೊಟ್ಟೆವು. ಸಂಜೆಗೆ ನಮ್ಮನ್ನು ಅಡವಿಯಲ್ಲಿ ಕೂಡಿಕೊಂಡು ಸಿಪಾಯಿಗಳು ಕೆಲವು ಉಪಯುಕ್ತ ಮಾಹಿತಿಗಳನ್ನು ನೀಡಿದರು. ಸಶಸ್ತ್ರ ಸೈನಿಕರ ಬೆಂಗಾವಲಿನೊಂದಿಗೆ ಗುಡ್ಡದ ಹಾದಿಯಲ್ಲಿ ಸಾಗುತ್ತಿದ್ದ ಹೇರನ್ನು ಹೊತ್ತ ಹೇಸರುಗತ್ತೆಗಳ ಕಾರವಾನೊಂದನ್ನು ನಮ್ಮ ಸಿಪಾಯಿಗಳಿಬ್ಬರು ಸ್ವಲ್ಪ ದೂರ ಹಿಂಬಾಲಿಸಿ ಹೋಗಿದ್ದರು. ಶತ್ರುಗಳ ನೆಲೆಯ ಬಗ್ಗೆ ಸ್ಥೂಲವಾಗಿ ಕೆಲವು ವಿವರಗಳನ್ನು ಕೊಟ್ಟರು.

ಹೊತ್ತು ಮುಳುಗಿದ ನಂತರ ಮತ್ತೆ ನಮ್ಮ ಪಯಣವನ್ನು ಮುಂದುವರಿಸಿದೆವು. ಬೆಟ್ಟಗುಡ್ಡಗಳನ್ನು ಹತ್ತಿಳಿದು ಎಲ್ಲರೂ ದಣಿದಿದ್ದೆವು. ಸಿಪಾಯಿ ಟೀಕಾರಾಮನ ಕಾಲು ಬಾತುಕೊಂಡಿತ್ತು. ಅವನು ಮುಂದೆ ಒಂದು ಹೆಜ್ಜೆಯನ್ನೂ ಇಡಲಾರೆನೆಂದು ಅಲ್ಲಿಯೇ ಕುಸಿದು ಕುಳಿತ. ಆ ರಾತ್ರಿ ಗುಡ್ಡದ ಮೇಲಿನ ಚಾಚು ಬಂಡೆಯೊಂದರ ಕೆಳಗಿದ್ದ ಗುಹೆಯೊಂದರಲ್ಲಿ ವಿಶ್ರಮಿಸಿಕೊಳ್ಳೋಣವೆಂದು ನಿರ್ಧರಿಸಿದೆವು. ನಮ್ಮ ಅದೃಷ್ಟಕ್ಕೆ ಕಾಡುಸೇಬಿನ ಗಿಡಗಳು ಆ ಗುಡ್ಡದಲ್ಲಿ ಯಥೇಚ್ಛವಾಗಿದ್ದುವು. ಹಸಿದಿದ್ದ ನಾವೆಲ್ಲರೂ ಹುಳಿ ಮತ್ತು ಒಗರಿನಿಂದ ಕೂಡಿದ ಸೇಬಿನ ದೋರೆಗಾಯಿಗಳನ್ನು ಕಿತ್ತು ತಿಂದು ಹಸಿವನ್ನು ನಿವಾರಿಸಿಕೊಂಡೆವು.

ಆಗಿನ್ನೂ ಬೆಳಗಿನ ಕಾವಳ ಹರಿದಿರಲಿಲ್ಲ. ರಾತ್ರಿಯೆಲ್ಲಾ ನಡೆದು ದಣಿದಿದ್ದುದರಿಂದ

ಎಲ್ಲರೂ ಮೈಮರೆತು ನಿದ್ರಿಸುತ್ತಿದ್ದರು. ಸರದಿಯ ಪ್ರಕಾರ ಸಿಪಾಯಿ ಸೂರ್ಯರಾವು ಮತ್ತು ನಾನು ಗುಹೆಯಲ್ಲಿ ಮಲಗಿದ್ದ ಸೈನಿಕರ ರಕ್ಷಣೆಗಾಗಿ ಕಾವಲು ಕಾಯುತ್ತಿದ್ದೆವು. ಅಷ್ಟರಲ್ಲಿ ಒಂದು ಸಂಗತಿ ನಡೆಯಿತು. ನಾವಿದ್ದ ತಾಣದಿಂದ ಅನತಿ ದೂರದಲ್ಲಿ ಬೆಟ್ಟದ ಕಿಬ್ಬಿಯಲ್ಲಿ ನೀರಿನ ಚಿಲುಮೆಯಿದ್ದಿತು. ದೊಗಳೆ ಪಾಯಿಜಾಮ ಮತ್ತು ಉದ್ದನೆಯ ನಿಲುವಂಗಿಧಾರಿಗಳಾದ ಪಠಾಣರಿಬ್ಬರು ಪೆಂಟಾಸುಗಳಲ್ಲಿ ಚಿಲುಮೆಯಿಂದ ನೀರನ್ನು ತುಂಬಿಕೊಂಡು, ಅವುಗಳನ್ನು ತಲೆಯ ಮೇಲೆ ಹೊತ್ತು ನಿಧಾನವಾಗಿ ನಮಗೆ-ದುರಿಗಿದ್ದ ಬೆಟ್ಟವನ್ನು ಹತ್ತುತ್ತಿದ್ದರು. ಅವರ ಬಗಲಲ್ಲಿ ಕೋವಿಗಳು ನೇತಾಡುತ್ತಿದ್ದುವು. ಸೊಂಟಕ್ಕೆ ತೋಟಾದ ನಡುಪಟ್ಟಿಯನ್ನು ಬಿಗಿದುಕೊಂಡಿದ್ದರು. ನಾನು ಕೂಡಲೇ ಮಲಗಿದ್ದ ಮಾಧವನ್‌ರವರನ್ನು ಎಚ್ಚರಗೊಳಿಸಿ ಸಂಗತಿಯನ್ನು ತಿಳಿಸಿದೆ. ಮಲಗಿದ್ದವರೆಲ್ಲರನ್ನೂ ಎಬ್ಬಿಸಲಾಯಿತು.

ನಾನು ಮತ್ತು ಸುಬೇದಾರ್ ಮಾಧವನ್‌ರವರು ಮಾತ್ರ ಆ ಪಠಾಣರಿಬ್ಬರನ್ನು ಹಿಂಬಾಲಿಸಲಾರಂಭಿಸಿದೆವು. ಆ ಕೋವಿಧಾರಿಗಳಾದ ಪಠಾಣರು ತಲೆಯ ಮೇಲೆ ನೀರಿನ ಪೆಂಟಾಸುಗಳನ್ನು ಹೊತ್ತು ಪ್ರಯಾಸದಿಂದ ಗುಡ್ಡವನ್ನು ಹತ್ತುತ್ತಿದ್ದರು. ಕೆಲವೇ ನಿಮಿಷಗಳಲ್ಲಿ ಅವರಿಬ್ಬರೂ ಬೆಟ್ಟದ ತುದಿಯನ್ನು ಮುಟ್ಟಿ ಕಣ್ಮರೆಯಾದರು. ನಾವಿಬ್ಬರೂ ಬಹು ಪ್ರಯಾಸದಿಂದ ಬೆಟ್ಟದ ತುದಿಯನ್ನು ಮುಟ್ಟಿದೆವು. ಅಲ್ಲಿಂದ ಕಂಡು ಬಂದ ದೃಶ್ಯ ನಮ್ಮನ್ನು ರೋಮಾಂಚನಗೊಳಿಸಿತು. ಅರಸುತ್ತಿದ್ದ ಬಳ್ಳಿ ಕಾಲಿಗೆ ತೊಡರಿಕೊಂಡಂತಾಯಿತು. ಗುಡ್ಡದ ಎದುರಿನ ಮೈದಾನ ಪ್ರದೇಶದಲ್ಲಿ ನೂರಾರು ಡೇರೆಗಳು ಕಂಡುಬಂದವು. ಸಮವಸ್ತ್ರಧಾರಿಗಳಾದ ಪಾಕಿಸ್ತಾನಿ ಸೈನಿಕರು ಮುಜಾಹಿದರಿಗೆ ಸನೀನಿನ ತರಬೇತಿಯನ್ನು ಕೊಡುತ್ತಿದ್ದರು. ಅಲ್ಲಿ ಸೈನಿಕ ಶಿಕ್ಷಣ ಪಡೆಯುತ್ತಿದ್ದ ಮುಜಾಹಿದರ ಸಂಖ್ಯೆ ಕೆಲವು ಸಾವಿರಗಳಿಗೆ ಕಡಿಮೆಯಿರಲಿಲ್ಲ. ದಿನಾಜಪುರದಲ್ಲಿ ಸೆರೆ ಸಿಕ್ಕಿದ ಕೈದಿಗಳು ತಿಳಿಸಿದ ವಿವರಗಳಿಂದ ಮುಜಾಹಿದರನ್ನು ತರಬೇತಿ ಮಾಡುವ ಕಾಯಂ ನೆಲೆ ಇದೇ ಎಂದು ಖಚಿತವಾದಂತಾಯಿತು.

ಮಾಧವನ್‌ರವರು ನಕ್ಷೆಯನ್ನು ಬಿಡಿಸಿ ಮುಂದೆ ಅಲ್ಲಿ ಕಾರ್ಯಾಚರಣೆಯನ್ನು ನಡೆಸುವವರ ಅನುಕೂಲಕ್ಕಾಗಿ ಸುತ್ತಲಿನ ಕೆಲವು ಗುಡ್ಡಗಳನ್ನು ಗುರುತಿಸಿಕೊಂಡರು. ಅನಂತರ ನಮ್ಮ ಸೈನಿಕರು ತಂಗಿದ್ದ ಗುಹೆಗೆ ಹಿಂದಿರುಗಿದೆವು. ಅದುವರೆಗೆ ಉಪಯೋಗಿಸದೇ ಇದ್ದ ವೈರ್‌ಲೆಸ್ ಸೆಟ್ಟನ್ನು ಹೊರತೆಗೆದು ಬಟಾಲಿಯನ್ನಿನೊಂದಿಗೆ ಸಂಪರ್ಕ ಬೆಳೆಸಿ, ಶತ್ರುಗಳ ನೆಲೆಯ ವಿವರಗಳನ್ನು ಕೂಲಂಕಷವಾಗಿ ಸಂಕೇತ ಭಾಷೆಯಲ್ಲಿ ತಿಳಿಸಿದೆವು. ನಮಗೆ ನಿರ್ವಹಿಸಿದ್ದ ಮುಖ್ಯವಾದ ಕಾರ್ಯವನ್ನು ಮುಗಿಸಿದಂತಾಯಿತು. ಇನ್ನು ಉಳಿದುದು ಶತ್ರುಗಳ ಕಣ್ಣಿಗೆ ಬೀಳದಂತೆ ನಮ್ಮ ಜೀವಗಳನ್ನು ಉಳಿಸಿಕೊಂಡು ಗಡಿಯನ್ನು ದಾಟಿ ನಮ್ಮ ಸ್ವಸ್ಥಾನವನ್ನು ಸೇರುವುದು. ನಾವಿದ್ದ ಗುಹೆ ಶತ್ರುಗಳ ನೆಲೆಗೆ ಅತಿ ಸಮೀಪದಲ್ಲಿದ್ದದುರಿಂದ ರಾತ್ರಿಯಾಗುವ ತನಕ ಅಲ್ಲಿಯೇ ಅಡಗಿರುವುದು ಕ್ಷೇಮಕರವಲ್ಲವೆಂದು ಮಾಧವನ್ ಅಲ್ಲಿಂದ ನಮ್ಮನ್ನು ತಕ್ಷಣ ಹೊರಡಿಸಿದರು. ಎರಡು ಮೂರು ಮೈಲುಗಳಷ್ಟು ದೂರ ನಡೆದು ಫಿರ್‌ಕಲೇವ್ ಎಂಬ ಗುಡ್ಡದಲ್ಲಿ ಅಡಗಿಕೊಂಡೆವು.

ಫಿರ್‌ಕಲೇವ್ ಗುಡ್ಡದಿಂದ ರಾತ್ರಿ ತಡವಾಗಿ ಹೊರಬಿದ್ದೆವು. ಬಂದ ದಾರಿಯಾದುದರಿಂದ ಹಿಂದಿರುಗಿ ಹೋಗುವಾಗ ದಾರಿಯನ್ನು ಹುಡುಕುವ ಕಷ್ಟವಿರಲಿಲ್ಲ. ಒಂದು ಗುಡ್ಡದ ಇಳಿಜಾರಿನಲ್ಲಿಳಿಯುವಾಗ ಕಣಿವೆಯ ಕೆಳಗಿನಿಂದ ಯಾರೋ ನಿಧಾನವಾಗಿ ಬೆಟ್ಟವನ್ನು ಹತ್ತಿ ಬರುತ್ತಿರುವ ಸದ್ದು ಕೇಳಿಸಿತು. ಒಡನೆ ನಾವೆಲ್ಲರೂ ಮರ ಗಿಡ ಪೊದೆಗಳ ಹಿಂದೆ ಅಡಗಿಕೊಂಡು ಕುಳಿತೆವು. ಬೆಟ್ಟವನ್ನು ಏರಿ ಬರುತ್ತಿರುವವರ ಬೂಟಿನ ಸದ್ದು ಕ್ಷಣಕ್ಷಣಕ್ಕೂ ಹತ್ತಿರವಾಗತೊಡಗಿತು. ಎಲ್ಲರೂ ಉಸಿರು ಬಿಗಿ ಹಿಡಿದು ಕುಳಿತೆವು. ಕೆಲವು ನಿಮಿಷ

ಗಳಲ್ಲಿ ಇಪ್ಪತ್ತು ಮೂವತ್ತು ಮಂದಿ ಪಾಕಿಸ್ತಾನಿ ಸೈನಿಕರು ನಮ್ಮಿಂದ ಕೆಲವು ಮಾರು ದೂರದಲ್ಲಿ ಸಾಗಿ ಹೋದರು. ಅವರು ಪಾಕಿಸ್ತಾನಿ ಸತ್ಲಜ್ ರೇಂಜರ್ ಪಡೆಯ ಗಡಿ ಕಾವಲು ಪಡೆಯುವರಾಗಿದ್ದರು. ಅನಂತರ ಬೆಟ್ಟದ ಇಳಿಜಾರನ್ನು ಇಳಿದು ಕಣಿವೆಯ ಹಾದಿಯಲ್ಲಿ ನಡೆಯಲಾರಂಭಿಸಿದೆವು. ನದಿಯನ್ನು ದಾಟಿ ನಮ್ಮ ನೆಲೆಯನ್ನು ತಲಪುವ ತನಕ ನೆಮ್ಮದಿಯ ನಿಟ್ಟುಸಿರು ಬಿಡುವಂತಿರಲಿಲ್ಲ. ಅಂತಹ ಕಠಿಣ ಪರಿಸ್ಥಿತಿ ಎದುರಾದಲ್ಲಿ ತಮ್ಮ ಪ್ರಾಣವನ್ನು ಪಣವಾಗಿಟ್ಟು ಹೋರಾಡಬಲ್ಲ ಕೆಚ್ಚು ಎಲ್ಲರಲ್ಲಿಯೂ ಇದ್ದಿತು.

ಆಹಾರ ಸಾಮಗ್ರಿಗಳ ಕೊರತೆಯಿಂದಲೂ ದುರ್ಗಮವಾದ ಬೆಟ್ಟ ಗುಡ್ಡಗಳನ್ನು ಹತ್ತಿ-ಳಿದು ನಾವೆಲ್ಲಾ ದಣಿದು ಕಂಗಾಲಾಗಿದ್ದೆವು. ಆ ಸಮಯದಲ್ಲಿ ಸುಬೇದಾರ್ ಮಾಧವನ್‌ರವರ ಉತ್ತೇಜಿತ ನುಡಿಗಳು ಮತ್ತು ಸೈನಿಕರ ಕಷ್ಟಗಳಲ್ಲಿ ಪಾಲುಗೊಳ್ಳುವ ಅವರ ಮುಂದಾಳುತನ ನಮ್ಮವರಿಗೆ ಸ್ಫೂರ್ತಿಯನ್ನುಂಟು ಮಾಡುತ್ತಿ-ದ್ದವು. ನಮ್ಮವರು ಅವರಿಗಾಗಿ ಪ್ರಾಣಾರ್ಪಣೆ ಮಾಡಲೂ ಹಿಂಜರಿಯುತ್ತಿರಲಿಲ್ಲವೆಂದರೆ ಉತ್ಪ್ರೇಕ್ಷೆಯು ಮಾತಾಗಲಾರದು. ಅಷ್ಟು ಸ್ಫೂರ್ತಿಯುತವಾಗಿತ್ತು ಅವರ ಮುಂದಾಳುತನ!

ಬೆಳಗಿನ ಜಾವ ನಾಲ್ಕು ಗಂಟೆಯ ಸುಮಾರಿಗೆ ನಾವು ದಾಟಬೇಕಿದ್ದ ನದಿಯ ಸಮೀಪದ ಗುಡ್ಡದ ಬಳಿಗೆ ಬಂದೆವು. ಗುಡ್ಡದ ಮೇಲಿನ ಪಾಕಿಸ್ತಾನಿ ಠಾಣೆಯ ಕಾವಲಿನವರ ಕಣ್ಣಿಗೆ ಬೀಳದಂತೆ ಜಾಗರೂಕತೆಯಿಂದ ಸಾಗಬೇಕಿತ್ತು. ನದಿಯನ್ನು ದಾಟಿದೊಡನೆ ಯಾವ ಭಯವೂ ಇಲ್ಲ. ಅದು ನಮ್ಮ ಪ್ರದೇಶ. ಮಾಧವನ್‌ರವರು ಎಲ್ಲರಿಗೂ ಗಿಡಮರಗಳ ಮರೆಯಲ್ಲಿ ತಗ್ಗಿ ಬಗ್ಗಿ ನಡೆಯಬೇಕೆಂದು ಎಚ್ಚರಿಕೆ ಕೊಡುತ್ತಿದ್ದರು. ಏಕೆಂದರೆ, ಗುಡ್ಡದ ಮೇಲಿನ ಪಾಕಿ-ಸ್ತಾನಿ ಠಾಣೆಯ ಗಮನಕ್ಕೆ ನಮ್ಮ ತುಕಡಿಯ ಸೈನಿಕರ ಚಲನವಲನಗಳು ಕಂಡುಬರುವ ಸಾಧ್ಯತೆ ಇದ್ದಿತು. ಸ್ವಲ್ಪ ದೂರ ನಡೆಯುವಷ್ಟರಲ್ಲಿ ನದಿಯ ಮೇಲಿನ ಹಗ್ಗದ ತೂಗು ಸೇತುವೆ ನಮಗೆ ಕಾಣಿಸತೊಡಗಿತು. ಕೇವಲ ನೂರು ಮಾರಿನಷ್ಟು ದೂರದ ಹಾದಿ ಸವೆಸಿದರೆ ನದಿಯನ್ನು ದಾಟಿದಂತೆಯೇ ಸರಿ.

ಆದರೆ ತಾನೊಂದು ನೆನೆದರೆ ದೈವವೊಂದು ಬಗೆಯಿತು. ಇಷ್ಟು ಅಲ್ಪ ಕಾಲಾವಧಿಯಲ್ಲಿ ಏನೆಲ್ಲಾ ನಡೆದುಹೋಯಿತು! ನದಿಯ ಕಡೆಗೆ ಸಾಗುತ್ತಿದ್ದ ನಮ್ಮತ್ತ ಇದ್ದಕ್ಕಿದ್ದಂತೆ ಗುಂಡಿನ ಸುರಿಮಳೆಯಾಗಲಾರಂಭಿಸಿ ಕಕ್ಕಾಬಿಕ್ಕಿಯಾದೆವು. ಗಡಿಯ ವೀಕ್ಷಣೆ ಮಾಡಲು ಬರುತ್ತಿದ್ದ ಪಾಕಿ-ಸ್ತಾನಿ ಕಾವಲು ಪಡೆಯ ಸುಮಾರು ಮೂವತ್ತು ಮಂದಿ ಸೈನಿಕರ ಪ್ಲಾಟೂನೊಂದು ನಮ್ಮನ್ನು ಕಂಡು ಮೆಷಿನ್‌ಗನ್ನಿನಿಂದ ಗುಂಡು ಹಾರಿಸತೊಡಗಿತು. ಹಗ್ಗದ ತೂಗು ಸೇತುವೆ ಬಹು ಹತ್ತಿರದಲ್ಲಿ ಕಣ್ಣೆದುರಿಗೇ ಕಾಣುತ್ತಿದೆ. ಅನಿ-ರೀಕ್ಷಿತ ಆಘಾತದಿಂದ ದಿಗ್ಭ್ರಮೆಗೊಂಡೆವು.

ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸುಬೇದಾರ್



ಮಾಧವನ್‌ರವರು ತೋರಿದ ಅಸಮಾನವಾದ ಕಾರ್ಯತತ್ಪರತೆ ಧೈರ್ಯ ಮತ್ತು ತನ್ನ ಕೈಕೆಳಗಿನ ಸೈನಿಕರ ಬಗೆಗಿನ ಕ್ಷೇಮ ಚಿಂತನೆ ಅದ್ವಿತೀಯವಾದುದಾಗಿತ್ತು.

ಮಾಧವನ್‌ರವರು ಒಂದು ಕ್ಷಣವನ್ನೂ ವ್ಯರ್ಥ ಮಾಡಲಿಲ್ಲ. ಸಿಪಾಯಿಯೊಬ್ಬನ ಕೈಲಿದ್ದ ಲೈಟ್ ಮೆಷಿನ್‌ಗನ್ನನ್ನು ಕಿತ್ತುಕೊಂಡು ದಿಬ್ಬವೊಂದರ ಮರೆಯಿಂದ ಪಾಕಿಸ್ತಾನಿ ಕಾವಲು ಪಡೆಯ ಮೇಲೆ ಗುಂಡಿನ ಮಳೆಯನ್ನು ಸುರಿಸತೊಡಗಿದರು. ಕ್ಷಣ ಕಾಲ ಶತ್ರುಗಳ ಮುನ್ನಡೆ ಕುಂಠಿತಗೊಂಡಿತು. ಒಬ್ಬೊಬ್ಬರಾಗಿ ತೆವಳಿಕೊಂಡು ಸೇತುವೆಯನ್ನು ದಾಟಿ ಹೋಗುವಂತೆ ಮಾಧವನ್ ನಮಗೆ ಅಪ್ಪಣೆ ಮಾಡಿದರು. ಅವರನ್ನು ಅಪಾಯದಲ್ಲಿ ಸಿಲುಕಿಸಿ ಪಾರಾಗಿ ಹೋಗಲು ನಮ್ಮಲ್ಲಿ ಯಾರಿಗೂ ಇಷ್ಟವಿರಲಿಲ್ಲ. ಆದರೆ ಅವರ ಅಪ್ಪಣೆಯನ್ನು ನಾವು ಮೀರುವಂತಿರಲಿಲ್ಲ. ಮೂವತ್ತು ಮಂದಿ ಸುಸಜ್ಜಿತ ಪಾಕಿಸ್ತಾನಿ ಪ್ಲಾಟೂನಿಗೆ ನಾವು ಹನ್ನೆರಡು ಮಂದಿ ಈಡಾಗಬಲ್ಲೆವೆ? ನಾವು ಒಬ್ಬೊಬ್ಬರಾಗಿ ತೆವಳಿಕೊಂಡು ಹೋಗಿ ಸೇತುವೆಯನ್ನು ದಾಟಿದೆವು. ನಾವೆಲ್ಲರೂ ಸೇತುವೆಯನ್ನು ದಾಟುವ ತನಕ ಮಾಧವನ್‌ರವರು ತಮ್ಮ ಗುಂಡಿನ ಹೊಡೆತಗಳಿಂದ ಪಾಕಿಸ್ತಾನಿಗಳ ಮುನ್ನಡೆಯನ್ನು ಅಂಗುಲ ಅಂಗುಲಕ್ಕೂ ತಡೆ ಹಿಡಿಯುತ್ತಿದ್ದರು. ಗನ್ನಿನಲ್ಲಿದ್ದ ತೋಟಾಗಳೆಲ್ಲಾ ತೀರಿಹೋದವು.

ಎಲ್ಲಿಯವರೆಗೆ ಏಕಾಂಗಿಯಾಗಿ ಗಣನೀಯ ಸಂಖ್ಯೆಯಲ್ಲಿದ್ದ ಶತ್ರುಗಳೆದುರಿನಲ್ಲಿ ಹೋರಾಡಲಾದೀತು! ಪಾಕಿಸ್ತಾನಿಗಳು ನಿಮಿಷ ನಿಮಿಷಕ್ಕೂ ಸೇತುವೆಯೆಡೆಗೆ ಮುಂದುವರಿಯುತ್ತಿದ್ದರು. ಕಟ್ಟಕಡೆಗೆ ನಾವೆಲ್ಲರೂ ಸೇತುವೆಯನ್ನು ದಾಟಿದೆವೆಂದು ಖಚಿತವಾದ ನಂತರ ಮಾಧವನ್‌ರು ನದಿಯನ್ನು ದಾಟಲು ಸೇತುವೆಯತ್ತ ಓಡಿ ಬರಲಾರಂಭಿಸಿದರು. ಪಾಕಿಗಳ ಗುಂಡು ಅವರ ಬೆನ್ನಟ್ಟಿ ಬರುತ್ತಿದ್ದವು. ನಾವೆಲ್ಲರೂ ನದಿಯ ಆಚೆಯ ದಡದಲ್ಲಿ ಮಾಧವನ್‌ರನ್ನು ಎದುರು ನೋಡುತ್ತಾ ಬೆಂಕಿಯ ಮೇಲೆ ನಿಂತಂತೆ ನಿಂತಿದ್ದೆವು. ಓಡಿ ಬರುತ್ತಿದ್ದ ಅವರನ್ನು ನೋಡಿ ಸಂತೋಷದಿಂದ ನಿಟ್ಟುಸಿರು ಬಿಟ್ಟೆವು.

ಮಾಧವನ್ ಸೇತುವೆಯಕಡೆಗೆ ಓಡಿ ಬರುತ್ತಿದ್ದರು. ಮುಖದಿಂದ ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು. ಬಲದೋಳಿಗೆ ಗುಂಡೇಟಿನಿಂದಾದ ಗಾಯದಿಂದ ರಕ್ತ ಒಸರುತ್ತಿತ್ತು. ಮೆಷಿನ್‌ಗನ್ನು ಕಂಕುಳಲ್ಲಿ ಜೋಲಾಡುತ್ತಿತ್ತು. 'ಜಲ್ದಿ ಆಜಾಯಿಯೆ ಸಾಬ್' ಎಂದು ಒಕ್ಕೊರಲಿನಿಂದ ಕೂಗಿದೆವು. ಅಷ್ಟರಲ್ಲಿ ಪಾಕಿಸ್ತಾನಿಗಳು ರೈಫಲಿನಿಂದ ಹಾರಿಸಿದ ಗ್ರೆನೇಡೊಂದು ಸೇತುವೆಯ ಮೇಲೆ ಬಿದ್ದು ಹಗ್ಗದ ತೂಗು ಸೇತುವೆ ಮುರಿದು ಬಿದ್ದಿತು. ನದಿಯನ್ನು ದಾಟುವ ಏಕೈಕ ಸಾಧನ ಅವರಿಗಿಲ್ಲವಾಯಿತು. ಮಾಧವನ್ ಹಿಂದುರುಗಿ ನೋಡಿದರು. ಪಾಕಿಸ್ತಾನಿಗಳು ಓಡೋಡಿ ಬರುತ್ತಿದ್ದಾರೆ. ಶತ್ರುಗಳ ಕೈಸೆರೆಯಾಗದೆ ಬೇರೆ ದಾರಿಯಿರಲಿಲ್ಲ.

ಕೆಲವು ಕ್ಷಣಗಳು ಕಳೆದವು. ಅವರ ಮುಖದಲ್ಲಿ ಮಂದಹಾಸ ಮಿನುಗಿ ಮಾಯವಾಯಿತು. ನದಿಯ ಈಚೆಯ ದಡದಲ್ಲಿದ್ದ ನಮ್ಮೆಡೆಗೆ ಕೈ ಆಡಿಸಿದರು. ಅವರು ಪಾಕಿಗಳಿಗೆ ಕೈಸೆರೆಯಾಗುವುದು ಖಂಡಿತವೆಂದು ನಿರ್ಧರಿಸಿಕೊಂಡೆವು. ಆದರೆ ನಮ್ಮ ಕಣ್ಣ ಮುಂದೆ ಒಂದು ಪವಾಡ ಜರುಗಿತು. ಸುಬೇದಾರ್ ಮಾಧವನ್‌ರವರು ಅರವತ್ತು ಅಡಿಗಳ ಆಳದಲ್ಲಿ ಭೋರ್ಗರೆದು ಹರಿಯುತ್ತಿದ್ದ ನದಿಯ ಪ್ರಪಾತಕ್ಕೆ ಧುಮುಕಿದರು. ಇಲ್ಲಿಗೆ ಅವರ ಕತೆ ಮುಗಿಯಿತು. ಮುಂದಿನ ಪೀಳಿಗೆಗೆ ಹಾಡಿಕೊಳ್ಳಲು ಅವರೊಂದು ವೀರಗಾಥೆಯಾಗಿ ಹೋದರು. ಭಾರತೀಯ ಸೇನೆಯ ವೀರರ ಪರಂಪರೆಗೆ ಸೇರಿ ಅಮರರಾದರು. ✡

# ಅಚ್ಚರಿ ತರಿಸುವ ಪ್ರಾಚೀನ ರಹಸ್ಯಗಳು

ಬಿ. ಸುರೇಶ

ಕೆಲವೇ ಜಲಜನಕ ಬಾಂಬುಗಳು ಇಂದಿನ ನಮ್ಮ ಮಾನವ ಜನಾಂಗವನ್ನು ನಾಶಪಡಿಸುತ್ತವೆ ಎಂದರೆ ಯಾರೂ ಅಲ್ಲಗಳೆಯಲಾರರು. ಆದರೆ ಹಿಂದೊಮ್ಮೆ ಇತಿಹಾಸ ಸೃಷ್ಟಿಯಾಗುವುದಕ್ಕಿಂತ ಮುಂಚೆ ಈ ರೀತಿ ಮಾನವ ಜನಾಂಗ ನಿರ್ನಾಮವಾಗಿತ್ತು ಎಂದು ಹೇಳಿದರೆ ಬಹುಶಃ ನಂಬಲು ಕಷ್ಟವಾಗಬಹುದು.

ಮಾನವನ ಉಗಮದ ಬಗ್ಗೆ ಚಾರ್ಲ್ಸ್ ಡಾರ್ವಿನ್ನನ ವಾದವನ್ನು ಒಪ್ಪಬಹುದಾದರೂ ನಮ್ಮ ಪ್ರಾಚೀನ ನಾಗರಿಕತೆಯ ಬೆಳವಣಿಗೆ ಬೇರೆ ಗ್ರಹಗಳಲ್ಲಿದ್ದಿರಬಹುದಾದ ನಮಗಿಂತಲೂ ವೈಜ್ಞಾನಿಕವಾಗಿ ಮುಂದುವರೆದಿರಬಹುದಾದ ಮಾನವರಿಂದ ಆಗಿರಬಾರದೇಕೆ? ದೇವರು ಈ ರೀತಿಯ ಒಬ್ಬ ಗಗನಯಾತ್ರಿಯಾಗಿರಬಾರದೇಕೆ? ಎಂಬ ಪ್ರಶ್ನೆಗಳು ತಲೆ ತಿನ್ನುವುದು ಸಹಜ. ಇವೆಲ್ಲಾ ಅರ್ಥಹೀನವಾಗಿ ಕಾಣಬಹುದು. ಆದರೆ ಲೂಯಿಸ್ ಪವೆಲ್ಸ್, ಜಾಕ್ವೆಸ್ ಬರ್ಗರ್, ಎರಿಕ್ ವಾನ್ ಡೆರಿಕ್ಸನ್, ಅಲನ್, ಸ್ಕಾಲಿ ಲ್ಯಾಂಡ್ಸಬರ್ಗ್ ಮುಂತಾದವರು ಬರೆದ ಪುಸ್ತಕಗಳಲ್ಲಿನ ಆಶ್ಚರ್ಯಕರ ಯೋಜನೆಗಳಾಗಿವೆ. ಇವರೆಲ್ಲರ ಮೊದಲ ಪ್ರಶ್ನೆ "ಮಾನವನ ಉಗಮ ಭೂಮಿಯಲ್ಲಿಯೇ ಆಯಿತೆ ಅಥವಾ ಬೇರೆ ಪ್ರಪಂಚದಿಂದ ಅವನು ಇಲ್ಲಿಗೆ ಬಂದನೇ?" ಎಂಬುದಾಗಿದೆ.

ಅವರ ಪ್ರಕಾರ ನಮಗಿಂತ ತುಂಬಾ ಮುಂದುವರಿದ ಮನುಷ್ಯ ಈ ಭೂಮಿಯ ಮೇಲೆ ಓಡಾಡಿದ್ದಾನೆ. ಇದಕ್ಕೆ ಪೂರಕವಾಗಿ ಉನ್ನತ ಪ್ರದೇಶದಲ್ಲಿ ದೊರೆತ ಮಾಹಿತಿ ಭೂಮಿಯ ಮೇಲೆ ೩೦,೦೦೦ ವರ್ಷಗಳಷ್ಟು ಹಿಂದೆಯೇ ಜೀವಿಗಳಿದ್ದವು ಎಂದು ತಿಳಿಸುತ್ತದೆ. ಅಷ್ಟು ಎತ್ತರದಲ್ಲೆ ಸಮುದ್ರಮಟ್ಟದ ವಾತಾವರಣದಲ್ಲಿರುವ ಅರ್ಧಭಾಗದಷ್ಟು ಆಮ್ಲಜನಕವಿರುವ ಸ್ಥಳದಲ್ಲಿ ಜೀವಿಗಳು ಇದ್ದವೆಂದರೆ ಅವರ ಹೃದಯ ಬಡಿತ ನಮ್ಮದರ ಅರ್ಧವಾಗಿರಬೇಕು. ಅಲ್ಲಿ ಉತ್ತಮ ರೀತಿಯ ರಸ್ತೆಗಳಿದ್ದಿರಬೇಕು. ನಮ್ಮ ಇತಿಹಾಸಕಾರರ ಪ್ರಕಾರ ಚಕ್ರಗಳ ಉಗಮವಾಗುವುದಕ್ಕೆ ಅನೇಕ ಸಾವಿರ ವರ್ಷಗಳ ಮುಂಚೆ ಅವುಗಳನ್ನು ಉಪಯೋಗಿಸುತ್ತಿದ್ದವರು ಯಾರು? ಏತಕ್ಕಾಗಿ ಅವುಗಳನ್ನು ನಿರ್ಮಿಸಲಾಗುತ್ತಿತ್ತು?

ಇಷ್ಟೇ ಅಲ್ಲದೆ ಅರ್ಧಕ್ಕೆ ನಿಲ್ಲಿಸಲಾದ ಕಟ್ಟಡಗಳ ಅವಶೇಷಗಳೂ ಇವೆ. ಅವು ಎಷ್ಟು ವೈಜ್ಞಾನಿಕವಾಗಿವೆಯೆಂದರೆ, ನಮ್ಮ ಈಗಿನ ಅತ್ಯಾಧುನಿಕ ತಂತ್ರಜ್ಞಾನವೂ ಅವುಗಳನ್ನು ನಿರ್ಮಿಸಲು ಕಷ್ಟಪಡಬೇಕಾಗುತ್ತದೆ. ಬೃಹತ್ ಅನೇಕ ಸಾವಿರ ಟನ್ ತೂಕದಷ್ಟಿರುವ ಅಗ್ನಿಜನ್ಯ

ಶಿಲೆಗಳು ಒಂದೊಂದೂ ತರ್ಕಬದ್ಧವಾಗಿ ಕತ್ತರಿಸಲ್ಪಟ್ಟಿದ್ದು ಸರಿಯಾದ ಸ್ಥಳಗಳಲ್ಲಿ ಜೋಡಿಸಲಾ ದೆ. ಆದರೆ ಆದನ್ನು ಹೇಗೆ ಮಾಡಲಾಯಿತು? ರೇಡಿಯೋ ಆ್ಯಕ್ಟಿವ್ ಗುಣವುಳ್ಳ ಕಲ್ಲುಗಳನ್ನು ಉಪಯೋಗಿಸಿ ಆ ಬೃಹತ್ ಆಕೃತಿಗಳನ್ನು ಕತ್ತರಿಸಲಾಯಿತೆ? ಅಥವಾ ಸಾಮಾನ್ಯವಾದ ಉಳಿಗಳಿಂದಲೆ? ಎಂಬುದು ಪ್ರಶ್ನೆಯಾಗಿದೆ.

ನಿಜವಾಗಿಯೂ ಇಷ್ಟು ಮುಂದುವರಿದ ಜನಾಂಗವಿದ್ದಿದ್ದರೆ ಅದಕ್ಕೆ ಏನಾಯಿತು? ಇದಕ್ಕೆ ಕೊಡಗಬಹುದಾದ ಕಾರಣ "ಬೃಹತ್ ಅಣುಸ್ಫೋಟ." ಗೋಬಿ ಮರುಭೂಮಿಯ ಮರಳಿನ ಮೇಲೆ ಕಾಣುವ ಕಲೆಗಳು ಅಣುಬಾಂಬು ಸಿಡಿದ ನಂತರ ಉಂಟಾಗುವ ಕಲೆಗಳಂತಿರುವುದೂ ಈ ವಾದಕ್ಕೆ ಪುಷ್ಟಿ ಕೊಡುತ್ತದೆ.

ಮೃತ ಸಮುದ್ರದ ಬಗ್ಗೆ ಶತಮಾನಗಳ ಹಿಂದೆ ಬರೆದಿರುವ ಒಂದು ಚರ್ಮದ ಹಾಳೆಯಲ್ಲಿ ಬೈಬಲ್ಲಿನಲ್ಲಿ ವರ್ಣಿತವಾದ ನಗರಗಳಾದ ಸೊಡಮ್ ಮತ್ತು ಗೊಮೊರಹ್‌ಗಳ ನಾಶದ ಬಗ್ಗೆ ವಿವರಗಳಿವೆ.

ಧೂಳು ಮತ್ತು ಹೊಗೆಯು ಒಂದು ಸಾಲು ಭೂಮಿಯ ಮೇಲಿನ ವಾತಾವರಣಕ್ಕೆ ಚಿಮಣಿಯಿಂದ ಬರುವ ಹೊಗೆಯು ಹಾಗೆ ಏರಿತು. ಆದು ಸೊಡಮ್ ಮತ್ತು ಗೊಮೊರಹ್ ನಗರಗಳ ಮೇಲೆ ಗಂಧಕ ಮತ್ತು ಬೆಂಕಿಯ ಮಳೆಯನ್ನು ಸುರಿಸಿ ಅಲ್ಲಿಯ ಸಕಲ ಜೀವಿಗಳನ್ನೂ ನಾಶ ಮಾಡಿತು ಎಂದು ಅದರಲ್ಲಿ ಬರೆಯಲಾಗಿದೆ.

ಅದಕ್ಕಾಗಿ ಮುಂಚೆ ಜನಗಳಿಗೆ ಆ ಸ್ಥಳದಿಂದ ದೂರ ಹೋಗಲು ಮತ್ತು ಸ್ಫೋಟದ ನಂತರ ಮತ್ತೆ ಆ ಸ್ಥಳಕ್ಕೆ ವಾಪಸಾಗದಿರಲು ತಿಳಿಸಲಾಗಿತ್ತು. ಸ್ಫೋಟವನ್ನು ನೋಡದಂತೆ ಭೂಮಿಯ ಕೆಳಗೆ ಅಡಗಿರಲು ತಿಳಿಸಲಾಗಿತ್ತು. ಈ ಎಚ್ಚರಿಕೆಯನ್ನು ಧಿಕ್ಕರಿಸಿದವರು ಸಾವಿಗೀಡಾದರು ಮತ್ತು ಕಣ್ಣುಗಳನ್ನು ಕಳೆದುಕೊಂಡರು... ಎಂಬ ವಿವರಗಳು ಆ ಚರ್ಮದ ಹಾಳೆಯಲ್ಲಿವೆ. ಒಂದು ಜಲಜನಕ ಬಾಂಬನ್ನು ಹಾಕಲು ಅತಿ ಎತ್ತರಕ್ಕೆ ಹಾರಬಲ್ಲ ವಿಮಾನ ಅವಶ್ಯಕ. ಹಾಗಾದರೆ ಆಗ ವಿಮಾನದ ಅಸ್ತಿತ್ವವಿತ್ತೆ?

ಅದೇ ಜಾಗದ ಲೆಬನಾನ್‌ನ ಬಳಿಯ ಒಂದು ಸ್ಮಾರಕ ಸ್ತಂಭ ಅನೇಕ ವರ್ಷಗಳ ಕಾಲ ಸಂಶೋಧಕರಿಗೆ ಸಮಸ್ಯೆಯಾಗಿತ್ತು. ಅದನ್ನು 'ಟೆರೇಸ್ ಆಫ್ ಬಾಲ್‌ಬೇಕ್' ಎಂದು ಕರೆಯುತ್ತಾರೆ. ಅದೊಂದು ದೊಡ್ಡ ಕಲ್ಲು ಒಂಡೆಗಳ ಎತ್ತರವಾದ ವೇದಿಕೆ. ಅವುಗಳಲ್ಲಿ ಕೆಲವು ೬೦ ಅಡಿಗಳಷ್ಟು ಉದ್ದವಾಗಿದೆ. ಇವು "ಗಗನನೌಕೆ"ಗಳ ಇಳಿದಾಣಗಳಾಗಿರಬಾರದೇಕೆ? ಈ ಗಗನನೌಕೆಗಳು ನಮ್ಮ ಪೂರ್ವಿಕರಿಂದ ನಿರ್ಮಿತವಾಗಿರಬಹುದು ಅಥವಾ ಬೇರೆ ಲೋಕದವರಿಂದ ಮನುಷ್ಯರು ವಿಮಾನಗಳಂಥವುಗಳಲ್ಲಿ ಹಾರುತ್ತಿದ್ದರು ಎಂಬುದಾಗಿ ನಮ್ಮ ಅನೇಕ ಪುರಾತನ ಗ್ರಂಥಗಳಲ್ಲಿ ಹೇಳಿದೆ.

೧೯೫೮ರಲ್ಲಿ ಅಮೇರಿಕದ ಸ್ಮಿತ್‌ಸೋನಿಯನ್ ಇನ್‌ಸ್ಟಿಟ್ಯೂಟಿನವರು ತಮ್ಮ ಅಂತಾರಾಷ್ಟ್ರೀಯ ಶೋಧನೆಗಳ ಫಲಿತಾಂಶಗಳನ್ನು ಪ್ರಕಟಿಸಿದರು. ಅದರಲ್ಲಿ ೧೦,೦೦೦ ವರ್ಷಗಳ ಹಿಂದೆ ಎಸ್ಕಿಮೋಗಳು ಮಧ್ಯ ಏಶಿಯದಲ್ಲಿ ವಾಸಿಸುತ್ತಿದ್ದುದನ್ನು ಉಲ್ಲೇಖಿಸಲಾಗಿದೆ. ಅವರು ಅಲ್ಲಿಂದ ಅತ್ಯಂತ ಶೀತ ಪ್ರದೇಶವಾದ ಗ್ರೀನ್‌ಲಂಡಿಗೆ ಹೋದುದೇಕೆ? ಎಸ್ಕಿಮೋಗಳ ಪುರಾಣ ಕತೆಗಳಲ್ಲಿ ಇದಕ್ಕೆ ಕಾರಣವನ್ನು ಹೇಳಲಾಗುತ್ತದೆ. ದೊಡ್ಡದಾದ ಲೋಹದ ಹಕ್ಕಿಗಳ ಹಾರಾಟ ಹೆಚ್ಚಾದಾಗ ಅವುಗಳಿಂದ ತಪ್ಪಿಸಿಕೊಳ್ಳಲು ಅವರು ಶೀತ ಪ್ರದೇಶಗಳ ಕಡೆ ಹೊರಟರಂತೆ. ಬಹುಶಃ ಈ ದೊಡ್ಡ ಲೋಹದ ಹಕ್ಕಿಗಳೇ ವಿಮಾನಗಳಾಗಿದ್ದಿರಬಹುದು.

೧೮೦ ವರ್ಷಗಳ ಹಿಂದೆ ತುರ್ಕಸ್ತಾನದ ನೌಕಾಧಿಕಾರಿ ಪಿರಿರೀಸ್ ಮೊದಲನೆ ಶತಮಾನಕ್ಕೆ ಸೇರಿದ ನಕಾಶೆಗಳ ಕಟ್ಟೊಂದನ್ನು ಕಂಡುಹಿಡಿದನು. ಆ ನಕಾಶೆಗಳು ಬೊಹಿಸ್ತಾನಿನ ಗುಹೆಗಳಲ್ಲಿ ಸಿಕ್ಕಿದ್ದವು. ಅವುಗಳನ್ನು ವೀಕ್ಷಿಸಿದ ತಜ್ಞರು ಅವು ಇಡೀ ಪ್ರಪಂಚದ ಅತಿ ಸ್ಪಷ್ಟವಾದ, ನಿಖರ ಮಾಹಿತಿಗಳನ್ನು ಒಳಗೊಂಡ ನಕಾಶೆಯಾಗಿದ್ದುದನ್ನು ಕಂಡು ಆಶ್ಚರ್ಯಪಟ್ಟರು. ಅದರಲ್ಲಿ ಹಿಮಾಚ್ಛಾದಿತವಾದ ಅಂಟಾರ್ಟಿಕ್ ಖಂಡದ ಎಲ್ಲೆಯನ್ನು ನಿಖರವಾಗಿ

ಗುರುತಿಸಲಾಗಿತ್ತು. ಅದು ಇಂದಿಗೂ ಅತ್ಯಾಧುನಿಕ ಉಪಕರಣಗಳಿಂದಲೂ ಗುರುತಿಸಲು ಅಸಾಧ್ಯವಾದುದಾಗಿದೆ.

ಬಹುಶಃ ಇವುಗಳನ್ನು ಸಹ ಆಕಾಶದಲ್ಲಿ ಎತ್ತರದಲ್ಲಿ ಹಾರುವವರೇ ಗುರುತಿಸಿರಬೇಕು. ಅವರು ಭೂಮಿಯವರೆ? ಅಥವಾ ಬೇರೆ ಗ್ರಹದವರೇ?

ಆ ನಕಾಶೆಗಳಲ್ಲಿ ಸುಮಾರು ೧೩,೦೦೦ ವರ್ಷಗಳ ಹಿಂದೆ ಎಲ್ಲಾ ಗ್ರಹಗಳೂ ಸೂರ್ಯನ ಸುತ್ತ ಇರಬಹುದಾಗಿದ್ದ ಸ್ಪಷ್ಟ ಸ್ಥಳಗಳಲ್ಲೇ ಇದ್ದವು. ನಮ್ಮ ರೈಲು ದಾರಿ, ರಸ್ತೆಗಳನ್ನು ನಕಾಶೆಗಳಲ್ಲಿ ನಾವು ಗೆರೆಗಳನ್ನು ಎಳೆದು ಗುರುತಿಸುವ ರೀತಿ ಶುಕ್ರಗ್ರಹಕ್ಕೂ ಭೂಮಿಗೂ ಮಧ್ಯೆ ಗೆರೆಗಳನ್ನು ಎಳೆಯಲಾಗಿತ್ತು. ಆ ರೀತಿ ಗ್ರಹಗಳ ನಡುವೆ ಸಂಪರ್ಕವಿದ್ದರೆ ಆ ಸಂಪರ್ಕ ಸಾಧನಗಳು ಹೇಗಿದ್ದವು?

ಹಿಂದೂಗಳ ಕೆಲವು ಅತ್ಯಂತ ಹಳೆಯ ಬರಹಗಳಲ್ಲಿ ಇವುಗಳ ಬಗ್ಗೆ ಉಲ್ಲೇಖವಿದೆ. ರಾಮಾಯಣ, ಮಹಾಭಾರತಗಳಲ್ಲಿ ವಿಮಾನಗಳ ಬಗ್ಗೆ ಉಲ್ಲೇಖವಿದೆ. ಅವುಗಳು ನೀಲಿ ಮೋಡಗಳ ರೀತಿಯಲ್ಲಿ, ಕೋಳಿ ಮೊಟ್ಟೆ ಆಕಾರದಲ್ಲಿದ್ದವು; ಹೊಳೆಯುವ ಭೂಮಂಡಲದಂತಿದ್ದವು ಎಂದು ಉಲ್ಲೇಖಿಸಲಾಗಿದೆ. ಅವು ಭೂಮಿಗೆ ಪ್ರದಕ್ಷಿಣೆ ಹಾಕಿ ಕೆಳಗೆ ಇಳಿದಾಗ ಅಥವಾ ಮೇಲಕ್ಕೆ ಏರುವಾಗ ಇಂಪಾದ ಶಬ್ದ ಮತ್ತು ಬೆಂಕಿಯು ಉಂಟಾಗುತ್ತೆಂದೂ ಅವುಗಳಲ್ಲಿ ಹೇಳಲಾಗಿದೆ ಎಂದೆಲ್ಲಾ ಅನೇಕ ಸಾವಿರ ವರ್ಷಗಳ ಹಿಂದಿನ ಕತೆ.

ಮಾನವ ಜನಾಂಗದ ಅತ್ಯಂತ ಹಳೆಯ ಪುಸ್ತಕಗಳಾದ ಮೆಸಟೋಪಮಿಯಾದ ಕ್ಯುನಿಫಾರಂ ಪುಸ್ತಕಗಳು ವಿಮಾನಗಳಲ್ಲಿ ಬಂದು ಹೋಗುವ ದೇವರುಗಳ ಬಗ್ಗೆ ವಿವರಗಳನ್ನು ಒಳಗೊಂಡಿವೆ. ಅದರಲ್ಲಿ ೭ ಪುಸ್ತಕ ಸಂಗ್ರಹ ಮೊದಲ ಗಗನ-ನೌಕೆಗಳನ್ನು ಕಣ್ಣಾರೆ ಕಂಡ ಬಗ್ಗೆ ವರದಿಗಳನ್ನು ಒಳಗೊಂಡಿದೆ. ಆ ಯಾನ ಮಾಡಿದ 'ಎಂಕಿಡು' ನನ್ನು ಅದರ ಬಗ್ಗೆ ಕೇಳಿದಾಗ ಅವನು ಗಗನನೌಕೆಯು ಮೇಲೇರಿದಂತೆ ಭೂಮಿ ಬೆಟ್ಟದ ಹಾಗೆಯೂ ಸಮುದ್ರಗಳು ಸರೋವರಗಳ ಹಾಗೆಯೂ ಕಂಡವೆಂದು ಹೇಳಿದ. ಆತ ಎರಡನೆಯ ಬಾರಿ ಭೂಮಿ ಹೂತೋಟದಂತೆಯೂ ಹಾಗೂ ಸಮುದ್ರಗಳು ನೀರೊದಗಿಸುವ ಕಾಲುವೆಗಳಂತೆ ಕಂಡವೆಂದ. ಮೂರನೇಬಾರಿ ಭೂಮಿ 'ಅಂಬಲಿ'ಯಂತೆಯೂ, ಸಮುದ್ರ ಅದರೊಳಗಿನ ನೀರಿನಂತೆಯೂ ಕಂಡಿತೆಂದು ಹೇಳಿದ. ಈಗ ಉಪಗ್ರಹಗಳಿಂದ ತೆಗೆದ ಫೋಟೋಗಳನ್ನು ನೋಡಿದಾಗ ಅವನು ಹೇಳಿದ ರೀತಿಯಲ್ಲಿ ಭೂಮಿ ಕಾಣುವುದನ್ನು ನಾವು ಗಮನಿಸಬಹುದು.

ಬೈಬಲ್ಲಿನ ಪ್ರವಾದಿ ಎಜೆಕಿಲ್‌ನನ್ನು ಬೇರೆ ಗ್ರಹದವರು ರಥಗಳ ರೀತಿಯ ಯಂತ್ರಗಳಲ್ಲಿ ಬಂದು ಭೇಟಿ ಮಾಡಿದ್ದರಂತೆ. ಆ ಭೇಟಿಯ ವಿವರಣೆ ನಿಖರವಾಗಿಯೂ ಆಶ್ಚರ್ಯಕರ-ವಾಗಿಯೂ. "ಆ ಜನರು ಭೂಮಿಯನ್ನು ಬಿಟ್ಟು ಮೇಲೇರಿದಾಗ ಆ ರಥದ ಚಕ್ರಗಳು ಒಳಸೇರಿದವು," ಎಂದಿದ್ದಾನೆ.

ಈ ರೀತಿ ಪ್ರಾಚೀನ ರಹಸ್ಯಗಳನ್ನು ಶೋಧಿಸ ಹೊರಟರೆ ಅನೇಕ ಆಶ್ಚರ್ಯಕರ ವಿಷಯಗಳು ಬೆಳಕಿಗೆ ಬರುತ್ತವೆ. ನಮ್ಮ ಅನೇಕ ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ. ✡



ಒಂದು ದಟ್ಟವಾದ ಕಾಡು. ಮಹಾಮುನಿ ಘೋರವಾದ ತಪ್ಪಸ್ಸು ಮಾಡುತ್ತಿದ್ದಾನೆ. ಸಮಿಪದಲ್ಲೇ ಒಂದು ಕೊಳ. ಅದರಲ್ಲಿ ಒಂದು ಕಪ್ಪೆ ಸದಾ ವಟಗುಟ್ಟಿ ಜನರ ನಿದ್ದೆ ಹಾಳು ಮಾಡುವುದು ಅದರ ಜಾಯಮಾನ. ಇಲ್ಲೂ ಹಾಗೇ ಆಯಿತು. ಮಹಾಮುನಿಯ ತಪಸ್ಸು ಹಾಳಾಗಿ, ಆತನಿಗೆ ಭಾರಿ ಕೋಪ ಬಂತು. ತತ್‌ಕ್ಷಣ ಕಪ್ಪೆಗೆ ಶಾಪ ಕೊಟ್ಟುಬಿಟ್ಟ. "ಭೂ-ಲೋಕಕ್ಕೆ ಹೋಗಿ ಕ್ರಿಕೆಟ್ ಕಾಮೆಂಟೇಟರ್ ಆಗು."

# ಮಾಸ್ತಿ: ಒಂದು ಸ್ಮರಣೆ

ಮಾಸ್ತಿಯವರು ಕಣ್ಣುಮುಚ್ಚುವ ಕೆಲವೇ ಗಂಟೆಗಳ ಮುಂಚೆ ಅವರ ಅಂತಿಮ ದರ್ಶನ ಪಡೆದವರಲ್ಲಿ ನಾನೂ ಒಬ್ಬ. ಮಾಸ್ತಿಯವರ ಸಾನ್ನಿಧ್ಯದಲ್ಲಿ ನಾನು ಕಳೆದ ಕೆಲ ಕ್ಷಣಗಳನ್ನು ಇಲ್ಲಿ ನೆನೆದಿದ್ದೇನೆ.

ಪಿ. ಆರ್. ತಿಪ್ಪೇಸ್ವಾಮಿ

ಕನ್ನಡ ಸಾಹಿತ್ಯ ಲೋಕದಲ್ಲಿ ಬಹುದೊಡ್ಡ ಹೆಸರಾಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಬೆಂಗಳೂರಿನ ಜಯದೇವ ಹೃದ್ರೋಗ ಆಸ್ಪತ್ರೆಯಲ್ಲಿ ಶುಕ್ರವಾರ (ಜೂನ್ ೬) ಬೆಳಗಿನ ಜಾವ ೧-೩೦ರ ವೇಳೆಗೆ ನಿಧನರಾದರು.

'ಕನ್ನಡದ ಆಸ್ತಿ' ಎಂದೇ ಹೆಸರಾಗಿದ್ದ ಮಾಸ್ತಿಯವರು ತಮ್ಮ ಸಾವಿನಲ್ಲಿಯೂ ವೈಶಿಷ್ಟ್ಯವನ್ನು ಮೆರೆದರು. ಜೂನ್ ೬ ಅವರ ಹುಟ್ಟಿದ ದಿನ. ಅಂದೇ ಅವರುಕಣ್ಮರೆಯಾದರು. ಅವರು ಬದುಕುಳಿದಿದ್ದರೆ ಕನ್ನಡಿಗರು ಅವರ ೯೬ನೆಯ ಹುಟ್ಟುಹಬ್ಬವನ್ನು ಅಂದು ಆಚರಿಸುತ್ತಿದ್ದರು.

ಇದು ನನಗೆ ಮಾಸ್ತಿಯವರ ಕೊನೆಯ ದರ್ಶನ ಜೂನ್ ೫ರ ಗುರುವಾರ ಬೆಂಗಳೂರಿಗೆ ಹೋಗಿದ್ದೆ. ಕನ್ನಡ ಮತ್ತು ಸಂಸ್ಕೃತಿಯ ಇಲಾಖೆಯ ಉಪ ನಿರ್ದೇಶಕ ಕಾ. ತ. ಚಿಕ್ಕಣ್ಣ ಮತ್ತು ವಿಶ್ವನಾಥ ಹೇಳಿದರು: "ನಿಮಗೆ ಗೊತ್ತಿಲ್ಲವೆ, ಮಾಸ್ತಿ ದೇಹಸ್ಥಿತಿ ಚಿಂತಾಜನಕ..." ಎಂದು. ಕೂಡಲೇ ವಿಕ್ಟೋರಿಯಾ ಆಸ್ಪತ್ರೆಯ ಆವರಣದಲ್ಲಿರುವ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರಕ್ಕೆ ಧಾವಿಸಿದೆ.

ಅಲ್ಲಿ ಮಾಸ್ತಿ ಅವರ ಅಳಿಯ ಎಂ. ಸಿ. ಶೇಷಾದ್ರಿ ನನ್ನನ್ನು ಕಂಡರು. "ನಿಮ್ಮ ಮಾಸ್ತಿ ಉಳಿಯುವ ಸ್ಥಿತಿ ಇಲ್ಲ" ಎಂಬ ತೊದಲು ಮಾತು ಕೇಳಿ ಗಾಬರಿಯಾಯಿತು. ಅವರ ಜೊತೆ ಇದ್ದ ಡಾ. ಸುರೇಂದ್ರರೂ ಅದೇ ಮಾತಾಡಿದರು. ಒಂದು ವರ್ಷದ ವರೆಗೆ ಇವರೂ ಮಾಸ್ತಿ ಅವರ ಆರೋಗ್ಯ ನೋಡಿಕೊಂಡವರು. ನನ್ನ ಕಾತುರ ಮಾಸ್ತಿ ಅವರ ದರ್ಶನದ ಕಡೆ ಇತ್ತು. ನನ್ನನ್ನು ಮಾಸ್ತಿಯವರಿದ್ದ ಇನ್-ಟೆನ್ಸಿವ್ ಕೇರ್ ಕೋಣೆಯ ೧೭ನೆಯ ವಾರ್ಡಿಗೆ ಕರೆತಂದರು.

ಅಲ್ಲಿ ಮಾಸ್ತಿ ಅವರು ಸಾವಿನೊಂದಿಗೆ ಸೆಣಸಾಡುವಂತಿತ್ತು. ಬಾಯಲ್ಲಿ ಆಮ್ಲಜನಕ ನಳಿಕೆ, ಕೈಗೆ ಗ್ಲೂಕೋಸ್ ನಳಿಕೆಗಳು ತಮ್ಮ ಕೆಲಸ ಮಾಡುತ್ತಿದ್ದವು. ಪುಣ್ಯವಂತ ನಳಿಕೆಗಳಿವು, ಎನಿಸಿತು.

ಮಾಸ್ತಿ ಅವರ ದೇಹಸ್ಥಿತಿ ಸರಿಯಿಲ್ಲದೆ ಮಂಗಳವಾರ ರಾತ್ರಿ ಅವರನ್ನು ಆಸ್ಪತ್ರೆಗೆ ಸೇರಿಸಲಾಗಿತ್ತು. ಬುಧವಾರ ಬೆಳಗ್ಗೆ ಚೆನ್ನಾಗಿ ಮಾತಾಡಿದರು. ಅಂದೇ ರಾತ್ರಿ ಕಫ ಕಟ್ಟಿತ್ತು. ಪ್ರಜ್ಞಾಹೀನರಾದರು. ನಾನು

ಅಲ್ಲಿದ್ದಾಗ ಮಧ್ಯಾಹ್ನ ಮೂರರ ಸಮಯ. ಆಗ ಡಾ. ಚಿನ್ನಯ್ಯ, ಡಾ. ಚಿಕ್ಕಲಿಂಗೇಗೌಡ ಮತ್ತು ಡಾ. ಯಾವಗಲ್ ತಮ್ಮ ಪರಿವಾರ ದೊಡನೆ ಬಂದರು. ಮಾಸ್ತಿ ಅವರ ಸ್ಥಿತಿ ಪರೀಕ್ಷಿಸಿದರು. ನಾನು ವಿಚಾರಿಸಿದೆ. "ಆಲ್-ಮೋಸ್ಟ್ ನಿಲ್," ಎಂದ ಡಾ. ಚಿನ್ನಯ್ಯನವರ ಉತ್ತರ ನನಗೆ ದುಃಖ ತರಿಸಿತು. ನೂರು ವರ್ಷಗಳ ಕಾಲ ನಮ್ಮೊಡನೆ ಇರುತ್ತಾರೆಂಬ ನನ್ನ ನಂಬಿಕೆ ಸುಳ್ಳಾಗಬೇಕೆ!

ಮಾಸ್ತಿ ಅವರಿಗೆ ೬ ಜನ ಹೆಣ್ಣು ಮಕ್ಕಳು. ಒಬ್ಬರು ಹೊರತು ಐದು ಜನರು ಅಲ್ಲಿದ್ದರು. ಅರವಿಂದಮ್ಮ, ಪದ್ಮಮ್ಮ, ಇಂದಿರಮ್ಮ, ಶ್ರೀ ರಂಗನಾಯಕಿ, ಶಾಂತಮ್ಮ ತಂದೆಯ ಬಳಿ ಇದ್ದರು. ಗಂಡು ಮಕ್ಕಳು ಇಲ್ಲದ ಮಾಸ್ತಿ ಅವರನ್ನು ಚೆನ್ನಾಗಿಯೇ ಈ ಹೆಣ್ಣು ಮಕ್ಕಳು, ಅಳಿಯಂದಿರು ಕಾಪಾಡಿಕೊಂಡು ಬಂದಿದ್ದರು. ಆದರಲ್ಲೂ ಅರವಿಂದಮ್ಮ ಮತ್ತು ಇಂದಿರಮ್ಮ



ತಂದೆ ಜೊತೆ ವಾಸವಾಗಿದ್ದರು.

ಮಾಸ್ತಿ ಅವರ ಪತ್ನಿ ಪಂಕಜಮ್ಮ ತೀರಿಕೊಂಡು ೧೬ ವರ್ಷಗಳಾಗಿವೆ. ಈ ಪುತ್ರಿಯರು ಮಾಸ್ತಿ ಅವರನ್ನು ನೋಡಿಕೊಂಡ ರೀತಿ ಮೆಚ್ಚುವಂತ-ಹುದು.

ಈಚೆಗೆ ಮಾಸ್ತಿ ಅವರ ಸಂದರ್ಶನ ಮಾಡಿದ ಪ್ರಮುಖ ಸ್ವಾಮಿಗಳಲ್ಲಿ ಪೇಜಾವರ ಶ್ರೀಗಳು, ರಾಮಕೃಷ್ಣ ಆಶ್ರಮದ ರಂಗನಾಥಾನಂದರು ಮುಖ್ಯರು. ಮಾಸ್ತಿ ಅವರಿಗೆ ಹಿಂದೂ ಧರ್ಮದ ಬಗ್ಗೆ ಅಪಾರ ನಂಬಿಕೆ. "ಕ್ರಿಸ್ತ, ಮುಸಲ್ಮಾನ ಧರ್ಮಗಳನ್ನು ಹಿಂದೂ ಧರ್ಮದೊಡನೆ ಅಳ ವಡಿಸಿ ಹಿಂದೂ ಧರ್ಮವನ್ನು ಪುನರುತ್ಥಾನ ಮಾಡುವ ಕೆಲಸ ನಿಮ್ಮಂಥ ಸಂನ್ಯಾಸಿಗಳದು," ಎಂದು ಪ್ರೇರಣೆ ನೀಡಿದ್ದರು.

ಮಾಸ್ತಿ ಅವರು ಆಸ್ಪತ್ರೆ ಸೇರಿದ ದಿನ ಭಗವದ್ಗೀತೆಯ ಕೆಲವು ಸಾಲುಗಳನ್ನು ಮಗಳಿಂದ ಹೇಳಿಸಿ ಕೇಳಿದ್ದರು. "ಈ ದೇಹ ಬಿಟ್ಟಿರುವೆ. ಇನ್ನೇನೂ ತೊಂದರೆ ಇಲ್ಲ," ಎನ್ನುತ್ತಿದ್ದರಂತೆ. ಮಾಸ್ತಿ ಅವರಿಗೆ ತಮ್ಮ ಅಂತ್ಯ ಮೊದಲೇ ತಿಳಿದಿತ್ತು ಅನಿಸುತ್ತದೆ.

೧೯೮೦ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಿಂದ ಹಿಂದಿರುಗುವ ದಿನ ಮಾಸ್ತಿ ಅವರು ತಂಗಿದ್ದ ರೂಮಿಗೆ ನಾನೂ ಮಿತ್ರ ಕ್ಯಾತನಹಳ್ಳಿ ರಾಮಣ್ಣನವರೂ ಹೋದೆವು. ಅಲ್ಲಿ ಡಾ. ಹಾ. ಮಾ. ನಾಯಕರು ಸುದೀರ್ಘ ಸಂಭಾಷಣೆಯಲ್ಲಿ ತೊಡಗಿದ್ದರು. ಮಾಸ್ತಿ ಅವರು ನನ್ನ ಕಡೆ ತಿರುಗಿ, "ತಿಪ್ಪೇಸ್ವಾಮಿ, ಈ ಕಡೆ ನಿಮಗೆ ಏನು ಸಿಕ್ಕಿತು ನಿಮ್ಮ ಮ್ಯೂಜಿಯಂಗೆ?" ಎಂದು ವಿಚಾರಿಸಿದರು.

ಅಂಕಲಗಿ ಮಠದ ವಿಚಾರ ಹೇಳಿದೆ. "ಕಟ್ಟೀ-ಮನೀದು ಕುಂದರ ನಾಡು. ಪುಂಡರಿದ್ದ ಜಾಗ. ನಿಮಗೆ ಕುಡುಗೋಲು ದೊರೆತದ್ದು ಒಳ್ಳೇ ಯದೇ ಆಯಿತು." ಎಂದು ನಗೆಯಾಡಿದರು.

ನನ್ನ ಜೊತೆ ಇದ್ದ ರಾಮಣ್ಣನವರ ಪರಿಚಯ ಮಾಡಿಸಿದೆ. "ಯಾವ ಊರು?" ಎಂದು

ರಾಮಣ್ಣನನ್ನು ವಿಚಾರಿಸಿದರು ಮಾಸ್ತಿ.

"ಕ್ಯಾತನಹಳ್ಳಿ." ಎಂದರು ರಾಮಣ್ಣ.

"ಹೋ! ಯಾವ ಕ್ಯಾತನಹಳ್ಳಿಯಪ್ಪ...ಹರವು ಕ್ಯಾತನಹಳ್ಳಿನಾ?" ಎಂದು ಕೇಳಿದರು ಮಾಸ್ತಿ.

"ಹೌದು" ಎಂದರು ರಾಮಣ್ಣ. "ನೋಡಿ, ಐವತ್ತು ವರ್ಷಗಳ ಹಿಂದೆ ನಾನು ಬೆಂಗಳೂರು ಮೈಸೂರುಗಳಿಗೆ ರೈಲಿನಲ್ಲಿ ಹೋಗಿ ಬರುವಾಗ ಫ್ರೆಂಚ್ ರಾಕ್ಸ್ (ಈಗ ಪಾಂಡವಪುರ) ರೈಲ್ವೆ ನಿಲ್ದಾಣದಲ್ಲಿ ನಿಮ್ಮೂರಿನಿಂದ ಮುದುಕಮ್ಮಗಳು ಮೊಸರು ಕುಡಿಕೆಗಳನ್ನು ಮಾರಲಿಕ್ಕೆ ತರುತ್ತಿದ್ದರು. ಮಣ್ಣಿನ ಕುಡಿಕೆಗಳಲ್ಲಿ ಹೆಪ್ಪು ಹಾಕಿದ ಮೊಸರು. ಬಗ್ಗಿಸಿದರೂ ಅದು ಕುಡಿಕೆಯಿಂದ ಬೀಳುತ್ತಿರಲಿಲ್ಲ. ಆ ಕುಡಿಕೆ ಸಮೇತ ಮಾರುತ್ತಿದ್ದರು. ಅಂಥಾ ಗಟ್ಟಿ ಮೊಸರು. ಆಗ ಹೈನುಗಾರಿಕೆ ಅಷ್ಟೊಂದು ಸಮೃದ್ಧವಾಗಿತ್ತು. ನಿಮ್ಮ ಊರಿನಲ್ಲೂ ಹಾಗೇ ಇದೆ ಏನಪ್ಪ?" ಎಂದು ಮಾಸ್ತಿ ಕೇಳಿದರು.

ರಾಮಣ್ಣನಿಂದ ಏನೂ ಉತ್ತರ ಬರಲಿಲ್ಲ. ಆಗ ಮಾಸ್ತಿಯವರೇ, "ಈಗ ಹ್ಯಾಗೆ ಅವೆಲ್ಲಾ ಇರೋಕೆ ಸಾಧ್ಯ? ಈಗೆಲ್ಲಾ ನಾಗರಿಕತೆ ಬಂತು. ಜನಗಳೆಲ್ಲ ಬದಲಾಯಿಸಿದರು. ಆಗಿನ ಸಮೃದ್ಧಿ ಈಗೆಲ್ಲಿ ಬರಬೇಕು ಹೇಳಪ್ಪ?" ಎಂದರು.

ಮಾಸ್ತಿ ಅವರಿಗೆ ಮೊಸರಿನ ಬಗ್ಗೆ ಅದೆಷ್ಟು ಪ್ರೀತಿ ಇದ್ದಿತು! 'ಮಾಸ್ತಿ ಮೊಸರು' ನೆನಪಾದಾಗಲೆಲ್ಲ ಅವರು ಬರೆದ 'ಮೊಸರಿನ ಮಂಗಮ್ಮ'ನ ಕತೆ ನೆನಪಾಗುತ್ತದೆ. ಬೆಂಗಳೂರಿನ ಮಾಸ್ತಿ ಅವರ ಮನೆಗೆ ಸಮೀಪದ ವೆಂಕಟಾಪುರದಿಂದ ವರ್ತನೆ ಮೊಸರನ್ನು ತಂದು ಕೊಡುವ ಮಂಗಮ್ಮನ ಚಿತ್ರವನ್ನು ಯಾರೂ ಮರೆಯುವಂತಿಲ್ಲ. ಮೊಸರೆಲ್ಲ ಮಾರಿ ಆದ ಮೇಲೆ ಹೋಗುತ್ತಾ ಒಂದು ಸಲ ಮಾಸ್ತಿ ಅವರ ಮನೆಗೆ ಮಂಗಮ್ಮ ಬರುತ್ತಿದ್ದಳು, ಬಂದು ಅಂಗಳದಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಮನೆಯವರನ್ನು ಮಾತಾಡಿಸಿ ಎಲೆ ಅಡಿಕೆ ಬಾಯಲ್ಲಿ ಹಾಕಿಕೊಂಡು ಆ ಮೇಲೆ ಊರಿಗೆ ಹೋಗುತ್ತಿದ್ದಳು. ಇಂಥ ಸಂದರ್ಭದಲ್ಲಿ ಮಾಸ್ತಿ ಅವರಿಗೆ ವಿರಾಮವಿದ್ದರೆ ಮೊಸರಮ್ಮ ತನ್ನ ಕಷ್ಟ ಸುಖವನ್ನೆಲ್ಲಾ ಬಿಚ್ಚುತ್ತಿದ್ದಳು. ಆಗ ಏನಾದರೂ ಪರಿಹಾರ ಕೇಳುತ್ತಿದ್ದಳು. ತಾಯಿ, ಮಗ, ಸೊಸೆ, ಮೊಮ್ಮಗ ಇವರಲ್ಲಿ ಉಂಟಾದ ಸಣ್ಣ ಕಾರಣಕ್ಕಾದ ಜಗಳದ ತೊಡಕು ತಾನಾಗಿಯೇ ಬಿಟ್ಟು ಹೋದ ಕತೆಯನ್ನು ಮಾಸ್ತಿ ಅವರು ಸುಂದರವಾಗಿ ಹೆಣೆದಿದ್ದಾರೆ.

ಈ ಮೊಸರು ಮಾರುವ ಮಂಗಮ್ಮನ ಅನುಭವದ ತತ್ವಗಳನ್ನು ಆಕೆಯ ಬಾಯಿಂದ ಹೇಳಿಸಿದ್ದಾರೆ. ಓರ್ವ ಸಾಮಾನ್ಯ ಹಳ್ಳಿಯ ಹೆಂಗಸಿನ ಬಗ್ಗೆ ಮಾಸ್ತಿ ಅವರಿಗೆ ಇದ್ದ ಗೌರವ, ಆದರ ಸ್ಮರಿಸುವಂತಹದು. ಅಷ್ಟೇ ಅಲ್ಲ, ಮಾಸ್ತಿ ಅವರಿಗೆ ಮೊಸರಿನ ಬಗ್ಗೆ ಅದೆಷ್ಟು ಆಸೆ ಆಸಕ್ತಿ ಇದ್ದಿತು! ಅದರಲ್ಲೂ ಓರ್ವ ಬಡವಿಯ ಬಗ್ಗೆ ಅನುಕಂಪ ತೋರಿಸುತ್ತಿದ್ದ ಮಾಸ್ತಿಯವರದು ಎಷ್ಟೊಂದು ಶ್ರೀಮಂತ ಹೃದಯ ಹೊಂದಿದ್ದರು ಎಂಬುದಕ್ಕೆ ಇದೊಂದು ಸಾಕ್ಷಿಯಾಗಿದೆ.

ಮಾಸ್ತಿ ಅವರನ್ನು ಮೈಸೂರಿನ ಸಮಾರಂಭಕ್ಕೆ ಕರೆತರುವ ಜವಾಬ್ದಾರಿ (ಎರಡು ಸಾರಿ) ನನ್ನದಾಗಿತ್ತು. ಕಾರಿನಲ್ಲಿ ಪ್ರಯಾಣ. ಇನ್ನೇನು ಮೈಸೂರು ಸಮೀಪಿಸಿದೆವು.

"ಪುಟ್ಟಪ್ಪ ಆರೋಗ್ಯವಾಗಿದ್ದಾರಾ?" ಎಂದು ವಿಚಾರಿಸಿದರು ಮಾಸ್ತಿ. "ಇಲ್ಲ ಸಾರ್," ಎಂದೆ- ಹಸಿ ಸುಳ್ಳು ಹೇಳಿದೆ.

ಕಾರನ್ನು ಒಂಟಿಕೊಪ್ಪಲಿಗೆ ತಿರುಗಿಸಲು ಸೂಚಿಸಿದರು. ಶ್ರೀವೆಂಕಟರಮಣಸ್ವಾಮಿ ಗುಡಿ ಮುಂದೆ ಕಾರು ನಿಲ್ಲಿಸಿದರು. ಅಲ್ಲಿದ್ದ ಗಾಂಧಿ ಭವನದ ರಂಗಾಚಾರ್ ನಮ್ಮನ್ನು ಕಂಡು ಓಡಿ ಬಂದರು. ದೇವಾಲಯದ ಒಳಗೆ ಬರಲು ಕರೆದರು. "ಬೇಡ ಸ್ವಾಮಿ ದರ್ಶನ ಇಲ್ಲೆ ಆಗುತ್ತೆ," ಎಂದರು.

ಕಾರು ಕುವೆಂಪು ಮನೆ ತಲುಪಿತು. ನಾನು

ಬಳಹಚಾರದಲ್ಲಿದ್ದ 'ಕುವೆಂಪು' ಅವರನ್ನು ಕಂಡೆ.

"ಮಾಸ್ತಿ ಅವರು ಬಂದಿದ್ದಾರೆ" ಎಂದೆ, ಕುವೆಂಪು ಅವರ ಮುಖ ಹಿಗ್ಗಿತು. ಸಂತೋಷದಿಂದ ಮಾಸ್ತಿ ಅವರಲ್ಲಿಗೆ ಬಂದರು. ಮಾಸ್ತಿ ಅಭಿಮಾನದಿಂದ ಕುವೆಂಪು ಅವರ ಮೈ ಸವರಿ "ನನಗಿಂತ ನೀವು ಚಿಕ್ಕವರು. ಆರೋಗ್ಯ ಚೆನ್ನಾಗಿ ಕಾಪಾಡಿಕೊಳ್ಳಿ," ಎಂದು ಹೇಳಿದ ಮಾತು ಈಗಲೂ ನೆನಪಿದೆ.

ಮೈಸೂರಿಗೆ ಬಂದಾಗ ಮಾಸ್ತಿ ಅವರು ತಮ್ಮ ಬಂಧು ವಿ. ಕೆ. ಶ್ರೀನಿವಾಸನ್‌ರ (ಬುಳ್ಳ) ಮನೆಯಲ್ಲಿ ತಂಗುತ್ತಿದ್ದರು. ಇಲ್ಲಿ ಅದೆಷ್ಟು ಸಾರಿ ಅವರ ದರ್ಶನ ಲಾಭ ಪಡೆಯುತ್ತಿದ್ದೆನೋ! ಆದರೆ ಅಂಥ ಭಾಗ್ಯ ಮತ್ತೆಲ್ಲಿ ದೊರಕೀತು? ನೆನೆದಾಗ ಹೃದಯದಲ್ಲಿ ವೇದನೆಯಾಗುತ್ತದೆ. ✪



## ಆತ್ಮಶಕ್ತಿ-ಆತ್ಮವಿಸ್ಮೃತಿ

ಸೃಷ್ಟಿಸುವುದು ಬ್ರಹ್ಮನ ಕೆಲಸ. ಒಮ್ಮೆ ಆತ ಅದ್ಭುತ ರಹಸ್ಯ ಶಕ್ತಿಯೊಂದನ್ನು ಸೃಷ್ಟಿಸಿದ. ಅದು ಬಯಸಿದ್ದನ್ನೆಲ್ಲ ನೀಡಬಲ್ಲುದಾಗಿತ್ತು. ಮಾನವರು ಬೇಕಾಬಿಟ್ಟಿ ಇದರ ಉಪಯೋಗ ಮಾಡಿಕೊಂಡಾರೆಂದು ಹೆದರಿದ ಬ್ರಹ್ಮ ದೇವತೆಗಳನ್ನು ಕರೆದು, "ಇದನ್ನು ಎಲ್ಲಿಟ್ಟರೆ ಚೆನ್ನು ಎಂದು ತಿಳಿಸಬಲ್ಲಿರಾ?" ಎಂದು ಕೇಳಿದ.

ಗಹನವಾದ ವಿಚಾರವಿನಿಮಯ ನಡೆಯಿತು. ಒಬ್ಬನೆಂದ—"ಇದನ್ನು ಸಮುದ್ರದಾಳದಲ್ಲಿ ಹುದುಗಿಸೋಣ," ಎಂದು. "ಎತ್ತರದ ಪರ್ವತ ಶಿಖರದ ತುತ್ತತುದಿಯಲ್ಲಿ ಹೂಡಿಡೋಣ," ಎಂದ ಇನ್ನೊಬ್ಬ. "ಗಹನಾರಣ್ಯದ ಗುಹೆಯೇ ಇದಕ್ಕೆ ತಕ್ಕುದಾದ ತಾಣ," ಎಂದ ಮತ್ತೊಬ್ಬ. ಯಾರ ಸಲಹೆಯೂ ತೃಪ್ತಿಕರವಾಗಿರಲಿಲ್ಲ.

ಕೊನೆಗೆ ಮಹಾ ಮೇಧಾವಿಯೊಬ್ಬ ಬಹುವಾಗಿ ಚಿಂತಿಸಿ ಹೇಳಿದ: "ಎಲ್ಲೆಲ್ಲೋ ಇಡಬೇಕೆಂದು ಆಲೋಚಿಸುವುದೇಕೆ? ಆ ಶಕ್ತಿಯನ್ನು ಮಾನವನ ಮನಸ್ಸಿನಾಳದಲ್ಲಿಯೇ ಇರಿಸಿಬಿಡೋಣ. ಅದು ಅಲ್ಲಿದ್ದೀತೆಂದು ಮಾನವ ಊಹಿಸುವುದೂ ಇಲ್ಲ. ಏಕೆಂದರೆ ಬಾಲ್ಯದಿಂದಲೂ ಅವನ ಮನಸ್ಸು ಹೊರಗಡೆ ಹರಿಯುತ್ತಿರುತ್ತದೆ. ಈ ಅದ್ಭುತ ಶಕ್ತಿ ತನ್ನಲ್ಲಿದ್ದೀತೆಂದು ಅವನು ಯೋಚಿಸಲು ಸಾಧ್ಯವೇ ಇಲ್ಲ. ಕಣ್ಣಿಗೆ ಕಾಣುವ, ಇಂದ್ರಿಯಗಳಿಂದ ಗ್ರಹಿಸಬಹುದಾದ ಜಗತ್ತಿನಲ್ಲಿಯೇ ಆತ ಅದನ್ನು ಹುಡುಕುತ್ತಿರುತ್ತಾನೆ. ಆದ್ದರಿಂದ ಮಾನವನ ಮನಸ್ಸಿನಾಳದ ಪದರಗಳಲ್ಲಿಯೇ ಇದನ್ನಿಡುವದು ಒಳಿತು."

ಈ ಸೂಚನೆ ಎಲ್ಲರಿಗೂ ಒಪ್ಪಿಗೆಯಾಯಿತು. ಅಂತೆಯೇ ಬಯಸಿದ್ದನ್ನು ನೀಡುವ ಈ ಅದ್ಭುತವನ್ನು ಮಾನವನ ಮನಸ್ಸಿನಾಳದಲ್ಲಿ ಬಚ್ಚಿಟ್ಟರಂತೆ ದೇವತೆಗಳು.

ಮಾನವನು ಮನಸ್ಸು ಮಾಡಿದರೆ ಬೇಕೆನಿಸಿದ್ದನ್ನು ಖಂಡಿತವಾಗಿಯೂ ಪಡೆಯಬಲ್ಲ. ಆದರೆ ತನ್ನ ಬಗೆಗೆ ತಾನೇ ಒಂದು ಪರಿಮಿತ ಹಾಗೂ ಸಂಕುಚಿತ ಭಾವನೆಯನ್ನು ಬಲವಾಗಿ ರೂಢಿಸಿಕೊಂಡು ತನ್ನನ್ನು ತಾನೇ ಕಟ್ಟಿ ಹಾಕಿಕೊಂಡಿದ್ದಾನೆ. ತನ್ನ ಕಣ್ಣಿಗೆ ಕೈಯಿಟ್ಟು ಕತ್ತಲೆಯೆಂದು ಅಳುವಂತಿದೆ ಅವನ ಸ್ಥಿತಿ.

—ಜನಾರ್ದನ ದೇವದಕೇರಿ

(ಸ್ವಾಮಿ ಜಗದಾತ್ಮಾನಂದರ 'ಬದುಕಲು ಕಲಿಯಿರಿ' ಪುಸ್ತಕದಿಂದ)

ಆದರಿಂದ ನಿಮ್ಮ ಬಣ್ಣ ಬಯಲು

# ಯಾವ ಬಣ್ಣ ಇಷ್ಟ?

* ಆರ್.
* ಗೋವಿಂದ ರಾಜು

ಪ್ರಕೃತಿಯಲ್ಲಿ ನೀಲಿ ಬಣ್ಣದ ಆಕಾಶ, ಹಸಿರು ಮರಗಿಡಗಳು, ಬಣ್ಣ ಬಣ್ಣದ ಹೂವುಗಳು ನಮ್ಮ ಕಣ್ಣುಗಳನ್ನು ಆಕರ್ಷಿಸಿ, ಮನಸೂರೆಗೊಳ್ಳುವವು. ಕೋಪ ಬಂದಾಗ ಕಣ್ಣು ಕೆಂಪಾಗುವುದು, ಹೆಣ್ಣು ನಾಚಿದಾಗ ಕೆನ್ನೆ ಗುಲಾಬಿ ಬಣ್ಣಕ್ಕೆ ತಿರುಗುವುದು, ದುಃಖ ಆವರಿಸಿದಾಗ ಮುಖ ಕಪ್ಪಾಗುವುದು ನಮಗೆ ತಿಳಿದ ವಿಷಯ. ಶುಭಕಾರ್ಯಗಳಲ್ಲಿ ಶ್ವೇತ ವಸ್ತ್ರಧಾರಿಗಳಾಗಿ ಪೂಜಾ ವಿಧಿಗಳನ್ನು ಕೈಗೊಳ್ಳುವುದು ಸಂಪ್ರದಾಯವಾಗಿದೆ. ಕೆಲವು ಜನಾಂಗಗಳಲ್ಲಿ ಆಪ್ತರು ಮೃತರಾದಾಗ ಕಪ್ಪು ಉಡುಪು ಧರಿಸಿ ಶೋಕ ಸೂಚಿಸುವುದು ರೂಢಿಯಲ್ಲಿದೆ.

ಹೀಗೆಯೇ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಇಷ್ಟವಾದ ಬಣ್ಣದ ಉಡುಪನ್ನು ಧರಿಸಿ ಆಕರ್ಷಣೀಯವಾಗಿ ಕಾಣಲು ಇಷ್ಟಪಡುತ್ತಾನೆ. ಒಬ್ಬ ಬಯಸಿದ ಬಣ್ಣವನ್ನು ಮತ್ತೊಬ್ಬ ಬಯಸುವುದಿಲ್ಲ. ಈ ರೀತಿಯ ಬಣ್ಣ ಸೇರುವುದು ವೈಯಕ್ತಿಕ ವಿಷಯವಾಗುತ್ತದೆ. ಅನೇಕ ಮನಃಶಾಸ್ತ್ರಜ್ಞರು ಬೇರೆ ಬೇರೆ ಬಣ್ಣ ಬಯಸುವ ವ್ಯಕ್ತಿಗಳ ಬಗ್ಗೆ ಆಳವಾದ ಅಭ್ಯಾಸ ಮಾಡಿ ಒಬ್ಬ ವ್ಯಕ್ತಿ ಇಷ್ಟಪಡುವ ಬಣ್ಣ ಅವನ ಸ್ವಭಾವ, ವ್ಯಕ್ತಿತ್ವಗಳನ್ನು ಬಹಿರಂಗಗೊಳಿಸುತ್ತದೆ ಎಂದು ತೀರ್ಮಾನಿಸಿದ್ದಾರೆ. ಇವರ ಪ್ರಯೋಗಗಳ ಫಲಿತಾಂಶಗಳು ಬಹಳ ಕುತೂಹಲಕರವಾಗಿವೆ.

ಬಿಳಿ ಬಣ್ಣ ಸರಳತೆಯ ಶುಭ್ರತೆಯ ಸಂಕೇತ. ಆದರೆ ಕೆಲವು ಶ್ರೀಮಂತರು ಬಿಳಿ ಉಡುಪು ಧರಿಸುವವರಾಗಿದ್ದು ಆಡಂಬರದ ಜೀವನ ನಡೆಸುತ್ತಾರೆ. ಬಿಳಿ ಬಣ್ಣ ಬಯಸುವವರು ತಾವೇ ದೊಡ್ಡ ಮನುಷ್ಯರೆಂದು 'ಅಹಂ'ನಿಂದ ಸೆಟೆದು ನಡೆಯುತ್ತಾರೆ. ಇವರು ಹೆಚ್ಚಾಗಿ ಸೌಮ್ಯ ಸ್ವಭಾವದವರೂ ಮಿತಭಾಷಿಗಳೂ ಆಗಿರುತ್ತಾರೆ. ಶ್ರೇಷ್ಠ ಧುರೀಣರು, ವೈದ್ಯರು, ದಾದಿಯರು, ಕ್ರೈಸ್ತ ಸನ್ಯಾಸಿನಿಯರು, ಉಪಾಧ್ಯಾಯರು ಹೆಚ್ಚಾಗಿ ಬಿಳಿ ಉಡುಪುಗಳನ್ನು ಧರಿಸುತ್ತಾರೆ. ಆದರೆ, ಇಂದು ರಾಜಕೀಯ ಪುಢಾರಿಗಳೂ ಹೆಚ್ಚಾಗಿ ಗರಿಗರಿಯಾಗಿ ಇಸ್ತ್ರಿ ಮಾಡಿದ ಬಿಳಿ ಬಟ್ಟೆಗಳನ್ನು ಧರಿಸಿ ಜನರನ್ನು ವಂಚಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಅಂದಮೇಲೆ ಬಿಳಿ ಬಣ್ಣ ಬಯಸುವವರು ಗುಣವಂತರೋ ವಂಚಕರೋ ಎಂದು ತೀರ್ಮಾನಿಸುವುದು ಸುಲಭಸಾಧ್ಯವಲ್ಲ.

ಹಸಿರು ಬಣ್ಣ ಬಯಸುವವರು ನೃತ್ಯ, ಸಂಗೀತ, ಕ್ರೀಡೆಗಳಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಇವರು ತುಂಟ ಸ್ವಭಾವದವರೂ ಆಗಿರುವರು. ಒಳ್ಳೆಯ ಸಾಹಿತಿಗಳೂ ಒಳ್ಳೆಯ ಆಡಳಿತಗಾರರೂ ಆಗಿರುತ್ತಾರೆ. ಅನೇಕ ವೇಳೆ ಹಸಿರು ಬಣ್ಣ ಇಷ್ಟಪಡುವವರು ಸಮಾಜದಲ್ಲಿ ಒಳ್ಳೆಯ ಗೌರವಾನ್ವಿತ ವ್ಯಕ್ತಿಗಳಾಗಿರುತ್ತಾರೆ.

ಕಂದು ಬಣ್ಣ ಶಕ್ತಿಯ ಸಂಕೇತ. ಕಂದು ಬಣ್ಣ ಇಷ್ಟಪಡುವವರು ಧೈರ್ಯಶಾಲಿಗಳೂ ದೃಢ ನಿಶ್ಚಯದ ಸ್ವಭಾವದವರೂ ಧೋರಣೆಗಳನ್ನು ಕಾರ್ಯರೂಪಕ್ಕೆ ತರುವವರೂ ಆಗಿರುತ್ತಾರೆ. ಇವರು ಕನಸಿನ ಲೋಕಕ್ಕೆ ಅಂಟಿಕೊಳ್ಳದೆ ವಾಸ್ತವ ಪ್ರಪಂಚದಲ್ಲಿ ವಿಹರಿಸುತ್ತಾರೆ. ಇವರ ನಡೆ ನುಡಿ ಒಂದೇ ಆಗಿರುತ್ತವೆ. ಪ್ರಗತಿಪರ ವಿಚಾರಸರಣಿಯನ್ನು ಇವರು ಬೆಂಬಲಿಸುವರು. ಕಂದು ಬಣ್ಣ ಬಯಸುವವರು ಹೆಚ್ಚಾಗಿ ಸೈನಿಕರೂ ಕಾರ್ಖಾನೆ ಕೆಲಸಗಾರರೂ, ಇಂಜಿನಿಯರ್‌ಗಳೂ ಆಗಿರುತ್ತಾರೆ. ಇವರು ಜೀವನದಲ್ಲಿ ಸುಖ-ದುಃಖಗಳನ್ನು ಸಮಚಿತ್ತ ಭಾವದಿಂದ ಸ್ವೀಕರಿಸುವರು. ಹೋರಾಟವೇ ಇವರ ಬದುಕು. ಇವರು ಅಧಿಕಾರಕ್ಕಾಗಲಿ ಐಶ್ವರ್ಯಕ್ಕಾಗಲೀ ಇಷ್ಟಪಡುವುದಿಲ್ಲ. ಒಟ್ಟಿನಲ್ಲಿ ಕಂದು ಶ್ರೀಸಾಮಾನ್ಯನ ಬಣ್ಣ.

ಹಳದಿ ಮತ್ತು ಕೆಂಪು ಮಿಶ್ರಣದಿಂದ ಕಿತ್ತಳೆ ಬಣ್ಣ ಬರುವುದು. ಕಿತ್ತಳೆ ಬಣ್ಣ ತ್ಯಾಗದ ಸಂಕೇತ. ಈ ಬಣ್ಣ ಬಯಸುವವರು ಸಹೃದಯರೂ ಸಜ್ಜನರೂ, ಆಸ್ತಿಕರೂ ಆಗಿರುತ್ತಾರೆ. ಮಾನವ ಜನಾಂಗದಲ್ಲಿ ಅತೀವ ಅನುಕಂಪ ತೋರಿಸುವರು. ಅಲ್ಲದೆ ಅಹಿಂಸೆಯಲ್ಲಿ ನಂಬಿಕೆಯುಳ್ಳವರೂ ವಿಶ್ವ ಶಾಂತಿಯನ್ನು ಬಯಸುವವರೂ ಆಗಿರುತ್ತಾರೆ. ದೀನ ದಲಿತರ ಉದ್ಧಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿರುತ್ತಾರೆ. ಶ್ರೇಷ್ಠ ತತ್ವಜ್ಞಾನಿಗಳೂ, ಋಷಿಗಳೂ ಸಂನ್ಯಾಸಿಗಳೂ ಯೋಗಿಗಳೂ ಕಿತ್ತಳೆ ಬಣ್ಣವನ್ನು ಬಯಸುವುದು ಸಾಮಾನ್ಯ.

ಕೆಂಪು ಬಣ್ಣವನ್ನು ಇಷ್ಟಪಡುವವರು ಕ್ರಾಂತಿಕಾರಿಗಳು. ತುಂಬಾ ಉತ್ಸಾಹಿಗಳಾಗಿದ್ದು ತಮ್ಮ ಗುರಿಯನ್ನು ತಲುಪಲು ರಕ್ತ ಕ್ರಾಂತಿಗೂ ಸಿದ್ಧರಾಗಿರುತ್ತಾರೆ. ಬೆರಳು ತೋರಿಸಿದರೆ ಹಸ್ತ ನುಂಗುವ ಸ್ವಭಾವದವರಾಗಿರುತ್ತಾರೆ. ಇವರು ನಾಯಕತ್ವಕ್ಕೆ ಹಂಬಲಿಸುವರು. ಕೆಂಪು ಬಣ್ಣ ಇಷ್ಟಪಡುವವರು ಒಳ್ಳೆಯ ವಾಗ್ಮಿಗಳೂ ಶ್ರೇಷ್ಠ ಯೋಧರೂ ತತ್ವಜ್ಞಾನಿಗಳೂ ಆಗಿರುತ್ತಾರೆ. ಕಮ್ಯುನಿಸ್ಟ್ ರಾಷ್ಟ್ರಗಳಲ್ಲೆಲ್ಲಾ ಕೆಂಪು ಬಣ್ಣದ ಲಾಂಛನ, ಉಡುಪುಗಳೇ ಹೆಚ್ಚು ಬಳಕೆಯಲ್ಲಿವೆ.

ನೇರಳೆ ಬಣ್ಣ ಕೆಂಪು ಮತ್ತು ಬಣ್ಣಗಳ ಮಿಶ್ರಣ. ಈ ಬಣ್ಣಕ್ಕೆ ಮನ ಸೋಲುವವರು ಶಾಂತ ಸ್ವಭಾವದವರೂ ಆತ್ಮೀಯರೂ ಆಗಿರುವವರಲ್ಲದೆ ಪರರಿಗೆ ಉಪಕಾರ ಮಾಡುವ ಸ್ವಭಾವದವರಾಗಿರುತ್ತಾರೆ. ಜನರ ಪ್ರೀತಿ, ವಿಶ್ವಾಸಗಳನ್ನು ಸುಲಭವಾಗಿ ಗಳಿಸುತ್ತಾರೆ. ವ್ಯಾಪಾರಿಗಳೂ ಶಿಲ್ಪಿಗಳೂ ಅಧಿಕಾರಿಗಳ ಸಹಾಯಕರೂ ಸಮಾಜ ಸೇವಾಕರ್ತರೂ ಹೆಚ್ಚಾಗಿ ನೇರಳೆ ಬಣ್ಣ ಇಷ್ಟ ಪಡುವವರಾಗಿರುತ್ತಾರೆ,

ಹಳದಿ ಬಣ್ಣವು ಅಷ್ಟು ಆಕರ್ಷಣೀಯವಾದ ಬಣ್ಣವಲ್ಲ. ಅದು ನೋಡಿದವರ ಮನಸ್ಸಿಗೆ ಕಸಿವಿಸಿಯನ್ನುಂಟುಮಾಡುತ್ತದೆ. ಈ ಬಣ್ಣವನ್ನು ಬಯಸುವವರು ತೆಳ್ಳಗಿನವರೂ ಕಾಯಿಲೆಯಿಂದ ನರಳುವವರೂ ಆತ್ಮವಿಶ್ವಾಸವಿಲ್ಲದವರೂ ಆಗಿರುತ್ತಾರೆ. ಅಲ್ಲದೆ ಇವರು ತಪ್ಪು ಹುಡುಕುವ ಸ್ವಭಾವದವರೂ ಯಾವಾಗಲೂ ಗೊಣಗುವವರೂ ಆಗಿರುವರು. ಪರರ ಏಳಿಗೆಯನ್ನು ಕಂಡು ಅಸೂಯೆಪಡುತ್ತಾರೆ. ಜೀವನದಲ್ಲಿ ಏನನ್ನೂ ಸಾಧಿಸಲು ಆಗದೆ ನಿರಾಶೆಗೊಳ್ಳುವರು. ಸೋಮಾರಿಗಳಾಗಿದ್ದು ಸ್ವತಂತ್ರ ಜೀವನ ಸಾಗಿಸಲಾರದೆ ಪರರ ಆಶ್ರಯಕ್ಕೆ ಹಾತೊರೆಯುತ್ತಾರೆ.

ಹೀಗೆ ಒಬ್ಬ ವ್ಯಕ್ತಿ ಬಯಸುವ ಬಣ್ಣದಿಂದ ಅವನ ಆಸಕ್ತಿ, ಸ್ವಭಾವ, ವ್ಯಕ್ತಿತ್ವಗಳನ್ನು ತಿಳಿದುಕೊಳ್ಳಬಹುದಾಗಿದೆ. ಇತ್ತೀಚೆಗೆ ಮನೋವಿಜ್ಞಾನಿಗಳು ವಿವಿಧ ಬಣ್ಣಗಳನ್ನು ಬಯಸುವ ವ್ಯಕ್ತಿಗಳ ಬಗ್ಗೆ ಹೆಚ್ಚಿನ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ. ಇದರ ಫಲವಾಗಿ ಒಬ್ಬನ ಮುಖವನ್ನು ನೋಡಿ ಮನಸ್ಸಿನ ಭಾವನೆಗಳನ್ನು ಹೇಳಲು ಹೇಗೆ ಸಾಧ್ಯವಾಗುವುದೋ, ಹಾಗೆ ಒಬ್ಬ ಬಯಸುವ ಬಣ್ಣದಿಂದ ಅವನ ವ್ಯಕ್ತಿತ್ವವನ್ನು ಪೂರ್ಣವಾಗಿ ಗ್ರಹಿಸಲು ಸಾಧ್ಯವಾಗುವ ದಿನಗಳು ದೂರವಿಲ್ಲ. ✡



# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಅನಾಮಯ
(ಅ) ಊಟಕ್ಕಿಲ್ಲದ (ಆ) ದುಃಖರಹಿತ (ಇ) ಅಪ್ರಸಿದ್ಧ (ಈ) ವೈಷ್ಣವ

೨. ಕಲಿಲ
(ಅ) ವಿದ್ಯಾರ್ಥಿ (ಆ) ಉಪಾಧ್ಯಾಯ (ಇ) ಮಲಿನ (ಈ) ಬರಗಾಲ

೩. ಅತಂದ್ರಿತ
(ಅ) ತಬ್ಬಲಿ (ಆ) ಬಿದ್ದಲ್ಲೇ ಇರುವ (ಇ) ಪೆಟ್ಟುಬೀಳದ (ಈ) ಎಚ್ಚರವುಳ್ಳ

೪. ತುರುವು
(ಅ) ಟೊಳ್ಳುಮಾಡು (ಆ) ತೊಂದರೆ (ಇ) ನೀರಡಿಕೆ (ಈ) ಬೆಂಕಿಯಾಟ

೫ ತುಮುಲ
(ಅ) ಗೊಂದಲ (ಆ) ಎಲೆಅಡಿಕೆ (ಇ) ಹೊನ್ನೆಯಮರ (ಈ) ಒಂದು ಆಯುಧ

೬. ಮಾರೊಡ್ಡು
(ಅ) ಅಳತೆ ಮಾಡು (ಆ) ಅಣೆಕಟ್ಟು (ಇ) ಎದುರು ಬೀಳು (ಈ) ಹೊಲದ ಅಂಚು

೭ ಅವಶ
(ಅ) ಕೊನೆ (ಆ) ತೃಪ್ತಿಯಿಲ್ಲದೆ (ಇ) ಮಳೆ (ಈ) ಕಪ್ಪು

೮. ಶರೀರಯಾತ್ರೆ
(ಅ) ಮರಣ (ಆ) ಜನನ (ಇ) ಸ್ಮಶಾನಕ್ಕೆ ಹೋಗುವ ಮೆರವಣಿಗೆ (ಈ) ಜೀವನೋಪಾಯ

೯. ಮಿಟಕಲಾಡಿ
(ಅ) ದಟ್ಟ ಕಾಡು (ಆ) ಬೇನೆ ತಿನ್ನುವ ಹೆಂಗಸು (ಇ) ಚಡಪಡಿಕೆ (ಈ) ವಯ್ಯಾರಿ

೧೦. ಲೋಕಾಭಿರಾಮ
(ಅ) ಎಲ್ಲರಿಗೂ ಬೇಕಾದವನು (ಆ) ತಲೆಹರಟೆ (ಇ) ಉದ್ದೇಶವಿಲ್ಲದ (ಈ) ಚಾಡಿ ಮಾತು

೧೧. ಪೊಂಕ
(ಅ) ಬಾತುಕೋಳಿ (ಆ) ಗರ್ವ (ಇ) ಮುದುಕ (ಈ) ಬುದ್ಧಿಗೇಡಿ

೧೨. ಹರಾಮ
(ಅ) ದುಷ್ಕರ್ಮ (ಆ) ಸಂತೋಷ (ಇ) ಉಪದ್ರವ (ಈ) ಶ್ರೇಷ್ಠ



೧. ಅನಾಮಯ (ಅ) ದುಃಖರಹಿತ, ಸಂಕಟವಿಲ್ಲದ, ರೋಗವಿಲ್ಲದ, ಕ್ಷೇಮ. ಉದಾ:— ಯೋಗಿ ಅನಾಮಯನಾಗಿರುತ್ತಾನೆ. [ಸಂ. ಅ = ಇಲ್ಲ + ಆಮಯ = ರೋಗ]

೨. ಕಲಿಲ (ಇ) ಮಲಿನ; ಮಿಶ್ರಿತ. ಬೆರಕೆ, ದೂಷಿತ. ಉದಾ:- ಮೋಹ ಕಲಿಲವಾದ ಜೀವನ [ಸಂ.]

೩. ಅತಂದ್ರಿತ (ಈ) ಎಚ್ಚರವುಳ್ಳ, ಜಾಗ್ರತ; ಅವಿಶ್ರಾಂತ. ಉದಾ:— ಅತಂದ್ರಿತವಾದ ಅಧ್ಯಯನ. [ಸಂ. ಅ = ಇಲ್ಲ + ತಂದ್ರೀ = ತೂಕಡಿಕೆ]

೪. ತುರುವು (ಅ) ಟೊಳ್ಳುಮಾಡು, ಒಳಗೆ ಹೆರೆ; ತುರಿದ ಕಾಯಿ. ಉದಾ:— ತುರುವಿದ ಕರಟ. [ದೇಶ್ಯ ತುರಿ = ಕೆರೆ]

೫. ತುಮುಲ (ಅ) ಗೊಂದಲ, ಕೋಲಾಹಲ; ಕ್ಷೋಭೆ, ದೊಂಬಿ. ಉದಾ:— ಸಭೆಯಲ್ಲಿ ತುಮುಲವೆದ್ದಿತು. [ಸಂ.]

೬. ಮಾರೊಡ್ಡು (ಇ) ಎದುರು ಬೀಳು, ಎದುರಿಸಿ ನಿಲ್ಲು, ಪ್ರತಿಭಟಿಸು; ಎದುರಾಳಿ ಸೈನ್ಯ. ಉದಾ:— ನಿಂದೆಗೆ ಎದುರೊಡ್ಡಿ ಮಾತಾಡಿದನು. [ದೇಶ್ಯ. ಎದುರು + ಒಡ್ಡು]

೭. ಅವಶ (ಅ) ತನ್ನಿಚ್ಛೆಯಿಲ್ಲದೆ, ಪರಾಧೀನನೆಂಬಂತೆ. ಉದಾ:— ಪರಿಸ್ಥಿತಿಯಿಂದ ಅವಶನಾಗಿ ಕದ್ದನು. [ಸಂ. ಅ = ಇಲ್ಲ + ವಶ = ಅಂಕೆ]

೮. ಶರೀರಯಾತ್ರೆ (ಈ) ಜೀವನೋಪಾಯ, ಬದುಕುವುದಕ್ಕಾಗಿ ಮಾಡುವ ಕೆಲಸ. ಉದಾ:— ಶರೀರಯಾತ್ರೆಗಾಗಿ ಹಮಾಲಿ ಕೆಲಸ ಹಿಡಿದ. [ಸಂ. ಶರೀರ = ದೇಹ + ಯಾತ್ರಾ = ಸಾಗುವಿಕೆ]

೯. ಮಿಟಕಲಾಡಿ (ಈ) ವಯ್ಯಾರಿ. ಸೋಗಲಾಡಿ; ನಟನೆಯ ಒಳ್ಳೇತನ ಅಥವಾ ದುಃಖ ತೋರಿಸುವವಳು. ಉದಾ:— ಮಿಟಕಲಾಡಿಯ ಮಾತು ನಂಬಿ. [ಕನ್ನಡ – ಮಿಟಕು = ರೆಪ್ಪೆ ಬಡಿ]

೧೦. ಲೋಕಾಭಿರಾಮ (ಇ) ಏನೂ ಉದ್ದೇಶವಿಲ್ಲದ, ಸಹಜವಾದ, ಹೀಗೆಯೇ. ಉದಾ:— ಲೋಕಾಭಿರಾಮವಾಗಿ ಮಾತಾಡುವಾಗ ಗುಟ್ಟು ಹೊರಬಿತ್ತು. [ಸಂ. ಲೋಕ = ಜನ + ಅಭಿರಾಮ = ಮೆಚ್ಚುಗೆ]

೧೧. ಫೊಂಕ (ಅ) ಗರ್ವ, ಬಿಂಕ, ಹಮ್ಮು. ಉದಾ:— ಫೊಂಕ ಇಳಿದು ಹೋಯಿತು. [ಕನ್ನಡ]

೧೨. ಹರಾಮ (ಅ) ದುಷ್ಕರ್ಮ, ಅಕಾರ್ಯ; ಅನುಚಿತ; ದುಷ್ಕರ್ಮಿ, ಪಾತಕಿ. ಉದಾ:— ಹರಾಮ ಕೆಲಸಕ್ಕೆ ಇಳಿದ. [ಉರ್ದು, ಅರಬ್ಬಿ]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬-೮ | ಸರಿಯಿದ್ದರೆ | ... | ಸಾಧಾರಣ |
| ೯-೧೦ | ,, | ... | ಉತ್ತಮ |
| ೧೧-೧೨ | ,, | ... | ಅತ್ಯುತ್ತಮ |

# ಜ್ಯೋತಿಷ ಶಾಸ್ತ್ರವು ವೈಜ್ಞಾನಿಕವೆ?

ಡಾ. ಎಸ್. ಬಾಲಚಂದ್ರರಾವ್

ಕಸ್ತೂರಿಯ ಎಪ್ರಿಲ್ ೧೯೮೬ ರ ಸಂಚಿಕೆಯಲ್ಲಿ ಪ್ರಕಟವಾದ "ಜ್ಯೋತಿಷ್ಯವೊಂದು ಶಾಸ್ತ್ರವೊ? ಕಲೆಯೊ?" ಎಂಬ ಸೀತಾರಾಮ ಪಾಟೀಲರ ಲೇಖನವನ್ನು ಓದಿದಾಗ, ಜ್ಯೋತಿಷದ ಬಗ್ಗೆ ನನ್ನಲ್ಲಿ ಉಂಟಾದ ಅನಿಸಿಕೆಗಳನ್ನು—ಈ ಹಿಂದೆ ಬಹಳಷ್ಟು ವರ್ಷಗಳ ಕಾಲ ಜ್ಯೋತಿಷದ ಬಗ್ಗೆ ನಾನು ನಡೆಸಿದ ಆಳವಾದ ಅಧ್ಯಯನದ ಅನುಭವದ ಹಿನ್ನೆಲೆಯಲ್ಲಿ — ವಿಚಾರವಂತ ಓದುಗರ ಮುಂದೆ ಇರಿಸಲು ಇಷ್ಟಪಡುತ್ತೇನೆ.

ಜ್ಯೋತಿಷ ಶಾಸ್ತ್ರದ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯ ಹಾಗೂ ಪ್ರತಿಯೊಂದು ದೇಶದ ಆಗು-ಹೋಗುಗಳನ್ನು ನಮ್ಮ ಸೌರಮಂಡಲದ ಗ್ರಹಗಳು ನಿಯಂತ್ರಿಸುತ್ತವೆ ಅಥವಾ ಸೂಚಿಸುತ್ತವೆ. ಜ್ಯೋತಿಷದಲ್ಲಿ ನಮ್ಮ ಜನತೆಗೆ ಎಷ್ಟು ಗಾಢವಾದ ವಿಶ್ವಾಸವೆಂದರೆ, ಪ್ರತಿಯೊಂದು ವೈಯುಕ್ತಿಕ ವಿಷಯಕ್ಕೂ ಸಲಹೆಗಾಗಿ ತಮ್ಮ ಜಾತಕವನ್ನು ಹಿಡಿದುಕೊಂಡು ಜ್ಯೋತಿಷಿಗಳಿಗೆ ಮೊರೆ ಹೋಗುತ್ತಾರೆ. ನಮ್ಮ ಸಮಾಜದಲ್ಲಿ ಒಬ್ಬ ವ್ಯಕ್ತಿಯು ಹುಟ್ಟಿದಾರಭ್ಯ ಸಾಯುವ ತನಕ ಜ್ಯೋತಿಷಿಗಳ ಕೈವಾಡ ಬಹುತೇಕ ಇರುತ್ತದೆ. ವಿಶೇಷವಾಗಿ ನಮ್ಮಲ್ಲಿ ಹೆಚ್ಚು ಕಡಿಮೆ ಎಲ್ಲರಿಗೂ ಕರ್ಮಸಿದ್ಧಾಂತ ಮತ್ತು ಪುನರ್ಜನ್ಮಗಳಲ್ಲಿ ಅಚಲವಾದ ನಂಬಿಕೆಯಿರುವುದರಿಂದ, ಈ ಸಿದ್ಧಾಂತಗಳ ಮತ್ತು ಜ್ಯೋತಿಷದ ಗಾಢವಾದ ಪರಿಣಾಮವೆಂದರೆ ನಮ್ಮ ಜನರಲ್ಲಿ ಬಹಳ ಸಹಜವಾಗಿ ಮೂಡಿಬಂದಿರುವ ನಿರಾಶಾವಾದ, ನಿಷ್ಕ್ರಿಯತೆ ಹಾಗೂ ಇದರಿಂದ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗಳಿಗೆ ಒಳಗಾಗುತ್ತಿರುವ "ದುರ್ಬಲ" ವರ್ಗದವರು ತಮ್ಮ ಅಸಂಖ್ಯಾತ ಕಷ್ಟಗಳ ಸಂಕೋಲೆಗಳನ್ನು ಕಿತ್ತೊಗೆಯಬೇಕಾದ ಅವಶ್ಯಕತೆಯನ್ನೂ ಮನಗಾಣದಷ್ಟು ಅಸಹಾಯಕರೂ ನಿರ್ವೀರ್ಯರೂ ಆಗಿದ್ದಾರೆ. ಇಷ್ಟೊಂದು ಬಡತನ ಮತ್ತು ಅಜ್ಞಾನ ತುಂಬಿ ತುಳುಕಾಡುತ್ತಿದ್ದರೂ, ಈ ದೇಶದಲ್ಲಿ ಯಾವ ರೀತಿಯ ಕ್ರಾಂತಿಯಾಗುವ ಲಕ್ಷಣಗಳೂ ಕಾಣದೇ ಇರುವುದಕ್ಕೆ ಮುಖ್ಯವಾದ ಕಾರಣವೆಂದರೆ ಕರ್ಮಸಿದ್ಧಾಂತ, ಪುನರ್ಜನ್ಮ, ವಿಧಿ ಹಾಗೂ ಜ್ಯೋತಿಷಗಳಲ್ಲಿ ಇರಿಸಿರುವ ಅಗಾಧವಾದ ವಿಶ್ವಾಸ!

ನಿಜವಾದ ಪರಿಸ್ಥಿತಿಯೆಂದರೆ, ನಮ್ಮ ಜ್ಯೋತಿಷಿಗಳು ಅವರ ಶಾಸ್ತ್ರದ ತೀವ್ರವಾದ ದೋಷಗಳನ್ನೂ ಅವ್ಯಾಪಕತೆಯನ್ನೂ ಅವೈಜ್ಞಾನಿಕತೆಯನ್ನೂ ಆದಷ್ಟು ಬೇಗ ಮನಗಾಣಬೇಕು. ಹಾಗೆ ಮನಗಂಡ ಪಕ್ಷದಲ್ಲಿ, ಪ್ರಾಮಾಣಿಕವಾಗಿ ತಮ್ಮ ವೃತ್ತಿಯನ್ನು ಕೈಬಿಡಬೇಕು!

ಇನ್ನು, ನಮ್ಮ ಭಾರತೀಯ ಜ್ಯೋತಿಷ

ಶಾಸ್ತ್ರಕ್ಕೆ ಆಧಾರವಾದರೂ ಏನು? ನಮ್ಮ ಸಂಪ್ರದಾಯವಾದಿಗಳ ಪ್ರಕಾರ, "ಋಷಿಮೂಲ"ವಾದ ಈ ಶಾಸ್ತ್ರದ ಬಗ್ಗೆ ಪ್ರಶ್ನಿಸುವುದೂ ಒಂದು ಮಹಾ ಪಾಪವಾದೀತು! ಪ್ರಾಚೀನ ಭಾರತೀಯ ಜ್ಯೋತಿಷದ ದ್ರಷ್ಟಾರರು ವೈಜ್ಞಾನಿಕ ಮಾರ್ಗವನ್ನು ಅನುಸರಿಸಿದ್ದರು ಎಂಬುದು ಸತ್ಯಕ್ಕೆ ಬಹು ದೂರವಾದ ಮಾತು. ನಿಜಾಂಶವೆಂದರೆ, ಭಾರತೀಯ ಫಲ ಜ್ಯೋತಿಷವು ಹುಸಿ ಗಣಿತ ಸೂತ್ರಗಳನ್ನೊಳಗೊಂಡ ಆಧಾರರಹಿತ 'ನಿಯಮ'(Rules)ಗಳನ್ನು ಹೇಳುವ ಒಂದು ಕಂತೆ. ಈ ಶಾಸ್ತ್ರದ ಪ್ರವರ್ತಕರಾದರೋ ಪರಾಶರ, ಜೈಮಿನಿ, ವರಾಹಮಿಹಿರ ಮುಂತಾದವರು. ಅವುಗಳಲ್ಲಿ ಎಷ್ಟೋ ಹುಸಿ-ನಾಮಧೇಯಗಳೂ (pseudonyms) ಇರಲು ಸಾಧ್ಯ! ಪ್ರಸಿದ್ಧರಾದ ಋಷಿಗಳ, ಆಚಾರ್ಯರುಗಳ ಹಾಗೂ ಕವಿಗಳ ಹೆಸರುಗಳ ಮರೆಯಲ್ಲಿ ಮುಂದಿನವರು ಗ್ರಂಥಗಳನ್ನು ರಚಿಸಿ ಪ್ರಕಟಿಸುವುದು ನಮ್ಮ ಭಾರತೀಯರ ಹವ್ಯಾಸವಷ್ಟೆ! ಪ್ರಪಂಚದ ಇತರ ಭಾಗಗಳಲ್ಲಿ "ಕೃತಿಚೌರ್ಯ"ವು ಒಂದು ಹವ್ಯಾಸವಾದರೆ, ಸಂಪ್ರದಾಯಕರಾದ ಭಾರತೀಯರಿಗೆ "ನಾಮಚೌರ್ಯ"ವು ಒಂದು ಪಿಡುಗು.

ಜ್ಯೋತಿಷ ಶಾಸ್ತ್ರದಲ್ಲಿರುವ ಬೇರೆ ಬೇರೆ ಪದ್ಧತಿಗಳು ಮತ್ತು ನಿಯಮಗಳು ಒಂದಕ್ಕೊಂದು ವಿರೋಧಾಭಾಸವಾಗಿರುವುದು ಎಲ್ಲಾ ಸುಶಿಕ್ಷಿತ ಜ್ಯೋತಿಷಿಗಳಿಗೂ ತಿಳಿದ ವಿಷಯವೇ. ಇದು ಖಂಡಿತವಾಗಿಯೂ ವಿಜ್ಞಾನದ ಲಕ್ಷಣವಲ್ಲ. ಇಂತಹ ವಿರೋಧಾಭಾಸದ ಪರಿಣಾಮವಾಗಿ, ಒಂದೇ ಜಾತಕದಿಂದ ಒಂದಕ್ಕೊಂದು ಹೊಂದಾಣಿಕೆಯಿಲ್ಲದಂತೆ ನಮ್ಮ ಬಹಳ ಮೇಧಾವಿ ಜ್ಯೋತಿಷಿಗಳೂ ಭವಿಷ್ಯ ನುಡಿಯುವುದು ಸರ್ವಸಾಧಾರಣವಾದ ಅನುಭವ. ಆ ಮೇಲೆ ಹೇಳುವ ಸಮಾಧಾನ "ಪಂಚ ಭವತಿ ಪಂಚ ನ ಭವತಿ"! ಅಥವಾ, "ಕೋ ವಕ್ತಾ ತಾರತಮ್ಯಸ್ಯ ತಮೇಕಂ ವೇಧಸಂ ವಿನಾ"!! ಇಂತಹ ಗೊಂದಲಕ್ಕೆ ಜ್ಯೋತಿಷ ಶಾಸ್ತ್ರದ ಅಸ್ಥಿರತೆ ಮತ್ತು ಐಬು ಕಾರಣವೇ ಹೊರತು ಸಾಮಾನ್ಯರು ನಂಬಿರುವಂತೆ ಕೆಲವು ಜ್ಯೋತಿಷಿಗಳ ಶಾಸ್ತ್ರದ ಅಜ್ಞಾನವಲ್ಲ.

ಇನ್ನು ನಮ್ಮ ಜ್ಯೋತಿಷ ಶಾಸ್ತ್ರದಲ್ಲಿರುವ "ನವಗ್ರಹ"ಗಳ ಪಟ್ಟಿಯಲ್ಲಿ ನಾಲ್ಕು ಗ್ರಹಗಳೇ ಅಲ್ಲ — ಸೂರ್ಯನು ಒಂದು ನಕ್ಷತ್ರ, ಚಂದ್ರನು ಭೂಮಿಯ ಸುತ್ತ ತಿರುಗುವ ಒಂದು ಉಪಗ್ರಹ ಹಾಗೂ ರಾಹು–ಕೇತುಗಳು ಯಾವ ಭೌತಿಕ ಅಸ್ತಿತ್ವವನ್ನೂ ಹೊಂದಿರದ ಕಾಲ್ಪನಿಕ ಬಿಂದುಗಳು! ಹಿಂದಿನ ಮತ್ತು ಈ ಶತಮಾನಗಳಲ್ಲಿ ಪಾಶ್ಚಿಮಾತ್ಯ ಖಗೋಲ ವಿಜ್ಞಾನಿಗಳಿಂದ ಕಂಡುಹಿಡಿಯಲಾದ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೊ ಗ್ರಹಗಳು ಮನ್ನಣೆಯನ್ನು ಪಡೆಯಲು ಇನ್ನೂ ನಮ್ಮ ಭಾರತೀಯ ಜ್ಯೋತಿಷಿಗಳ ಮನೆಯ ಬಾಗಿಲನ್ನು ತಟ್ಟುತ್ತಲೇ ಇದ್ದಾವೆ. ಆದರೆ ತಮಾಷೆಯ ವಿಷಯವೆಂದರೆ, ಕೆಲವು ಉತ್ಸಾಹೀ ಅಂಧಾಭಿಮಾನೀ ಸಂಪ್ರದಾಯವಾದಿಗಳು ಈ ಮೂರು "ಮ್ಲೇಚ್ಛ" ಗ್ರಹಗಳನ್ನೂ ನಮ್ಮ ಪವಿತ್ರ ಸನಾತನ ಧರ್ಮಕ್ಕೆ ಮತಾಂತರಿಸಿ, ಆ ಮೂರು ಗ್ರಹಗಳಿಗೆ ಕ್ರಮವಾಗಿ ಪ್ರಜಾಪತಿ (ಅಥವಾ ಇಂದ್ರ), ವರುಣ ಮತ್ತು ಯಮ (ಅಥವಾ ರುದ್ರ) ಎಂಬುದಾಗಿ ನಾಮಕರಣವನ್ನೂ ಮಾಡಿದ್ದಾರೆ. ಇನ್ನೂ ಉಳಿದಿರುವುದೆಂದರೆ ಒಬ್ಬ "ಅಭಿನವ ವರಾಹಮಿಹಿರ"ನಿಂದ ಬೃಹಜ್ಜಾತಕದಲ್ಲಿ ಈ ಗ್ರಹಗಳನ್ನು ಸಂಸ್ಕೃತ ಶ್ಲೋಕಗಳಲ್ಲಿ ಸೇರ್ಪಡಿಸುವುದು! ಇಷ್ಟಕ್ಕೇ ನಿಲ್ಲದೆ, ಈ ಮೂವರು ಗ್ರಹಗಳನ್ನು ವೇದಗಳಲ್ಲಿ ಋಷಿಗಳು ಉಲ್ಲೇಖಿಸಿದ್ದಾರೆಂತಲೂ ವಾದಿಸುವವರಿದ್ದಾರೆ! ಆದರೆ, ಸತ್ಯಾಂಶವೆಂದರೆ, ಸೂರ್ಯ ಚಂದ್ರರನ್ನು ಬಿಟ್ಟು ಸೌರವ್ಯೂಹದ ಗ್ರಹಗಳ ಬಗ್ಗೆ ವೇದಗಳಲ್ಲಾಗಲೀ ಅಥವಾ ಪ್ರಾಚೀನ ಖಗೋಲಗ್ರಂಥವಾದ "ವೇದಾಂಗ ಜ್ಯೋತಿಷ"ದಲ್ಲಾಗಲೀ ಯಾವ ಉಲ್ಲೇಖವೂ ಇಲ್ಲ.

ನಮ್ಮ ದೇಶದ ಇತಿಹಾಸದಲ್ಲಿ ಶೋಚನೀಯವೂ ಖಂಡನೀಯವೂ ಆದ ಒಂದು ಐತಿಹಾಸಿಕ ವೈಪರೀತ್ಯವೆಂದರೆ, ಪ್ರಾಚೀನ ಭಾರತೀಯರು ಗ್ರೀಕರ ತರ್ಕಬದ್ಧವೂ ಉಪಯುಕ್ತವೂ ಆದ ರೇಖಾಗಣಿತದ ಅದ್ಭುತ ಸಾಧನೆಗಳನ್ನು ಕಡೆಗಣಿಸಿ, ಗ್ರೀಸ್, ಚ್ಯಾಲ್ಡಿಯಾ ಮತ್ತು ಬ್ಯಾಬಿಲೋನಿಯಾ ದೇಶಗಳಿಂದ ಬಂದ ಬಹಳ ಅವೈಚಾರಿಕವೂ ಹುಸಿ-ವಿಜ್ಞಾನವೂ (Pseudo-science) ಆಗಿರುವ ಫಲ ಜ್ಯೋತಿಷವನ್ನು ಬಹಳ ಆದರದಿಂದ ಸ್ವಾಗತಿಸಿದರು.

"ಸೂರ್ಯಮಂಡಲದಲ್ಲಿ ಉಂಟಾಗುವ ಕ್ರಿಯೆಗಳು ವಿದ್ಯುದಯಸ್ಕಾಂತ ವಲಯಗಳ ಬದಲಾವಣೆಗಳ ಮೂಲಕ ಜೀವಿಗಳ ಮೇಲೆ ಪರಿಣಾಮ ಬೀರುತ್ತವೆ" ಎಂಬ ನಮ್ಮ ಸ್ವಯಂಘೋಷಿತ "ಅಭಿನವ ವರಾಹಮಿಹಿರ"ರ ಟೊಳ್ಳು ವಿಜ್ಞಾನ ವಾದವು ಜ್ಯೋತಿಷ ಶಾಸ್ತ್ರಕ್ಕೆ ಯಾವ ಆಧಾರವನ್ನೂ ನೀಡಲಾರವು. ಬಹಳ ದೂರದಲ್ಲಿರುವ– ಭೌತಿಕವಾಗಿಯೂ ಯಾವ ಹೆಚ್ಚು ಪರಿಣಾಮವನ್ನು ಬೀರಲಾರದ — ಗ್ರಹಗಳು ಬೇರೆ ಬೇರೆ "ಮನೆ"ಯಲ್ಲಿರುವದರಿಂದ ಒಬ್ಬ ವ್ಯಕ್ತಿಯು ಲಾಟರಿಯಲ್ಲಿ ಗೆಲ್ಲುವುದನ್ನೊ, ವಿದೇಶ ಯಾತ್ರೆಯನ್ನು ಕೈಗೊಳ್ಳುವುದನ್ನೊ ಅಥವಾ ಎರಡು ಗಂಡುಮಕ್ಕಳ ತಂದೆಯಾಗುವುದನ್ನೋ ಹೇಗೆ ಸೂಚಿಸಬಲ್ಲವು ಎಂಬುದನ್ನು ನಮ್ಮ ಜ್ಯೋತಿರ್ವಿದಾಭರಣರುಗಳು ವೈಜ್ಞಾನಿಕವಾಗಿ ವಿವರಿಸಬಲ್ಲರೆ? ಬಹುಶಃ ಇದೆಲ್ಲವನ್ನೂ ಪರಾಶರಾದಿಗಳು ತಮ್ಮ ದಿವ್ಯ ದೃಷ್ಟಿಯಲ್ಲಿ ಕಂಡಿರಬೇಕು!

ಭೂಮಿಯ ಮೇಲಿರುವ ಜೀವಗಳ ಮೇಲೆ ಗ್ರಹಗಳು ಸಾಕಷ್ಟು ಪರಿಣಾಮ ಬೀರುತ್ತವೆ ಎನ್ನುವುದಕ್ಕೆ ವೈಜ್ಞಾನಿಕ ಆಧಾರಗಳನ್ನು ಒದಗಿಸಲು ಸೋತ ನಮ್ಮ ಖ್ಯಾತ "ಜ್ಯೋತಿರ್ವಿಜ್ಞಾನಿ"ಗಳ ಒಂದು ಹೊಸ ರೀತಿಯ ವಾದವು ಹೀಗಿದೆ : "ಕರ್ಮ ಮತ್ತು ಗ್ರಹಗಳ ನಡುವೆ ಇರುವ ಸಂಬಂಧವನ್ನು ಒಬ್ಬನ ದೇಹದ ಶಾಖ ಮತ್ತು ಉಷ್ಣಮಾಪಕಗಳ ಸಂಬಂಧಕ್ಕೆ ಹೋಲಿಸಬಹುದು. ಗ್ರಹಗಳು ಒಬ್ಬ ವ್ಯಕ್ತಿಯ ಪೂರ್ವಜನ್ಮದ ಹೊರೆಯನ್ನು ಸೂಚಿಸುತ್ತವೆಯೇ ಹೊರತು, ಅವುಗಳೇ ಯಾವ ಘಟನೆಗಳಿಗೂ ಕಾರಣವಾಗಿರಲಾರವು." ಹೀಗೆ ವೇದಾಂತದಲ್ಲಿ ಪ್ರತಿಪಾದಿತವಾದ ಕರ್ಮಸಿದ್ಧಾಂತವೇ ಜ್ಯೋತಿಷಕ್ಕೆ ತಾತ್ವಿಕ ಆಧಾರವೆಂದು ವಾದಿಸಲಾಗಿದೆ. ಒಂದು ವೇಳೆ ಕರ್ಮಸಿದ್ಧಾಂತವು ನಿಜವಾಗಿದ್ದರೂ, ಅದಕ್ಕೂ ಮತ್ತು ಒಂದು ಭೌತಿಕ ನಿಯಮಕ್ಕೊಳಪಟ್ಟು ತಿರುಗುವ ಕೇವಲ ಭೌತಿಕ (ಜಡ) ವಸ್ತುಗಳಾದ ಗ್ರಹಗಳಿಗೂ ಎಲ್ಲಿಯ ಸಂಬಂಧ? ನಿಜಾಂಶವೆಂದರೆ, ನಮ್ಮ ಜ್ಯೋತಿಷಿಗಳಿಗೆ ಆಧಾರವೆಂದರೆ ಪೂರ್ವಿಕರಿಂದ ರಚಿತವಾದ ಪರಾಶರ ಹೋರ, ಬೃಹಜ್ಜಾತಕ, ಫಲದೀಪಿಕಾ ಮುಂತಾದ ಕೆಲವು ಸಂಸ್ಕೃತ ಗ್ರಂಥಗಳು. ಪ್ರಾಚೀನ ಗ್ರಂಥಗಳಲ್ಲಿ ಹೇಳಿದೆ ಅಂದ ಮೇಲೆ ಅದನ್ನು ಪ್ರಶ್ನಿಸುವುದು ಅಧಿಕಪ್ರಸಂಗತನವಷ್ಟೆ! ಪ್ರಾಚೀನ "ಋಷಿಗಳ"ನ್ನು ಪ್ರಶ್ನಿಸುವವರು ನಾಸ್ತಿಕರೆನ್ನಿಸಿಕೊಳ್ಳುತ್ತಾರಷ್ಟೆ!

ಹಿಂದೆ ಮಾಡಿದ ಪಾಪಕರ್ಮಗಳ ಫಲಗಳನ್ನು ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ "ಸೂಕ್ತ ಪ್ರಾಯಶ್ಚಿತ್ತ"ಗಳ ಮೂಲಕ ತಪ್ಪಿಸಿ-ಕೊಳ್ಳಬಹುದು ತಾನೆ? ಅಷ್ಟೇ ಅಲ್ಲದೆ, ಪ್ರಕೋಪಗೊಂಡಿರುವ ಗ್ರಹಗಳನ್ನೂ 'ನವಗ್ರಹ ಶಾಂತಿ' ಮುಂತಾದವುಗಳಿಂದ ಉಪಶಮನ ಮಾಡಿ ಕೆಟ್ಟ ಫಲಗಳಿಂದ ಬಚಾವ್ ಆಗಲು ಸಾಧ್ಯವಂತೆ! ಇದನ್ನೆಲ್ಲಾ ನೋಡಿದಾಗ, ವಿಚಾರವಂತರಿಗೆ ಕರ್ಮಸಿದ್ಧಾಂತ ಮತ್ತು ಜ್ಯೋತಿಷಿಗಳ ಬಗ್ಗೆ ಸಂಶಯ ಬರುವುದು ಸಹಜ ತಾನೆ?

ಗ್ರಹಗಳ ಯೋಗಗಳು ಕೆಲವು ನಿಯತ ವರ್ಷ-ಗಳಿಗೊಮ್ಮೆ ಪುನರಾವರ್ತನೆಯಾಗುವಂತೆಯೇ ನಮ್ಮ ಜ್ಯೋತಿಷಿಗಳಿಗೂ ಇಪ್ಪತ್ತು ವರ್ಷಗಳಿ-ಗೊಮ್ಮೆ ತೀವ್ರವಾದ ಬುದ್ಧಿವಿಕಲ್ಪ ಮತ್ತು ವಾತೋನ್ಮಾದಗಳೂ ತಲೆದೋರುವಂತೆ ಕಾಣು

ತ್ತದೆ. ಹಿಂದೆ ೧೯೬೨ರ ಫೆಬ್ರುವರಿಯಲ್ಲಿ ಉಂಟಾದ "ಅಷ್ಟಗ್ರಹ ಕೂಟ"ದ ಪರಿಣಾಮವಾಗಿ ಭಾರಿ ಅನಾಹುತವೇ ಕಾದಿದೆಯೆಂದು ಸಾರ್ವಜನಿಕರಿಗೆ ನಮ್ಮ "ಜೋತಿರ್ವಿಜ್ಞಾನಿ"ಗಳು ಭಾರಿ ಬೆದರಿಕೆಯನ್ನು ಹಾಕಿದ್ದು ನಾವೆಲ್ಲಾ ಇನ್ನೂ ಮರೆತಿಲ್ಲ.

ಪುನಃ ಸರಿಯಾಗಿ ಇಪ್ಪತ್ತು ವರ್ಷಗಳ ನಂತರ ೧೯೮೨ರ ಫೆಬ್ರುವರಿಯಲ್ಲಿ ಭಯಂಕರವಾದ "ಭೂತ ಸಂಪ್ಲವ" (cataclysm) ಸಂಭವಿಸುವುದೆಂದು ನಮ್ಮ 'ಖ್ಯಾತ' ಜ್ಯೋತಿಷಿಗಳು ಬೊಬ್ಬೆ ಹಾಕಿದರು. ಈ ಭಾರೀ ಅನಾಹುತಕ್ಕೆ ನಮ್ಮ ಜ್ಯೋತಿಷಿಗಳು ಕೊಡುತ್ತಿದ್ದ ಕಾರಣವೆಂದರೆ, ಗುರುವೇ ಮುಂತಾದ ಗ್ರಹಗಳೆಲ್ಲಾ ಸೂರ್ಯನ ಒಂದು ಪಕ್ಕದಲ್ಲಿ "ಕ್ಯೂ"ನಲ್ಲಿ (ಜ್ಯೋತಿಷಿಗಳ ದಿವ್ಯದೃಷ್ಟಿಗೆ ಮಾತ್ರ ಕಾಣುವಂತೆ ಕೂಡಿಕೊಂಡು ಸೂರ್ಯನ ಇನ್ನೊಂದು ಪಕ್ಕದಲ್ಲಿ ನಮ್ಮ ಭೂಮಾತೆಯನ್ನು ಅನಾಥಳನ್ನಾಗಿ ಮಾಡುವುದಂತೆ !

ಈ ಎರಡು ಸಂದರ್ಭಗಳಲ್ಲೂ (೧೯೬೨ ಮತ್ತು ೧೯೮೨) ಯಾವ ಅನಾಹುತವೂ ನಡೆಯದಿದ್ದಾಗ ನಮ್ಮ ಜ್ಯೋತಿಷಿಗಳು ತಾವೆಯೇ ಪ್ರಾರ್ಥನೆ ಜಪ ಯಜ್ಞಗಳ ಮೂಲಕ ಉಂಟಾಗಬಹುದಾದ ಕಷ್ಟಗಳನ್ನು ನಿವಾರಿಸಿದರೆಂದು ತಮ್ಮ ಬೆನ್ನುಗಳನ್ನು ತಾವೇ ತಟ್ಟಿಕೊಂಡಲ್ಲಿ ಆಶ್ಚರ್ಯವೇನಿಲ್ಲ. ೧೯೬೨ರ ಅಷ್ಟಗ್ರಹಕೂಟದ ಪ್ರಳಯಾಂತಕಾರೀ ದುಷ್ಪರಿಣಾಮಗಳನ್ನು ನಿವಾರಿಸಲೆಂದು ನಮ್ಮ "ಜ್ಯೋತಿರ್ವಿಜ್ಞಾನಿ"ಗಳ ಮತ್ತು ಕ್ರಾಂತಿಕರ ಸಲಹೆಯ ಮೇರೆಗೆ ದೇಶದಾದ್ಯಂತ ಯಾಗಯಜ್ಞಗಳನ್ನು ಆಚರಿಸಿ, ಟನ್ನುಗಟ್ಟಲೆ ಧಾನ್ಯಗಳನ್ನು ಗ್ಯಾಲನ್ನುಗಟ್ಟಲೆ ತುಪ್ಪವನ್ನೂ ಬೆಂಕಿಗೆ ಸುರಿದಾಗ ನಮ್ಮ ಪ್ರಥಮ ಪ್ರಧಾನಿ ಜವಾಹರಲಾಲ ನೆಹರೂರವರು ನಮ್ಮ ಜನತೆಯ ಮೂಢನಂಬಿಕೆಗಳನ್ನು ತೀವ್ರವಾಗಿ ಖಂಡಿಸಿದ್ದನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು. ನಮ್ಮ ಜನತೆಯ ಬಹುಭಾಗಕ್ಕೆ ದಿನದಲ್ಲಿ ಒಂದು ಊಟವೂ ದೊರಕದಿರುವ ದಾರುಣ ಪರಿಸ್ಥಿತಿಯಲ್ಲಿ ಜ್ಯೋತಿಷಿಗಳ ಸಲಹೆಯಂತೆ ಯಥೇಚ್ಛ ಧಾನ್ಯಗಳನ್ನೂ ಮತ್ತು ತುಪ್ಪವನ್ನೂ ಬೆಂಕಿಯಲ್ಲಿ ಸುಟ್ಟು ನಾಶಮಾಡುವ ಈ ನಮ್ಮ "ಎಡವಟ್ಟು" ದೇಶ ಎತ್ತ ಸಾಗುತ್ತಿದೆಯೋ ಎಂದು ದಿಗ್ಭ್ರಮೆಯಾಗುತ್ತದೆ. ಈ ರೀತಿ ಹೊಟ್ಟೆಗಿಲ್ಲದ ದೇಶದಲ್ಲಿ ಆಹಾರ ಧಾನ್ಯಗಳನ್ನು ಟನ್ನುಗಟ್ಟಲೆ ಸುಡುವುದರಿಂದಲೇ ಸುಪ್ರೀತರಾಗುವ ಗ್ರಹಗಳಾಗಲಿ ದೇವರುಗಳಾಗಲೀ ಇರುವುದಾದ ಪಕ್ಷದಲ್ಲಿ ಅವರುಗಳಿಗೆ ಧಿಕ್ಕಾರ !

ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ, ಒಬ್ಬ ಪ್ರಸಿದ್ಧ ಜರ್ಮನ್ ಜ್ಯೋತಿಷಿಯು ಅದೇ ಕಾಲದ ಯಾವುದೋ ಒಂದು ನಿರ್ದಿಷ್ಟವಾದ ದಿನ ಮಹಾಪ್ರಳಯದಿಂದ ಪ್ರಪಂಚವೇ ನಾಶವಾಗುವುದೆಂದು ಭವಿಷ್ಯ ನುಡಿದಿದ್ದ. ಆ ನಿರ್ದಿಷ್ಟ ದಿನ ಯಾವ ಅನಾಹುತವೂ ಸಂಭವಿಸದೆ ಬೇರೆ ದಿನಗಳ ಹಾಗೆಯೇ ಕಳೆದಾಗ, ಆ ಜ್ಯೋತಿಷಿಯಾದರೋ ಪ್ರಶ್ನಿಸುವ ಸಾರ್ವಜನಿಕರಿಗೆ ತಲೆಬಾಗಿದನು – ಆತ್ಮಹತ್ಯೆ ಮಾಡಿಕೊಂಡನು! ಈ ಹಿಂದೆ ೧೯೮೦ ಜನವರಿಯಲ್ಲಿ ಜರುಗಿದ ಲೋಕಸಭೆಯ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ನಮ್ಮ ಪ್ರಖ್ಯಾತ ಜ್ಯೋತಿರ್ವಿಜ್ಞಾನಿಗಳು "ಜನತಾ ಸರಕಾರವು ಮುಂದುವರೆಯುವುದಷ್ಟೇ ಅಲ್ಲದೆ, ಇನ್ನೂ ಬಹಳ ಯಶಸ್ವಿಯಾಗಿ ಕಾರ್ಯನಿರ್ವಹಣೆ ಮಾಡುವುದು" ಎಂದು ಭವಿಷ್ಯ ನುಡಿದು ಮಣ್ಣುಮುಕ್ಕಿದರು! ನಮ್ಮ ಜ್ಯೋತಿಷಿಗಳಲ್ಲೇನಾದರೂ ಪ್ರಾಮಾಣಿಕತೆ, ಸ್ವಾಭಿಮಾನ ಮತ್ತು ಶಾಸ್ತ್ರನಿಷ್ಠೆ ಇದ್ದಿದ್ದರೆ, ಇವರಲ್ಲಿ ಒಬ್ಬೊಬ್ಬರೂ ಎಷ್ಟೆಷ್ಟೋ ಬಾರಿ ಆತ್ಮಹತೆ ಮಾಡಿಕೊಳ್ಳಬೇಕಾಗಿತ್ತು. ಆದರೆ, ನಮ್ಮ ಸನಾತನ ಧರ್ಮ ಹಾಗೂ ಪ್ರಾಚೀನ ಸಂಪ್ರದಾಯದ ಗುತ್ತಿಗೆದಾರರೆಂದುಕೊಂಡಿರುವ ಭಾರತೀಯ ಜ್ಯೋತಿಷಿಗಳಿಗೆ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಮನೋದೌರ್ಬಲ್ಯ ಹೇಗೆ ತಾನೆ

ಬರಲು ಸಾಧ್ಯ? ಇವರೆಲ್ಲ ಹುಟ್ಟು ವೇದಾಂತಿಗಳಷ್ಟೆ! ಇಂತಹ ಜ್ಯೋತಿಷಿಗಳ ಜಾಲಕ್ಕೆ ಸಿಕ್ಕಿ ಬಿದ್ದು ಆತ್ಮಶಕ್ತಿಯನ್ನು ಕಳೆದುಕೊಳ್ಳುತ್ತಿರುವ ದುರ್ಬಲ ಮನಸ್ಸಿನ ಜನತೆಯನ್ನು ಕುರಿತು ಬಹಳ ಸಂಕಟದಿಂದ ಉದ್ಗಾರವೆತ್ತಿದ ಆಚಾರ್ಯ ಶಂಕರರ ಈ ಮಾತು ಬಹಳ ಮಾರ್ಮಿಕವಾಗಿದೆ :

> ಅದ್ಯಾಷ್ಟಮೀತಿ ನವಮೀತಿ ಚತುರ್ದಶೀತಿ
> ಜ್ಯೋತಿಷ್ಕವಾಚೋಪವಸಂತಿ ಭಕ್ತ್ಯಾ ।
> ಶ್ರುತೇಸ್ತ್ವಹೋ ತತ್ತ್ವಮಸೀತಿ ವಾಕ್ಯಂ
> ನ ವಿಶ್ವಸಂತ್ಯದ್ಭುತವೇತದೇವ ॥
>
> –"ಮಹಾವಾಕ್ಯದರ್ಪಣಮು"

–ಇವತ್ತು ಅಷ್ಟಮಿ, ಇಂದು ನವಮಿ, ಈ ದಿನ ಚತುರ್ದಶೀ ಎಂದೆನ್ನುವ ಜ್ಯೋತಿಷ್ಕರ ಮಾತಿನಿಂದ ಭಕ್ತಿಯಿಂದ ಉಪವಾಸವನ್ನು ಆಚರಿಸುತ್ತಾರೆ. (ಆದರೆ) ಶ್ರುತಿಯ "ತತ್ತ್ವಮಸಿ" ಎಂಬ ವಾಕ್ಯದಲ್ಲಿ ವಿಶ್ವಾಸವನ್ನಿಡದಿರುವುದು (ನಿಜಕ್ಕೂ) ಆಶ್ಚರ್ಯವೇ ಸರಿ!

೧೯೮೦ರ ಫೆಬ್ರುವರಿ ೧೬ರಂದು ಉಂಟಾದ ಬಹಳ ಅಪರೂಪದ 'ಪೂರ್ಣಗ್ರಾಸ' ಸೂರ್ಯಗ್ರಹಣದ ಬಗ್ಗೆ ಪ್ರಪಂಚದ ನಾನಾ ಭಾಗಗಳ ವಿಜ್ಞಾನಿಗಳು ಬಹಳ ಉತ್ಸಾಹದಿಂದ ಬಹಳ ಉಪಯುಕ್ತವಾದ ಸಂಶೋಧನಾ ವಿವರಗಳ ಅಧ್ಯಯನದಲ್ಲಿ ತೊಡಗಿದ್ದಾಗ, ಬಹಳ ನಗೆಪಾಟಲಿನ ವಿಷಯವೆಂದರೆ, ನಮ್ಮ ಹುಸಿ–ಜ್ಯೋತಿರ್ವಿಜ್ಞಾನಿಗಳು ಮತ್ತು ಸಂಪ್ರದಾಯಶರಣರು ಗರ್ಭಿಣಿ ಸ್ತ್ರೀಯರ ಗರ್ಭಗಳ ಮೇಲೆ ಗ್ರಹಣದ ಪರಿಣಾಮಗಳ ಬಗ್ಗೆ ಜಿಜ್ಞಾಸೆ ನಡೆಸ ತೊಡಗಿದ್ದರು!

ಬೆಳೆಯುತ್ತಿರುವ ಗರ್ಭಗಳು ಆ ಸಂದರ್ಭದಲ್ಲಿ – ನಮ್ಮ ಪವಿತ್ರವಾದ ಭಾರತ ಭೂಮಿಯಲ್ಲಿ ಮಾತ್ರ–ಬಹಳ ತೊಂದರೆಯನ್ನು ಬಹುಶಃ ಅನುಭವಿಸಿರಬೇಕು! ಆದರೆ, ಅದು ರಾಹು–ಕೇತುಗಳ ಉಪಟಳದಿಂದಲ್ಲ, ಅಥವಾ ಗ್ರಾಸಗ್ರಸ್ತವಾದ ಸೂರ್ಯನಿಂದಲೂ ಅಲ್ಲ–ಅದಕ್ಕೆ ನಮ್ಮ ಜ್ಯೋತಿಷಿಗಳು ನಡೆಸಿದ ಸತತವಾದ ಅಪಪ್ರಚಾರದಿಂದ ಗರ್ಭಿಣಿ ಸ್ತ್ರೀಯರ ಮನಸ್ಸಿನ ಮೇಲೆ ಆದ ಆಘಾತವೇ ಕಾರಣ!

ಆ ಸೂರ್ಯಗ್ರಹಣದ ಸಂದರ್ಭದಲ್ಲಿ, ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಲು ಹೊರ ದೇಶಗಳಿಂದ ನಮ್ಮ ಪವಿತ್ರ ಭಾರತ ಭೂಮಿಗೆ ತಂಡೋಪತಂಡವಾಗಿ ಆಗಮಿಸಿದ ಉತ್ಸಾಹೀ ವಿಜ್ಞಾನಿಗಳ ಸೌಕರ್ಯವನ್ನು ನೋಡಿಕೊಂಡು ಅವರಿಗೆ ಪ್ರೋತ್ಸಾಹ ನೀಡಲು ವ್ಯವಧಾನವಿಲ್ಲದ ನಮ್ಮನ್ನಾಳುವ ಸಚಿವ ಮಹಾಶಯರುಗಳು (ತಮ್ಮ ಭ್ರಷ್ಟ ಜೀವನದ ಮಾಲಿನ್ಯವನ್ನು ನೀರಿನೊಂದಿಗೆ ಹಂಚಿಕೊಳ್ಳಲು?) "ಬ್ರಹ್ಮ ಸರೋವರ"ದಲ್ಲಿ ಮುಳುಗುವುದರಲ್ಲಿಯೂ "ಅದ್ಭುತ ಮಹಾಶಾಂತಿ ಮತ್ತು ಪೂರ್ಣಾಹುತಿ"ಗಳ ಕಾರ್ಯ–ಗೌರವದಲ್ಲಿಯೂ ತಲ್ಲೀನರಾಗಿದ್ದರು. ಇನ್ನು ನಮ್ಮ ಜ್ಯೋತಿಷಿಗಳಾದರೋ ಕೆಲವು ನಕ್ಷತ್ರಗಳಲ್ಲಿ ಹುಟ್ಟಿದ ನತದೃಷ್ಟರಿಗೆ ಸಾಕಷ್ಟು ಗಾಬರಿಯನ್ನು ಉಂಟುಮಾಡಿ, ಅನಂತರ ಉಪಶಮನದ ಉಪಾಯವನ್ನೂ ಸೂಚಿಸುವ "ಭಯಕೃತ್ ಭಯನಾಶನ"ದ ಆಟವನ್ನು ಆಡಿ ಸಂತೋಷಪಟ್ಟರು!

ಜ್ಯೋತಿಷದಿಂದ ನಮ್ಮ ಹಿಂದೂ ಸಮಾಜದ ಮೇಲೆ ನೇರವೂ ಪ್ರತ್ಯಕ್ಷವೂ ಆದ ದುಷ್ಪರಿಣಾಮವೆಂದರೆ ಮದುವೆಗಳ ವಿಷಯದಲ್ಲಿ ಒಂದು ನೆಂಟಸ್ತಿಕೆಯನ್ನು ಹೊಂದಿಸಬೇಕಾದರೆ ಗಂಡು ಮತ್ತು ಹೆಣ್ಣುಗಳ ಜಾತಕಗಳು ಸಾಕಷ್ಟು "ಗುಣ"ಗಳಿಂದ ಕೂಡಿಬರಬೇಕು (ಅಂತಹ ಗುಣಗಳ ಗರಿಷ್ಠ ಸಂಖ್ಯೆ ೩೬). ಹೀಗೆ, ಈಗಾಗಲೇ ಲೆಕ್ಕವಿಲ್ಲದಷ್ಟು ಜಾತಿ ಉಪಜಾತಿಗಳ ಗೊಂದಲ, ವ್ಯಾಪಾರೀ ಮನೋಭಾವವನ್ನು ಸೂಚಿಸುವ ಹಾಗೂ ಅಸಹಾಯಕರಾದ ಕನ್ಯಾಪಿತೃಗಳನ್ನು ಶೋಷಣೆ ಮಾಡುವ ವರದಕ್ಷಿಣೆಯ ಪಿಡುಗು, ಸಗೋತ್ರ ದೋಷ ಮುಂತಾದವುಗಳಿಂದ ಬಹಳ ಕಷ್ಟಕರ

ವಾದ ಮದುವೆಯ ಸಾಮಾಜಿಕ ಸಮಸ್ಯೆ ಈ ಜಾತಕಗಳ ಹುಚ್ಚಾಟದಿಂದ ಇನ್ನೂ ಜಟಿಲಗೊಂಡಿದೆ.

ಕೆಲವು ಹೆಣ್ಣುಮಕ್ಕಳು ಮೂಲ, ಜ್ಯೇಷ್ಠ ಮುಂತಾದ ಕೆಲವು 'ಕೆಟ್ಟ' ನಕ್ಷತ್ರಗಳಲ್ಲಿ ಹುಟ್ಟಿದ 'ಮಹಾಪಾಪ'ಕ್ಕಾಗಿ ತೆರಬೇಕಾದ ಜುಲ್ಮಾನೆ ಎಂದರೆ ಮದುವೆ ವಯಸ್ಸನ್ನು ಮೀರಿದ ಎಷ್ಟೋ ವರ್ಷಗಳ ನಂತರ ಕಷ್ಟಸಾಧ್ಯವಾದ ಮದುವೆಯನ್ನು ಇಷ್ಟವಿಲ್ಲದಿದ್ದರೂ ಮಾಡಿಕೊಂಡೋ ಅಥವಾ ಅವಿವಾಹಿತೆಯಾಗಿಯೇ ಉಳಿದು ತವರಿಗೆ ಹೊರೆಯಾಗಿ ಬದುಕುವುದು. ಇಷ್ಟೇ ಅಲ್ಲದೆ, "ತನ್ಮಧ್ಯೇ ಭೂತಸಂಚಾರಃ" ಎಂಬಂತೆ ಕುಜದೋಷದ ಸಮಸ್ಯೆ ಬೇರೆ. ಕುಜದೋಷವುಳ್ಳವರು ತಮ್ಮ ಮದುವೆ ಕೈಗೂಡಬೇಕಾದರೆ ಅಂತಹ ದೋಷವನ್ನೇ ಉಳ್ಳವರೊಂದಿಗೆ ನೆಂಟಸ್ತಿಕೆಗಾಗಿ ಎರಡನೇ ಸಾಲಿನಲ್ಲಿ ಕಾಯುತ್ತಾ ನಿಲ್ಲಬೇಕಾಗುತ್ತದೆ!

ಅವೈಜ್ಞಾನಿಕ ಜಾತಕ ಪದ್ಧತಿಯ ಹಾವಳಿಯಿಂದಾಗಿ ಎಷ್ಟೋ ಒಳ್ಳೆಯ ಮತ್ತು ಸಮರ್ಪಕವಾದ ನೆಂಟಸ್ತಿಕೆಗಳು ಕೈಬಿಟ್ಟು ಹೋಗುತ್ತವೆ. ಅದರ ಬದಲಾಗಿ, ದೈಹಿಕವಾಗಿಯೂ ಯಾವ ಹೊಂದಾಣಿಕೆಯೂ ಇಲ್ಲದ ಎಷ್ಟೋ ಎಡವಟ್ಟು ನೆಂಟಸ್ತಿಕೆಗಳು— ಜಾತಕಗಳು ಬಹಳ ಚೆನ್ನಾಗಿ 'ಕೂಡಿ'ಬರುವುದರ ದೆಸೆಯಿಂದ— ಕೈಗೂಡಿ ಅಂತಹ ದಂಪತಿಗಳ ದಾಂಪತ್ಯ ಜೀವನವು ನರಕಸದೃಶವಾಗುತ್ತಿರುವುದನ್ನು ನಮ್ಮ ಸಮಾಜದಲ್ಲಿ ಕಾಣುತ್ತಲೆ ಇದ್ದೇವೆ.

ಮೂಢನಂಬಿಕೆಗಳನ್ನೇ ತುಂಬಿಕೊಂಡಿರುವ ಅಪ್ರಾಮಾಣಿಕ, ಡಾಂಭಿಕ ಹಾಗೂ ಸ್ವಾರ್ಥಪರರಾದ ನಾಯಕರುಗಳಿಂದ, ಜ್ಯೋತಿಷಿಗಳಿಂದ ಮತ್ತು ಕಣ್ಣಿಗೆ ಮಣ್ಣೆರಚುವ "ಅವತಾರ" ಪುರುಷರುಗಳಿಂದ ಆವೃತ್ತವಾದ ವಿಷಮಯ ವಾತಾವರಣವನ್ನು ಹೋಗಲಾಡಿಸಬೇಕಾದರೆ, ವಿಜ್ಞಾನಿಗಳು, ವೈಚಾರಿಕರು ಮತ್ತು ವಿಚಾರಪರರಾದ ಪತ್ರಕರ್ತರು ಜ್ಯೋತಿಷವೇ ಮುಂತಾದ ಹುಸಿ-ವಿಜ್ಞಾನಗಳ ಟೊಳ್ಳುತನವನ್ನು ಮತ್ತು ಅವುಗಳಿಂದ ಉಂಟಾಗಬಹುದಾದ ಕೆಟ್ಟ ಮಾನಸಿಕ ಪರಿಣಾಮಗಳ ಬಗ್ಗೆ ಸಾಮಾನ್ಯ ಜನತೆಗೆ ತಿಳಿಯ ಹೇಳುವಂತಹ ಒಂದು ಹೋರಾಟವನ್ನೆ ಕೈಗೊಳ್ಳಬೇಕು. ಆಗ ಮಾತ್ರ ಜನಸಾಮಾನ್ಯರಲ್ಲಿ ಆತ್ಮವಿಶ್ವಾಸ, ಕಾರ್ಯಶೀಲತೆ, ವಿಚಾರಪರತೆ ಮತ್ತು ಅನ್ಯಾಯ ಹಾಗೂ ಶೋಷಣೆಯ ವಿರುದ್ಧ ಹೋರಾಡುವ ಕೆಚ್ಚು ಬರಲು ಸಾಧ್ಯ. ವೇದಾಂತ ಕೇಸರಿಯಾದ ಸ್ವಾಮಿ ವಿವೇಕಾನಂದರ ಈ ವಿವೇಕವಾಣಿಯು ಮೌಢ್ಯದಿಂದ ಬಳಲುತ್ತಿರುವ ನಮ್ಮೆಲ್ಲರನ್ನೂ ಬಡಿದೆಬ್ಬಿಸಿ ಕಾರ್ಯತತ್ಪರರನ್ನಾಗಿಸಲಿ— "ಜ್ಯೋತಿಷ ಮುಂತಾದ ಈ ಎಲ್ಲಾ ದುರ್ಬೋಧ ವಿಷಯಗಳು ಸಾಮಾನ್ಯವಾಗಿ ದುರ್ಬಲ ಮನಸ್ಸಿನ ಲಕ್ಷಣಗಳು; ಆದ್ದರಿಂದ, ಅವುಗಳು ನಮ್ಮ ಮನಸ್ಸಿನಲ್ಲಿ ಪ್ರಬಲವಾಗುತ್ತಿದ್ದಂತೆಯೇ ನಾವು ವೈದ್ಯಕೀಯ ತಜ್ಞರನ್ನು ಕಾಣಬೇಕು ಹಾಗೂ ಒಳ್ಳೆಯ ಆಹಾರವನ್ನು ಸೇವಿಸಬೇಕು ಮತ್ತು ಸಾಕಷ್ಟು ವಿಶ್ರಾಂತಿಯನ್ನು ಪಡೆಯಬೇಕು!" ❁



ಮನುಕುಲವು ಭೌತವಿಶ್ವವನ್ನು ಹತ್ತಾರು ದಾರಿಗಳಿಂದ ಬಗೆದು ನೋಡಿ ಅರಿಯಲು ಯತ್ನಿಸುತ್ತದೆ. ಆದರೆ ಮನುಷ್ಯ ಚೇತನಕ್ಕೆ ಪರಮಾನಂದದ ಅನುಭೂತಿಯನ್ನು ಇನ್ಯಾವ ವಿಜ್ಞಾನ ಭಾಗಕ್ಕಿಂತಲೂ ಜ್ಯೋತಿರ್ವಿಜ್ಞಾನವೇ ಹೆಚ್ಚಾಗಿ ನೀಡಬಲ್ಲದಲ್ಲದೆ, ಈ ವಿಶ್ವದಲ್ಲಿ ಮನುಷ್ಯ ತಾನೆಷ್ಟು ಕಿರಿಯನೆಂಬ ನಮ್ರತೆಯ ಅರಿವನ್ನೂ ಅದು ಮಾತ್ರ ನೀಡಬಲ್ಲದು.

–ಬ್ರೂಸ್ ಬ್ಲಿವೆನ್

# ಇದುವೆ ಜೀವ ಇದು ಜೀವನ

ಕರ್ನಾಟಕ ಗೃಹಮಂಡಳಿಯ ಅಧೀನದಲ್ಲಿದ್ದ ಬಾಡಿಗೆ ಮನೆಯಲ್ಲಿ ವಾಸಿಸುವ ನಾನು, ಪ್ರತಿ ತಿಂಗಳು ಬಾಡಿಗೆಯ ಹಣವನ್ನು ಗೃಹ ಮಂಡಳಿಯ ಹೆಸರಿನಲ್ಲಿ ಬ್ಯಾಂಕಿನಲ್ಲಿ ತುಂಬಿ, ಆ ಪಾವತಿಯನ್ನು ಫೈಲ್ ಮಾಡಿ ಇಡುತ್ತೇನೆ. ಕಾರಣ, ಸನಿಹದ ನಗರದಿಂದ ಮಂಡಳಿಯ ಆಫೀಸಿನ ಕಾರಕೂನರೊಬ್ಬರು ಪ್ರತಿ ತಿಂಗಳೂ ತಪ್ಪದೆ ತಪಾಸಣೆಗೆ ಬರುವುದು ಮತ್ತು ಈ ತಪಾಸಣೆಯ ಕೆಲಸವು ಸರಿಯಾಗಿ ನಡೆದಿದೆಯೆ ಎಂದು ಪರೀಕ್ಷಿಸಲು, ನಾಲ್ಕಾರು ತಿಂಗಳಿಗೊಮ್ಮೆ ಆಫೀಸರರೊಬ್ಬರು ಬರುವುದು ರೂಢಿಯಾಗಿದೆ.

ಒಂದು ಬಾರಿ ಈ ತಪಾಸಣೆಯ ಕೆಲಸಕ್ಕೆ ಬಂದ ಕಾರಕೂನ, ಎಳೆ ಮೀಸೆಯ ಯುವಕನಾಗಿದ್ದ. ನಾನು ತೋರಿಸಿದ ಪಾವತಿ ನೋಡಿ, ಅದರ ಮೇಲಿನ ಭಾಗದ ಎಡ ಮೂಲೆಯಲ್ಲಿ, 'ಸರ್, ನೋಟೆಡ್,' ಎಂದು ಇಂಗ್ಲೀಷಿನಲ್ಲಿ ಬರೆದು, ತನ್ನ ಕಿರು ಸಹಿ ಮಾಡಿ ಹೋದ. ಹೀಗೆ ನಾಲ್ಕು ತಿಂಗಳಾದ ನಂತರ, ತಪಾಸಣೆಯ ಕಾರ್ಯ ಪರೀಕ್ಷಿಸಲು ಬಂದ ಆಫೀಸರರು ಮಹಿಳೆಯಾಗಿದ್ದರು. ಆತ ಪ್ರತಿಯೊಂದು ಪಾವತಿಯ ಮೇಲೆ ಬರೆದಿದ್ದ, 'ಸರ್, ನೋಟೆಡ್,' ಎಂಬುದನ್ನು ನೋಡಿ, "ಇದೇನು ಅಸಂಬದ್ಧ?" ಎಂದು ಗೊಣಗಿದರು.

ನಂತರ ಮುಂದಿನ ತಿಂಗಳುಗಳಲ್ಲಿ ಆ ಕಾರಕೂನನು, ಪಾವತಿಯ ಮೇಲೆ, 'ಮೇಡಂ, ನೋಟೆಡ್,' ಎಂದು ಬರೆಯತೊಡಗಿದ.

ಮರು ವರ್ಷದ ಪ್ರಾರಂಭದಲ್ಲಿಯೇ ಪರೀಕ್ಷಿಸಲು ಬಂದ ಆಫೀಸರರು, ಮೊದಲು ಬಂದಿದ್ದ ಅದೇ ಪುರುಷ ಆಫೀಸರ್ ಆಗಿದ್ದರು. ಪಾವತಿಗಳ ಮೇಲೆಲ್ಲ, 'ಮೇಡಂ, ನೋಟೆಡ್,' ಎಂದು ಬರೆದಿದ್ದು ನೋಡಿ, ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರು.

ಈಗ ಆ ಕಾರಕೂನನಿಗೆ ಗೊಂದಲಕ್ಕಿಟ್ಟುಕೊಂಡಿರಬೇಕು. ಏಕೆಂದರೆ, ಮತ್ತೆ ಪರೀಕ್ಷಿಸಲು ಬರುವ ಆಫೀಸರರು, ಮಹಿಳೆಯೆ ಅಥವಾ ಪುರುಷನೆ ಎಂಬುದನ್ನು ಆತ ಅರಿಯಲಾರ. ಹೀಗಾಗಿ ಮುಂದಿನ ತಿಂಗಳುಗಳಲ್ಲಿ ಆತ, 'ಸರ್–ಮೇಡಂ, ನೋಟೆಡ್,' ಎಂದು ಬರೆಯುವ ಬದಲು, 'ಸರ್ ಎಂಡ್ ಮೇಡಂ, ನೋಟೆಡ್,' ಎಂದು ಬರೆಯತೊಡಗಿದ.

ಅದೇನು ಆ ಕಾರಕೂನನ ಗ್ರಹಚಾರವೊ, ಮುಂದಿನ ಬಾರಿ ಪರೀಕ್ಷಿಸಲು ಬಂದ ಆ ಆಫೀಸರರು, ಅದೇ ಮೊದಲಿನ ಪುರುಷ ಆಫೀಸರರಾಗಿದ್ದರು. ನಾನಿತ್ತ ಪಾವತಿಗಳನ್ನು ಪರೀಕ್ಷಿಸಿದ ಅವರು, ಇನ್ನೇನು ಆ ಕಾರಕೂನನನ್ನು ತರಾಟೆಗೆಳೆಯುವರೆಂದು ಭಾವಿಸಿದ್ದೆ. ಆದರೆ ಆ ಆಫೀಸರರು ಮುಗುಳ್ನಗುತ್ತ, "ಅರೇ! ನಾವೀರ್ವರೂ ಮದುವೆಯಾಗಲಿರುವ ವಿಷಯ ಅವರಿಗೆ ಹೇಗೆ ಗೊತ್ತಾಯ್ತು?" ಎಂದರು. –ವಿ. ಎಂ. ಜೋಶಿ

ಈಗ ಕೆಲವು ದಿನಗಳ ಹಿಂದೆ ಖಾಸಗಿ ಬಸ್ಸೊಂದರಲ್ಲಿ ಪ್ರಯಾಣಿಸುತ್ತಿದ್ದೆ. ಬಸ್ಸಿನಲ್ಲಿ ಬಹಳ ಮಂದಿ ಇದ್ದರು. ಜತೆಗೆ ಬಿಸಿಲಿನ ಝಳ. ನನ್ನ ಮುಂದಿನ ಸೀಟಿನಲ್ಲಿ ಮೂವರು ಭಾರಿ ಮೀಸೆಯ ಗೌಡರುಗಳು ಕುಳಿತು ವೀಳ್ಯ ಜಗಿಯುತ್ತಾ, ಜಗಿದ ವೀಳ್ಯದ ರಸವನ್ನು ಕಿಟಕಿಯಿಂದಾಚೆ ಪಿಚಕಾರಿ ಮಾಡುತ್ತಾ ಠೀವಿಯಿಂದ ಇದ್ದರು. ಅವರು ಪಿಚಕಾರಿ ಮಾಡಿದಾಗಲೆಲ್ಲಾ ನನಗೆ ಮುಜುಗರವಾಗುತ್ತಿದ್ದುದನ್ನು ಅವರು ಕಂಡರೂ ಕಾಣದಂತೆ ಗಮನಿಸುತ್ತಿದ್ದರು.

ಸ್ವಲ್ಪ ಹೊತ್ತಿನ ನಂತರ ಅವರಲ್ಲಿ ಇಬ್ಬರು ಬೀಡಿ ಹೊತ್ತಿಸಿ ಹೊಗೆ ಉಗುಳಲು ಪ್ರಾರಂಭಿದರು. ಹೊಗೆ ಹಿಂದಿನ ಸೀಟಿನಲ್ಲಿದ್ದ ನನಗೆ ಬಡಿಯಲು ಶುರುವಾಯಿತು. ಆಗ ನಾನು ಕರವಸ್ತ್ರದಿಂದ ಹೊಗೆ ಓಡಿಸಲು ಪ್ರಾರಂಭಿಸಿದೆ. 'ಧೂಮಪಾನ ಕೂಡದು' ಎಂಬ ಫಲಕವಿದ್ದರೂ ವ್ಯರ್ಥವಾಗಿತ್ತು. ಈ ಬಗ್ಗೆ ಅವರನ್ನು ಕೆಣಕಿ ಜಗಳವಾಡಲು ನಾನು ಸಿದ್ಧನಿರಲಿಲ್ಲ. ಅವರು ಹೊಗೆ ಬಿಟ್ಟಾಗಲೆಲ್ಲಾ ನಾನು ಜೋರಾಗಿ ಉಫ್ ಎಂದು ಊದಿ, ಹೊಗೆಯನ್ನು ಅವರ ಕಡೆಗೆ ಅಟ್ಟುತ್ತಿದ್ದೆ. ಆಗ ಇನೊಬ್ಬನು ವ್ಯಂಗ್ಯವಾಗಿ, "ಸ್ವಾಮಿಗಳಿಗೆ ಇದು ಹಿಡಿಸಿಲ್ವೆನೋ, ಆರಿಸ್ರಲಾ," ಎಂದು ನನ್ನ ಮುಖ ನೋಡಿದನು. ಆಗ

ನಾನು ನಸುನಗುತ್ತಾ, "ಇಲ್ರಪ್ಪಾ! ಬೀಡಿ ನಿಮ್ಮದು, ಸುಖ ನಿಮ್ಮದು, ಹೊಗೆ ಕೂಡಾ ನಿಮ್ಮದೇ. ಆದರೆ ನಿಮ್ಮ ಬಾಯಿಂದ ಬಿಟ್ಟ ಹೊಗೆ ಎಂಜಲಲ್ಲವೇ? ಆ ಎಂಜಲನ್ನು ನಾವು ನುಂಗಬೇಕೇ? ನಿಮ್ಮ ಬಾಯಿಯ ವಿಷ ಕ್ರಿಮಿಗಳು ನಮ್ಮ ಬಾಯಿಗೂ ಹೋದರೆ ನಿಮಗೆ ಆನಂದವೇ? ಪಾಪ! ನಿಮ್ಮ ಸುಖಕ್ಕೇ ಅಡ್ಡಿ ಬರಲು ನಾನ್ಯಾರು? ನಿಮ್ಮ ದುಡ್ಡು, ನಿಮ್ಮ ಮಜಾ...ಅಲ್ಲವೇ?" ಎಂದೆ. ಅವರುಗಳು ಒಂದು ಕ್ಷಣ ಮೌನವಾದರು. ಕೂಡಲೇ ಬೀಡಿಗಳನ್ನು ಆರಿಸಿ, "ಸ್ವಾಮಿ, ಕ್ಷಮಿಸಬೇಕು. ನಮಗೆ ಅರ್ಥವಾಯಿತು," ಎಂದರು.

ಬಸ್ಸು ಒಂದು ಹಳ್ಳಿಯಲ್ಲಿ ನಿಂತಾಗ ಅವರು ಇಳಿದು ಹೋದರು. ಹೋಗುವಾಗ, "ಸ್ವಾಮಿ, ನಿಮ್ಮ ಉದ್ಯೋಗವೇನು?" ಎಂದರು. "ನಾನು ಒಬ್ಬ ಮೇಷ್ಟ್ರು" ಎಂದೆನು. "ಅದಕ್ಕೆ ಸ್ವಾಮಿ, ನೀವು ನಮ್ಮನ್ನು ತಿದ್ದಿದಿರಿ," ಎಂದು ನಮಸ್ಕರಿಸಿ ಹೊರಟು ಹೋದರು.

—ಎಲ್. ಜಿ. ರಾಮರಾವ್

ಪುರಭವನದಲ್ಲಿ ಸಭೆಯೊಂದು ನಡೆಯುತ್ತಿದ್ದಿತು. ಮಾನ್ಯ ಸಚಿವರೊಬ್ಬರು ಅಧ್ಯಕ್ಷರಾಗಿದ್ದರು. ಖಾಸಗೀ ಗ್ರಂಥಾಲಯವನ್ನು ಸರ್ಕಾರವು ತನ್ನ ವ್ಯಾಪ್ತಿಗೆ ಒಳಪಡಿಸಿಕೊಂಡ ಸಂದರ್ಭ ಅದಾಗಿತ್ತು. ನನಗೂ ಆಮಂತ್ರಣ ವಿದ್ದುದರಿಂದ ನಾನೂ ಹೋಗಿದ್ದೆ.

ಅಧ್ಯಕ್ಷರ ಭಾಷಣ ಶುರುವಾಯಿತು. ಅವರು ತಮ್ಮ ಭಾಷಣದಲ್ಲಿ ತಾವು ವಿದೇಶ ಪ್ರವಾಸ ಕೈಗೊಂಡಿದ್ದು, ಅಲ್ಲಿ ಅವರ ಬಂಧುಗಳು ಅವರನ್ನು ಆದರಿಸಿದ್ದು, ಅವರ ಹುದ್ದೆಗಳು, ಮನೆಯ ವೈಭವ, ಅಳಿಯ ಮಗಳ ವಿಷಯ, ಮೊಮಕ್ಕಳ ಆಟ ಪಾಟ, ತಮ್ಮ ಹೆಂಡತಿಗೆ ನೆಗಡಿ ಜ್ವರ ಆದಾಗ ಅಳಿಯನ ಉಪಚಾರ, ಹೀಗೆ ಸಭೆಯಲ್ಲಿ ಅವರ ವಿದೇಶಾಲಾಪ ಅವ್ಯಾಹತವಾಗಿ ಸಾಗಿತ್ತು. ಆಗ ಮಂತ್ರಿಗಳಿಗೆ ಇನ್ನೊಂದು ಸಭೆಗೆ ಹೋಗುವ ಕಾರ್ಯಕ್ರಮ ತಟ್ಟನೆ ಜ್ಞಾಪಕವಾಯಿತೆಂದು ಕಾಣುತ್ತದೆ. ತಾವು ಈಗ ಮಾತನಾಡುತ್ತಿರುವ ಸಮಾರಂಭ ಯಾವುದು ಎಂದೇ ಮರೆತಂತಿತ್ತು. ಕೂಡಲೇ ಜೇಬಿನಿಂದ ಅಂದಿನ ಆಹ್ವಾನ ಪತ್ರಿಕೆಯನ್ನು ತೆಗೆದು, ಸಮಾರಂಭ ಯಾವುದೆಂದು ಓದಿಕೊಂಡು, ಇಂತಹ ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಿದ್ದಕ್ಕೆ ನಾನು ಆಭಾರಿ ಎಂದು ಹೇಳಿ ಕುಳಿತುಬಿಟ್ಟರು.

ಕಾರ್ಯದರ್ಶಿಗಳು ವಂದನೆಗಳನ್ನು ಸಲ್ಲಿಸಲು ಮುಂದೆ ಬಂದರು. ಅವರು ಸಭೆಯನ್ನುದ್ದೇಶಿಸಿ, "ಸಭಿಕರೇ, ಇಲ್ಲಿಯವರೆಗೂ ತಾವುಗಳು ಮಾನ್ಯ ಮಂತ್ರಿಗಳ ಭಾಷಣವನ್ನು ಕೇಳಿದಿರಿ. ಅವರು ಲೈಬ್ರರಿ ಚಳುವಳಿ, ಇದರ ಉಗಮ, ಇದರ ಸ್ಥಾಪಕರು, ಮನುಷ್ಯನ ಬೌದ್ಧಿಕ ವಿಕಾಸಕ್ಕೆ ಗ್ರಂಥಾಲಯಗಳ ಅವಶ್ಯಕತೆ, ಇಂದು ಅದರ ಪರಿಸ್ಥಿತಿ, ಗ್ರಂಥಾಲಯ ಹಾಗೂ ವಾಚನಾಲಯಗಳನ್ನು ಉತ್ತಮ ಪಡಿಸಲು ಸರಕಾರವು ಖಾಸಗಿಯವರಿಂದ ವಹಿಸಿಕೊಂಡ ಕ್ರಮ, ಅದರ ಬೆಳವಣಿಗೆಗಾಗಿ ಕೈಗೊಂಡ ಆರ್ಥಿಕ ಸಹಾಯ, ಎಲ್ಲವನ್ನೂ ವಿಶದವಾಗಿ ತಿಳಿಸಿಕೊಟ್ಟ ಮಂತ್ರಿಗಳವರಿಗೆ ನಾವುಗಳು ಎಷ್ಟು ಆಭಾರಿಯಾಗಿದ್ದರೂ ಸಾಲದು," ಎಂದರು.

ಸಭಿಕರು ಲಾರಿಗಳಲ್ಲಿ ತುಂಬಿಕೊಂಡು ಬಂದವರಲ್ಲ. ಎಲ್ಲರೂ ವಿಚಾರವಂತರು. ಕಾರ್ಯದರ್ಶಿಗಳ ಚಾತುರ್ಯವನ್ನು ಬಹುವಾಗಿ ಮೆಚ್ಚಿಕೊಂಡರು. ಜೋರಾಗಿ ಚಪ್ಪಾಳೆ ತಟ್ಟಿದರು. ಮಂತ್ರಿಗಳ ಮುಖ ಹೇಗಾಗಿರಬೇಕೆಂದು ಅವರ ಮುಖವನ್ನು ನೋಡಿದರೆ ಅವರು ಹಾಯಾಗಿ ತಮ್ಮ ಆಪ್ತ ಸಹಾಯಕರಿಗೆ ತಾವು ಹೋಗಬೇಕಾದ ಇನ್ನೊಂದು ಸಮಾರಂಭಕ್ಕಾಗಿ ಏನೋ ಸೂಚನೆ ಕೊಡುತ್ತಿದ್ದರು. ಕಾರ್ಯದರ್ಶಿಯವರ ಒಂದು ವಾಕ್ಯವನ್ನೂ ಅವರು ಕೇಳಿಸಿಕೊಂಡಿರಲಿಲ್ಲ. ಎಲ್ಲರೂ ಚಪ್ಪಾಳೆ ತಟ್ಟಿದ್ದನ್ನು ಕೇಳಿ ತಮ್ಮ ಸೂಚನೆಯನ್ನು ಅರ್ಧಕ್ಕೇ ನಿಲ್ಲಿಸಿ ತಾವೂ ಚಪ್ಪಾಳೆ ಹೊಡೆಯತೊಡಗಿದರು.

ಜನಗಳು ಇನ್ನೂ ಜೋರಾಗಿ ಚಪ್ಪಾಳೆ ತಟ್ಟಲಾರಂಭಿಸಿ ಹೋ ಎಂದು ನಗಲಾರಂಭಿಸಿದರು. ಮಾನ್ಯ ಮಂತ್ರಿ ಮಹೋದಯರು ಅವರೊಡನೆ ತಾವೂ ನಗಲಾರಂಭಿಸಿದರು.

ಮುಂದೆ ಇನ್ಯಾವ ಸಮಾರಂಭ ಕಾದಿತ್ತೋ ಏನೋ, ಹೊರಟೇಬಿಟ್ಟರು.

- ಶಾರದಾ ಶಾಮಣ್ಣ

ಮುನಿಯಾಲ್ ಗಣೇಶ ಶೆಣೈ

# ನ್ಯಾಶನಲ್ ಜಿಯಾಗ್ರಫಿಕ್: ಅನ್ವೇಷಣೆಗೊಂದು ಅನ್ವರ್ಥ ಹೆಸರು

ಹೊಸ ಹೊಸ ಸಂಗತಿಗಳನ್ನು ತಿಳಿಯಲು ಅಪೇಕ್ಷಿಸುವುದು ಮನುಷ್ಯನ ಸಹಜ ಸ್ವಭಾವ. ಶತಮಾನಗಳ ಹಿಂದಿನಿಂದಲೂ ಮನುಷ್ಯನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಪ್ರಯಾಣ ಮಾಡುತ್ತ, ಹೊಸ ಬಗೆಯ ಜನರನ್ನು ಸಂಸ್ಕೃತಿಯನ್ನು ಕಾಣುವಲ್ಲಿ ಆಸಕ್ತಿ ವಹಿಸುತ್ತ ಬಂದಿದ್ದಾನೆ. ಮಾರ್ಕೋ ಪೋಲೋ, ಹ್ಯುಯೆನ್ ತ್ಸಾಂಗ್. ವಾಸ್ಕೊ-ಡ-ಗಾಮ, ಕೊಲಂಬಸ್, ಡ್ರೇಕ್‌ರಂತಹ ಸಾಹಸಿಗಳು ನಮ್ಮ ಭೂಮಿಯ ಹೊಸ ಹೊಸ ಪ್ರದೇಶಗಳನ್ನು ಪತ್ತೆ ಹಚ್ಚಿದರು. ಕೊನೆಗೊಮ್ಮೆ ಇಡಿಯ ಪೃಥ್ವಿಯ ಸ್ಥೂಲ ಚಿತ್ರ ಎಲ್ಲರಿಗೂ ಸಿಗುವಂತಾದರೂ ಭೂಮಿಯ ಬಗೆಗೆ ಸಂಪೂರ್ಣ ಮಾಹಿತಿ ತಿಳಿಯಲು ಸಾಧ್ಯವಾಗಲಿಲ್ಲ, ಸಾಧ್ಯವಾಗಿಲ್ಲ. ಆಳ ಕಡಲಲ್ಲೇ ಒಂದು ಹೊಸ ಜಗತ್ತಿದ್ದರೆ, ವಿಶಾಲ ಮರುಭೂಮಿಗಳದು ಮತ್ತೊಂದು ಪ್ರಪಂಚ. ಬೇರೆ ಗ್ರಹಗಳಿಗೂ ಹೋಗಿ ಬರುವಷ್ಟು ಮುಂದುವರೆದಿರುವ ಮನುಷ್ಯನಿಗೆ ತನ್ನದೇ ಗ್ರಹದ ಧ್ರುವಪ್ರದೇಶಗಳ ಬಗೆಗೆ ಇನ್ನೂ ಆಳವಾದ ಅಜ್ಞಾನ.

ಭೂಮಿಯ ಬಗೆಗೆ ಇನ್ನೂ ಲಭ್ಯವಾಗದಿರುವ ಮಾಹಿತಿಗಳಿಗಾಗಿ ಸತತ ಅನ್ವೇಷಣೆ ನಡೆಸಬೇಕು; ಸಿಕ್ಕ ಮಾಹಿತಿಯನ್ನು ಎಲ್ಲರಿಗೂ ಒದಗಿಸಬೇಕು ಎಂಬ ಉದ್ದೇಶದಿಂದ ಕಳೆದ ಶತಮಾನದಲ್ಲಿ 'ನ್ಯಾಷನಲ್ ಜಿಯಾಗ್ರಫಿಕ್ ಸೊಸೈಟಿ'ಯನ್ನು ಕೆಲವು ಭೂಗೋಳ ತಜ್ಞರು, ವಿಜ್ಞಾನಿಗಳು ಸ್ಥಾಪಿಸಿದರು. ಈ ಸಂಸ್ಥೆ ಈಗ ತನ್ನ ನೂರನೆಯ ಹುಟ್ಟುಹಬ್ಬ ಕಾಣುತ್ತಿದೆ. ಪ್ರಪಂಚದಾದ್ಯಂತ ನಮ್ಮದೇ ಭೂಮಿಯ ಬಗೆಗಿನ ನಿಗೂಢ ಸಂಗತಿಗಳನ್ನು ಕಂಡುಹಿಡಿಯುತ್ತಿರುವ ಶ್ರೇಯಸ್ಸು ಈ ಸಂಸ್ಥೆಯದು.

ಸಂಸ್ಥೆಯ ಮಾಸಿಕ ಪತ್ರಿಕೆ 'ನ್ಯಾಷನಲ್ ಜಿಯಾಗ್ರಫಿಕ್' ಇಂದು ಪ್ರಪಂಚದ ಉತ್ಕೃಷ್ಟ ಪತ್ರಿಕೆಗಳಲ್ಲಿ ಒಂದು.

## ಸಾವಿನಂಚಿನಲ್ಲಿ ಸಾಧನೆಗಳು

ನ್ಯಾಷನಲ್ ಜಿಯಾಗ್ರಫಿಕ್ ಸಂಸ್ಥೆ ಆರಂಭವಾದಾಗ ಅಂತಹ ಒಳ್ಳೆಯ ಉತ್ತೇಜನವೇನೂ ಅದಕ್ಕೆ ಸಿಗಲಿಲ್ಲ. ಸಂಸ್ಥೆಯ ಎರಡನೆಯ ಅಧ್ಯಕ್ಷನಾಗಿ ಅಧಿಕಾರಕ್ಕೆ ಬಂದಾತ ಟೆಲಿಫೋನನ್ನು ಆವಿಷ್ಕರಿಸಿದ ವಿಜ್ಞಾನಿ ಅಲೆಗ್ಸಾಂಡರ್ ಗ್ರಹಾಂ ಬೆಲ್. ಈತ 'ನ್ಯಾಷನಲ್ ಜಿಯಾಗ್ರಫಿಕ್' ಪತ್ರಿಕೆಯ ಜನಪ್ರಿಯತೆಯನ್ನು ಮನಗಂಡು, ಪತ್ರಿಕೆಯನ್ನು ಅಂಗಡಿಗಳಲ್ಲಿ ಮಾರುವ ಪದ್ಧತಿಯನ್ನು ನಿಲ್ಲಿಸಿ ಸಂಸ್ಥೆಯ ಸದಸ್ಯರಿಗೆ ಮಾತ್ರ ತಲಪುವಂತೆ ಮಾಡಿದ. ಇದರ ಪರಿಣಾಮವಾಗಿ ಸಂಸ್ಥೆಯ ಸದಸ್ಯತ್ವ ತೀವ್ರವಾಗಿ ಹೆಚ್ಚಿತು. ಇಂದು ಸಂಸ್ಥೆಯ ಸದಸ್ಯರ ಸಂಖ್ಯೆ ಒಂದು ಕೋಟಿಗೂ ಮೀರಿದೆ. ಸಂಸ್ಥೆಗೆ ಈಗ ನೂರ ಎಂಬತ್ತು ದೇಶಗಳ ವಿಜ್ಞಾನಾಸಕ್ತರು ಸದಸ್ಯರಾಗಿದ್ದಾರೆ. ಇಂದು ಜಗತ್ತಿನ ಅತ್ಯಂತ ದೊಡ್ಡ ವೈಜ್ಞಾನಿಕ, ಶೈಕ್ಷಣಿಕ ಸಂಸ್ಥೆಯೆಂಬ ಕೀರ್ತಿ ನ್ಯಾಷನಲ್ ಜಿಯಾಗ್ರಫಿಕ್ ಸೊಸೈಟಿಯದು.




"ಹುಡುಗಿ ಚೆನ್ನಾಗಿದ್ದಾಳೆ ಅಂತ ತಕ್ಷಣ ಒಪ್ಪಿಕೊಂಡು ನಿನ್ನ ಬೆಲೆ ಕಳೆದುಕೊಳ್ಳಬೇಡ ಮೂರ್ಖಾ, ಲಕ್ಷ ವರದಕ್ಷಿಣೆ ಕೊಟ್ರೆ ಮಾಡ್ಕೋತೀನಿ ಅಂತ ಹೇಳು."

ಕೇವಲ ಪತ್ರಿಕಾ ಪ್ರಕಟನೆಯೊಂದೇ ಸಂಸ್ಥೆಯ ಗುರಿಯಲ್ಲ. ಇದು ಇನ್ನೂರಕ್ಕೂ ಹೆಚ್ಚು ಅನ್ವೇಷಣ–ಸಾಹಸ ಕಾರ್ಯಗಳಿಗೆ ನೆರವು ನೀಡಿದೆ. ಉತ್ತರ ಹಾಗೂ ದಕ್ಷಿಣ ಧ್ರುವ ಪ್ರದೇಶಗಳಿಗೆ ಈ ಸಂಸ್ಥೆ ತನ್ನ ಸಂಶೋಧಕರ ತಂಡವನ್ನು ಕಳುಹಿಸಿತ್ತು. ಮೂವತ್ತರ ದಶಕದಲ್ಲೇ ಸಂಸ್ಥೆಯ ಸಾಹಸಿಗಳು ಭೂತಾಕಾರದ ಬಲೂನುಗಳಲ್ಲಿ ನೆಲ ಮಟ್ಟದಿಂದ ಇಪ್ಪತ್ತೆರಡು ಕಿಲೋಮೀಟರು ಎತ್ತರದಲ್ಲಿ ಸಂಚರಿಸಿ, ಅಲ್ಲಿನ ವಾತಾವರಣದ ಬಗ್ಗೆ ಉಪಯುಕ್ತ ಮಾಹಿತಿಗಳನ್ನು ಸಂಗ್ರಹಿಸಿದರು. ಜ್ವಾಲಾಮುಖಿ + ಭೂಕಂಪಗಳ ಬಗೆಗೆ ಅಧ್ಯಯನ, ದಕ್ಷಿಣ ಅಮೇರಿಕದ ಪ್ರಾಚೀನ ಮಯ ನಾಗರಿಕತೆಯ ಅವಶೇಷಗಳಿಗಾಗಿ ಉತ್ಖನನ ಕಾರ್ಯ, ೧೯೬೩ರಲ್ಲಿ ಎವರೆಸ್ಟ್ ಶಿಖಾರೋಹಣ—ಇವೆಲ್ಲ ಸಂಸ್ಥೆಯ ಸಾಧನೆಗಳಲ್ಲಿ ಕೆಲವು.

ಈ ಶತಮಾನದ ಆರಂಭದಲ್ಲಿ ಸಂಸ್ಥೆಯ ಸಾಹಸಿ ಸಂಶೋಧಕರಿಗೆ ಭೂಮಿಯ ಯಾವುದೋ ಒಂದು ನಿಗೂಢ ಭಾಗವನ್ನು ತಲುಪಿ, ಅಲ್ಲಿಯ ಕುತೂಹಲಕರ ಸಂಗತಿಗಳನ್ನು ಗಮನಿಸಿ ಬರಲು ಹತ್ತು + ಹನ್ನೆರಡು ತಿಂಗಳು ಬೇಕಾಗುತ್ತಿತ್ತು. ಈಗ ವಿಮಾನಗಳು ಬಂದಿವೆಯಾದರೂ ಸಂಸ್ಥೆಯ ಸಂಶೋಧಕರ ಅಧ್ಯಯನ, ಪ್ರಯಾಣಕ್ಕೆ ತಗಲುವ ಸಮಯ ಕಡಿಮೆಯೇನೂ ಆಗಲಿಲ್ಲ. ಏಕೆಂದರೆ, ಈ ಅಧ್ಯಯನದ ಅವಧಿಯಲ್ಲಿ ಸಾವಿರಾರು ಪುಟಗಳ ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ. ಅಸಂಖ್ಯಾತ ಛಾಯಾಚಿತ್ರಗಳನ್ನು ತೆಗೆಯಬೇಕಾಗುತ್ತದೆ. ಸ್ವತಃ ಸಾಹಸ ಪ್ರವೃತ್ತಿಯವರೂ ಈಗ ಸಂಸ್ಥೆಯ ಹಿರಿಯ ಸಂಪಾದಕರೂ ಆಗಿರುವ ರಾಬರ್ಟ್ ಜೋರ್ಡಾನ್ ಹೇಳುತ್ತಾರೆ:

"ಪ್ರಪಂಚದ ಮಹಾ ಶೈಕ್ಷಣಿಕ ಕಾರ್ಯವಿದು.

VOL. 161, NO. 5 MAY 1982

NATIONAL GEOGRAPHIC

THE TEMPLES OF Angkor

WILL THEY SURVIVE? 548

ANCIENT GLORY IN STONE 552

KAMPUCHEA WAKENS FROM A NIGHTMARE 590

BIRDS THAT WALK ON WATER 624

PERTH—FAIR WINDS AND FULL SAILS 638

THE INCREDIBLE POTATO 668

'ನ್ಯಾಶನಲ್ ಜಿಯಾಗ್ರಾಫಿಕ್' ಮಾಸಿಕದ ಒಂದು ಮುಖಪುಟ

ಒಂದು ಕ್ಷಣವೂ ನಮಗೆ ಬೇಸರವಾಗುವುದಿಲ್ಲ. ಯಾವಾಗಲೂ ನಾವು ಅಪಾಯದ ಅಂಚಿನಲ್ಲೇ ಇರುತ್ತೇವೆ ಎನ್ನುವುದಕ್ಕೆ ಸೋಮಾಲಿಯಾದಲ್ಲಿ ನಾನು ಗೆರಿಲ್ಲಾ ಪಡೆಗಳಿಂದ ಗುಂಡೇಟಿನ ರುಚಿ ನೋಡಿದ್ದೇ ಇದಕ್ಕೆ ಸಾಕ್ಷಿ."

ಜೋರ್ಡಾನ್ ಅದೃಷ್ಟಶಾಲಿ. ಏಕೆಂದರೆ, ಸಂಸ್ಥೆಯ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಿದ ಅನೇಕರು ದುರ್ಮರಣಕ್ಕೆ ಗುರಿಯಾಗಿದ್ದಾರೆ. ತೀರ ಇತ್ತೀಚೆಗೆ ಹಿಮಾಲಯದ ಅನ್ನಪೂರ್ಣ ಶಿಖರಾರೋಹಣದಲ್ಲಿ ಮಗ್ನವಾಗಿದ್ದ ಅಮೇರಿಕದ ಮಹಿಳಾ ತಂಡವೊಂದರ ಇಬ್ಬರು ಸದಸ್ಯೆಯರು ಅತ್ಯಂತ ದಾರುಣ ರೀತಿಯಲ್ಲಿ ಅಪಘಾತಕ್ಕೀಡಾಗಿ ಸಾವನ್ನಪ್ಪಿದರು. ಆಫ್ರಿಕದ ಕಾಡುಮೇಡು ಸುತ್ತಿದ ಅನೇಕರ ಪಾಡೂ ಇದೇ ಆಗಿದೆ. ಕೆಲ ಕಾಲದ ಹಿಂದೆ ಅಮೇರಿಕದ ಡಯಾನ್ ಫೊಸ್ಸೆ ಎಂಬವಳು ರ್‍ವಾಂಡಾದ ಕಾಯ್ದಿಟ್ಟ ಅರಣ್ಯ ಸಂರಕ್ಷಣ ಕೇಂದ್ರದಲ್ಲಿ ನಿಗೂಢ ರೀತಿಯಲ್ಲಿ ಸತ್ತಿದ್ದಳು.

## ಪ್ರಕಟಣ ಸಾಹಸ

ಸಂಸ್ಥೆಯ ಮಾಸಪತ್ರಿಕೆ 'ನ್ಯಾಷನಲ್ ಜಿಯಾಗ್ರಫಿಕ್' ಇಂದು ಅತ್ಯಂತ ಜನಪ್ರಿಯ ಪತ್ರಿಕೆಗಳಲ್ಲಿ ಒಂದು. ಅಮೇರಿಕದ ಮಿಸ್ಸಿಸ್ಸಿಪಿಯಲ್ಲಿ ಈ ಪತ್ರಿಕೆಯ ಅಗಾಧ ಗಾತ್ರದ ಉತ್ಪಾದನೆ ಹಾಗೂ ವಿತರಣೆಯ ಕೇಂದ್ರಗಳಿವೆ. ಇಲ್ಲಿಂದ ಪತ್ರಿಕೆಯ ಒಂದು ಕೋಟಿಗೂ ಹೆಚ್ಚಿನ ಪ್ರತಿಗಳು ಪ್ರಪಂಚದ ನೂರೆಂಬತ್ತು ದೇಶಗಳಿಗೆ ಪ್ರಯಾಣ ಮಾಡುತ್ತವೆ. ೧೯೧೦ರ ಕಾಲದಲ್ಲೇ ಈ ಪತ್ರಿಕೆ ವರ್ಣ ಛಾಯಾಚಿತ್ರಗಳನ್ನು ಪ್ರಕಟಿಸಲು ಆರಂಭಿಸಿತ್ತು. ಅಂತರ್ಜಲ ಛಾಯಾಚಿತ್ರ, ಹಾಲೋಗ್ರಫಿಕ್ ಛಾಯಾಚಿತ್ರಗಳನ್ನು ಮೊಟ್ಟ ಮೊದಲಿಗೆ ಪ್ರಕಟಿಸಿದ ಕೀರ್ತಿ ಈ ಪತ್ರಿಕೆಯದು.

'ನ್ಯಾಷನಲ್ ಜಿಯಾಗ್ರಫಿಕ್'ನ ಜನಪ್ರಿಯತೆಯಿಂದ ಸ್ಫೂರ್ತಿಗೊಂಡ ಸಂಸ್ಥೆ ಎಳೆಯರಿಗಾಗಿ 'ವರ್ಲ್ಡ್ ಮ್ಯಾಗಝಿನ್,' ಪ್ರವಾಸಿಗರಿಗಾಗಿ 'ನ್ಯಾಷನಲ್ ಜಿಯಾಗ್ರಫಿಕ್ ಟ್ರಾವೆಲರ್ಸ್', ಹಾಗೂ 'ವಿಜ್ಞಾನಿಗಳಿಗಾಗಿ 'ನ್ಯಾಷನಲ್ ಜಿಯಾಗ್ರಫಿಕ್ ರಿಸರ್ಚ್' ಪತ್ರಿಕೆಗಳನ್ನು ಆರಂಭಿಸಿದೆ. ಸಂಸ್ಥೆ ಈ ಹಿಂದೆಯೇ 'ಸ್ಕೈ ಅಟ್ಲಾಸ'ನ್ನು ತಯಾರಿಸಿತು. ಈ ಸಂಸ್ಥೆ ತಯಾರಿಸುವ ಭೂಪಟಗಳು ಸುಲಭವಾಗಿ ಅರ್ಥವಾಗುವಂತೆ ಇರುತ್ತವೆ. ನ್ಯಾಷನಲ್ ಜಿಯಾಗ್ರಫಿಕ್ ಸಂಸ್ಥೆ ಪ್ರವಾಸಿ ಮಾರ್ಗದರ್ಶಿ, ಗ್ಲೋಬ್, ಚಲನಚಿತ್ರ ಮತ್ತು ವಿಡಿಯೊ ಚಿತ್ರಗಳನ್ನು ಸಹ ತಯಾರಿಸುತ್ತದೆ.

ಮೆಕ್ಸಿಕೋದ ದೂರ ಓಟಗಾರರಾದ ಟರಹು ಮಾರಿಗಳ ಬಗೆಗಾಗಲಿ, ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಅಮೇರಿಕದ ವಿಮಾನಗಳು ನಾಶಮಾಡಿ ಕಡಲಲ್ಲಿ ಮುಳುಗಿಸಿದ ಜಪಾನಿನ ಅರವತ್ತು ಹಡಗಗಳ ಇಂದಿನ ಪರಿಸ್ಥಿತಿಯ ಬಗೆಗಾಗಲಿ ಫ್ಲೋರಿಡಾದ ವಿಸ್ಮಯಕರ ಸಸ್ಯ-ಪ್ರಾಣಿಗಳ ಬಗೆಗಾಗಲಿ, ಹಾಂಗ್‌ಕಾಂಗಿನ ನಿರಾಶ್ರಿತರ ಬಗೆಗಾಗಲಿ ಅಥವಾ ರಾಜಸ್ಥಾನದ ಮರುಭೂಮಿಯ ಬಗೆಗಾಗಲಿ, ಅಷ್ಟೇ ಏಕೆ, ಭೂಮಿಯ ಯಾವುದೇ ಭಾಗದ ಜೀವಂತ ಅಥವಾ ನಿರ್ಜೀವ ವಸ್ತುಗಳ ಬಗೆಗಾಗಲಿ ಅಧಿಕೃತವಾದ ಮಾಹಿತಿ ಬೇಕಾದರೆ, ಸುಂದರವರ್ಣ ಚಿತ್ರಗಳನ್ನು ಕಾಣಬೇಕಾದರೆ 'ನ್ಯಾಷನಲ್ ಜಿಯಾಗ್ರಫಿಕ್' ಒಂದೇ ಸುಲಭವಾದ ಮಾರ್ಗದರ್ಶಿ. 

---

೩೬ ನೇ ಪುಟದ ಉತ್ತರಗಳು

### ಸರಿ ಉತ್ತರಗಳು

| | | | |
|---|---|---|---|
| ೧: | (ಅ) | ೬: | (ಅ) |
| ೨: | (ಆ) | ೭: | (ಇ) |
| ೩: | (ಆ) | ೮: | (ಇ) |
| ೪: | (ಇ) | ೯: | (ಇ) |
| ೫: | (ಅ) | ೧೦: | (ಅ) |

ಅರುಣ

# ಓಜೋನ್ ವಲಯ ಅದೃಶ್ಯವಾಗುತ್ತಿದೆ ?

ಭೂಮಿಯ ಮೇಲ್ಮೈಯಿಂದ ಸುಮಾರು ೧೮ ರಿಂದ ೨೬ ಕಿಲೋಮೀಟರು ಎತ್ತರದಲ್ಲಿ ಓಜೋನ್ ವಲಯವಿದೆ. ಓಜೋನ್ ಅತ್ಯಂತ ಪ್ರಭಾವಶಾಲಿ ಅನಿಲ. ಗಾಳಿಯಲ್ಲಿ ವಿದ್ಯುತ್ ಚಟುವಟಿಕೆಗಳ ಪರಿಣಾಮವಾಗಿ ಓಜೋನ್ ರೂಪುಗೊಳ್ಳುತ್ತದೆ. ಹೀಗಾಗಿ ಅದು ಅತ್ಯಂತ ಕ್ರಿಯಾಶೀಲ ವಾತಾವರಣದಲ್ಲಿ ಸಾಂಕ್ರಾಮಿಕ ಜಾಡ್ಯ ಹರಡುವ ಸೂಕ್ಷ್ಮಾಣುಗಳನ್ನು ಅದು ಕೊಲ್ಲುತ್ತದೆ. ವಾಯುಮಂಡಲದಲ್ಲಿ ಓಜೋನ್ ಅನಿಲದ ಸಾಂದ್ರತೆ ಮಟ್ಟ ಕಮ್ಮಿ ಇದೆ. ಬಾನಿಗೆ ನೀಲಿ ಬಣ್ಣ ಬರಲು ಓಜೋನ್ ಪದರು ಮುಖ್ಯ ಕಾರಣ.

ಸೂರ್ಯನಿಂದ ಭೂಮಿಯತ್ತ ಹೊರ ಹೊಮ್ಮುವ ಅತ್ಯಂತ ತೀಕ್ಷ್ಣ ನೀಲಾತೀತ (ಅಲ್ಟ್ರಾವಯೊಲೆಟ್) ಕಿರಣ ಪ್ರವಾಹದಿಂದ ಮಾನವ ಶರೀರಕ್ಕೆ ರಕ್ಷಣೆ ಒದಗಿಸುವ ಶಕ್ತಿ ಓಜೋನ್ ವಲಯದಲ್ಲಿದೆ. ಅಲ್ಟ್ರಾವಲೆಯೊಬ್ ಕಿರಣ ಮಿತಿ ಮೀರಿ ಶರೀರದ ಮೇಲೆ ದಾಳಿ ಮಾಡಿದರೆ ಅದು ಶರೀರದ ವಂಶವಾಹಿಗಳ ಕರ್ತವ್ಯವನ್ನು ತೀವ್ರವಾಗಿ ಅಸ್ತವ್ಯಸ್ತಗೊಳಿಸುತ್ತದೆ.

ಓಜೋನ್ ವಲಯ ಸಂಪೂರ್ಣ ಕಣ್ಮರೆಯಾದರೆ ಭೂಮಿಯ ಮೇಲಿರುವ ಸಕಲ ಜೀವರಾಶಿಗಳೂ ಸಾಯಬಹುದು.

ಓಜೋನ್ ವಲಯ ಕಣ್ಮರೆಯಾಗುವ ಭೀತಿ ಇಂದು ಹೆಚ್ಚುತ್ತಿದೆ. ಅದರ ಅಸ್ತಿತ್ವಕ್ಕೆ ಮಾರಕವಾದ ಕಳವಳಕಾರಿ ಅಂಶಗಳು ಇಂದು ಎದ್ದು ಕಾಣುತ್ತಿವೆ. ಈ ವಲಯ ಸ್ಥಾಯೀ ಸ್ವಭಾವದ, ಜಡಸ್ವರೂಪದ ವಲಯವಲ್ಲ. ಅದು ಬದಲಾಗುತ್ತಿರುತ್ತದೆ. ಓಜೋನ್ ಕಣಗಳು ನಾಶವಾಗುತ್ತಲೂ ಮತ್ತೆ ಪುನರುಜ್ಜೀವನಗೊಳ್ಳುತ್ತಲೂ ಇರುತ್ತವೆ. ಆದರೆ ಓಜೋನಿನ ತೀವ್ರ ಪ್ರತಿಕ್ರಿಯೆಗೆ ಒಳಗಾಗುವ ಘಟಕಗಳು ಅತ್ಯಧಿಕ

ಪ್ರಮಾಣದಲ್ಲಿ ಓಜೋನ್ ವಲಯದಲ್ಲಿ ಹರಡಿದರೆ ಸಮಗ್ರ ವಲಯವೇ ನಾಶವಾಗುವುದು ಖಂಡಿತ.

ಓಜೋನ್ ವಲಯವನ್ನು ನಾಶಗೊಳಿಸುವ ಪ್ರಮುಖ ಶಕ್ತಿಗಳು ಯಾವುವು ಎಂಬುದನ್ನು ವಿಶ್ಲೇಷಿಸೋಣ.

ಪರಮಾಣು ಸ್ಫೋಟ ಓಜೋನ್ ವಲಯವನ್ನು ನಾಶಗೊಳಿಸುವ ಪ್ರಥಮ ಶತ್ರು. ಮಾನವರಿಂದಲೇ ತಯಾರಿಸಲ್ಪಟ್ಟ ರಾಸಾಯನಿಕಗಳು ಎರಡನೇ ಶತ್ರು. ಮಿಥೈಲ್ ಕ್ಲೋರೈಡ್, ಕಾರ್ಬನ್, ಟೆಟ್ರಾಕ್ಲೋರೈಡ್ ಹಾಗೂ ಫ್ರಿಯೋನ್ ಮುಂತಾದ ರಾಸಾಯನಿಕಗಳಿಂದ ಓಜೋನ್ ವಲಯದ ಮೇಲೆ ತೀವ್ರ ದುಷ್ಪರಿಣಾಮವಾಗುತ್ತದೆ.



"'ಅರಣ್ಯ ರಕ್ಷಣೆ' ಎಂಬ ಫಲಕ ಹಾಕಲು ಕೊಂದರೆಯಾಗುವ ಆ ಎರಡು ಮರಗಳನ್ನು ಕಡಿ."

ಪ್ಲಾಸ್ಟಿಕ್ ಸಾಮಗ್ರಿಗಳ ಬಗ್ಗೆ ಎಲ್ಲರಿಗೂ ಗೊತ್ತಿದೆ. ಬಿಲಿಯಗಟ್ಟಳೆ ಪ್ಲಾಸ್ಟಿಕ್ ವಸ್ತುಗಳು ಬಗೆ ಬಗೆಯ ಸ್ವರೂಪದಲ್ಲಿ ಜಗತ್ತಿನಲ್ಲಿ ಉತ್ಪಾದನೆಯಾಗುತ್ತವೆ. ಅವುಗಳಲ್ಲಿ ಸ್ವಲ್ಪ ಪ್ರಮಾಣ ಮಾತ್ರ ಪುನಃಶ್ಚಕ್ರೀಕರಣ (Recycled) ಗೊಳ್ಳುತ್ತವೆ. ಬಹಳಷ್ಟು ಪ್ರಮಾಣದ ಪ್ಲಾಸ್ಟಿಕ್ಕು ಸುಟ್ಟು ನಾಶವಾಗುತ್ತದೆ. ಪ್ಲಾಸ್ಟಿಕ್ಕಿನ ದಹನದಿಂದಾಗಿ ಅಗಾಧ ಪ್ರಮಾಣದ ಮಿಥೈಲ್ ಕ್ಲೋರೈಡ್ ಉತ್ಪಾದನೆಯಾಗುತ್ತದೆ.

ಕಾರ್ಬನ್ ಟೆಟ್ರಾಕ್ಲೋರೈಡ್ ತೆಳುವಾದ ರಾಸಾಯನಿಕ. ಅದನ್ನು ಹೆಚ್ಚಾಗಿ ವರ್ಣ ದ್ರವ್ಯಗಳು ಹಾಗೂ ಮೆರಗು ನೀಡಲು ಬಳಸುವ ಎಣ್ಣೆಗಳ ತಯಾರಿಕೆಯಲ್ಲಿ ಬಳಸುತ್ತಾರೆ. ಪ್ರತಿ ವರ್ಷ ಜಗತ್ತಿನಲ್ಲಿ ನೂರಾರು ಸಾವಿರಾರು ಟನ್ ವರ್ಣ ದ್ರವ್ಯಗಳು ತಯಾರಾಗುತ್ತವೆ. ಅವುಗಳಲ್ಲಿ ಅಧಿಕಾಂಶ ಆವಿಯಾಗುತ್ತದೆ.

ಫ್ರಿಯೋನ್‌ಗಳನ್ನು ರೆಫ್ರಿಜರೇಟರ್ ಯಂತ್ರಗಳು, ಗೃಹಬಳಕೆಯ ರಾಸಾಯನಿಕಗಳು, ವಾರ್ನಿಶ್‌ಗಳು ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಉಪಯೋಗಕ್ಕೆ ಬರುವ ಗಾಳಿ ಒಳ ಪ್ರವೇಶಿಸದ ಬಾಟಲುಗಳು, ಸೌಂದರ್ಯವರ್ಧಕ ಸಾಧನಗಳು ಮತ್ತು ಕೃಷಿಯಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿದೆ. ಪ್ರತಿ ವರ್ಷ ಸುಮಾರು ೭ ಲಕ್ಷ ಟನ್ ಫ್ರಿಯೋನ್ ವಾಯುಮಂಡಲಕ್ಕೆ ಬಿಡುಗಡೆಯಾಗುತ್ತದೆ.

ವಾಯುಮಂಡಲದ ಕೆಳಸ್ತರದಲ್ಲಿ ಫ್ರಿಯೋನ್, ಕಾರ್ಬನ್, ಟೆಟ್ರಾಕ್ಲೋರೈಡ್, ಮಿಥೈಲ್‌ಕ್ಲೋರೈಡ್ ಹರಡಿವೆ. ರಾಸಾಯನಿಕವಾಗಿ ಜಡತೆಯಿಂದ ಕೂಡಿದ ಈ ಘಟಕಗಳು ಗಾಳಿಯಲ್ಲಿ ಛಿದ್ರ ವಿಚ್ಛಿದ್ರವಾಗುವುದಿಲ್ಲ. ಮಳೆ ನೀರಿನಲ್ಲಿ ತೊಳೆದು ಹೋಗುವುದಿಲ್ಲ. ಅವು ವಾಯುಮಂಡಲದಲ್ಲಿ ಒತ್ತೊತ್ತಾಗಿ ಸಂಗ್ರಹವಾಗುತ್ತವೆ. ಈ ರಾಸಾಯನಿಕಗಳು ವಾಯುಮಂಡಲದಲ್ಲಿ ವ್ಯಾಪಿಸಿಕೊಳ್ಳುವ ಪ್ರಕ್ರಿಯೆ ತೀರಾ ನಿಧಾನವಾಗಿ ಜರಗುತ್ತದೆ. ರಾಸಾಯನಿಕಗಳ ಕಣಗಳು

ವಾಯುಮಂಡಲದಲ್ಲಿ ಸುಮಾರು ೧೮ ಕಿಲೋ ಮೀಟರು ಎತ್ತರಕ್ಕೆ ವ್ಯಾಪಿಸಿಕೊಳ್ಳಲು ಹಲವು ವರ್ಷ ಬೇಕಾಗುತ್ತದೆ. ಅವು ಓಜೋನ್‌ವಲಯು ದೊಳಗೆ ನುಗ್ಗಿದಾಗ ಅತ್ಯಂತ ಪ್ರಬಲವಾದ ಅಲ್ಟ್ರಾವಯೊಲೆಟ್ ಕಿರಣ ಪ್ರಭೆಯಲ್ಲಿ ಒಡೆದು ಛಿದ್ರವಾಗುತ್ತದೆ. ನಂತರ ಕ್ಲೋರಿನ್ ಮತ್ತು ಫ್ಲೋರಿನ್ನಿನ ಪರಮಾಣುಗಳಾಗಿ ಪರಿವರ್ತಿತ ವಾಗುತ್ತವೆ. ಅವುಗಳ ಮೇಲೆ ಓಜೋನ್ ತಕ್ಷಣ ಪ್ರತಿಕ್ರಿಯೆ ವ್ಯಕ್ತಪಡಿಸುತ್ತದೆ.

ಸಾರಜನಕ, ಆದರ ಆಕ್ಸೈಡ್‌ಗಳು ಮತ್ತು ಡೈ ಆಕ್ಸೈಡ್ ಓಜೋನ್ ವಲಯುದ ಮೂರನೇ ಪ್ರಮುಖ ಶತ್ರು.

ವಾಯುಮಂಡಲದಲ್ಲಿ ಸಾರಜನಕದ ಪ್ರಮಾಣ ಸುಮಾರು ಮುಕ್ಕಾಲಂಶದಷ್ಟಿದೆ.

ಕಳೆದ ಹಲವಾರು ವರ್ಷಗಳಿಂದ ಮಾನವ ಜಮೀನಿನ ಫಲವತ್ತತೆ ಹೆಚ್ಚಿಸಲು, ಅಧಿಕ ಫಸಲು ಪಡೆಯಲು ನಾನಾ ಬಗೆಯ ರಸಗೊಬ್ಬರ ಗಳನ್ನು, ಪ್ರಧಾನವಾಗಿ ಸಾರಜನಕ ಮೂಲದ ಗೊಬ್ಬರಗಳನ್ನು ಬಳಸುತ್ತಲೇ ಬಂದಿದ್ದಾನೆ. ೧೯೫೭ ರಲ್ಲಿ ೩.೫ ಮಿಲಿಯ ಟನ್ನುಗಳಷ್ಟು ಸಾರ ಜನಕ ಮೂಲದ ರಸಗೊಬ್ಬರ ಉತ್ಪಾದನೆಯಾ ಯಿತು. ೧೯೭೪ ರಲ್ಲಿ ಅವುಗಳ ಪ್ರಮಾಣ ೪ ಕೋಟಿ ಟನ್ನುಗಳಷ್ಟು ಅಧಿಕವಾಯಿತು. ಈ ಶತಮಾನ ಕೊನೆಗೊಳ್ಳುವುದರೊಳಗೆ ಸುಮಾರು ೨೦ ಕೋಟಿ ಟನ್ ಸಾರಜನಕ ಮೂಲದ ರಸಗೊಬ್ಬರ ಉತ್ಪಾದನೆಯಾಗಬಹುದೆಂದು ತಜ್ಞರು ಅಂದಾಜು ಮಾಡಿದ್ದಾರೆ.

ನೈಟ್ರಸ್ ಆಕ್ಸೈಡ್ (ನಗುವಿಗೆ ಪ್ರಚೋದನೆ ನೀಡುವ ಅನಿಲ. ಹಿಂದೆ ಪ್ರಜ್ಞೆ ತಪ್ಪಿಸಲೂ ಕ್ಲೋರೊಫಾರ್ಮ್ ಬದಲಿಯಾಗಿ ಇದನ್ನು ಬಳಸುತ್ತಿದ್ದರು) ರಸಗೊಬ್ಬರಗಳಲ್ಲಿ ಅಡಕವಾಗಿದೆ. ಅದು ವಾಯುಮಂಡಲದ ಕೆಳಸ್ತರಗಳಲ್ಲಿ ಸ್ಥಿರವಾಗಿ ಉಳಿದಿರುತ್ತವೆ. ಅತ್ಯಧಿಕ ಅಲ್ಟ್ರಾ-ವಯೊಲೆಟ್ ವಿಕಿರಣಕ್ಕೆ ಗುರಿಯಾದಾಗ ಅದು ನೈಟ್ರಿಕ್ ಆಕ್ಸೈಡ್‌ಗಳಾಗಿ ಸಾರಜನಕದ ಡೈ ಆಕ್ಸೈಡ್‌ಗಳಾಗಿ ವಿಘಟನೆಗೊಳ್ಳುತ್ತದೆ. ಇವುಗಳ ಮೇಲೆ ಓಜೋನ್ ಅನಿಲ ತಕ್ಷಣ ಪ್ರತಿಕ್ರಿಯೆ ವ್ಯಕ್ತ ಪಡಿಸುತ್ತದೆ. ಇವೆಲ್ಲ ಅಂಶಗಳನ್ನು ವಿಶ್ಲೇಷಿಸಿ ದರೆ ಮಾನವನ ಚಟುವಟಿಕೆಗಳು ಓಜೋನ್ ವಲಯುದ ಮೇಲೆ ಅತ್ಯಂತ ವಿನಾಶಕಾರಿ ದುಷ್ಪರಿಣಾಮ ಬೀರುತ್ತಿವೆ ಎಂಬುದು ಖಚಿತ. ಹಾಲೊಜೆನ್ ಅನಿಲ ಅಡಕವಾಗಿರುವ ಮೂಲ ವಸ್ತುಗಳು ಭಾರಿ ಪ್ರಮಾಣದಲ್ಲಿ ವಾಯುಮಂಡ ಲಕ್ಕೆ ಬಿಡುಗಡೆಯಾಗುತ್ತವೆ. ತತ್ಪರಿಣಾಮವಾಗಿ ಓಜೋನ್ ಪದರಿನ ದಪ್ಪ ಶೇಕಡಾ ೧೬ ರಿಂದ ೧೭ ರಷ್ಟು ಕಮ್ಮಿಯಾಗಬಹುದು. ಸುಮಾರು ೨೦ ಅಥವಾ ೩೦ ವರ್ಷಗಳ ಒಳಗೆ ಈ ವಿದ್ಯಮಾನ ಸಂಭವಿಸಬಹುದೆಂದು ವಿಜ್ಞಾನಿಗಳು ಹೇಳು ತ್ತಾರೆ.

ಪರಮಾಣು ಸಮರವಾದರೆ ಓಜೋನ್ ಪದರು ಸಂಪೂರ್ಣ ಛಿದ್ರವಾಗಲಿದೆ. ಆದುದ ರಿಂದ ಮಾನವನ ಅಸ್ತಿತ್ವವನ್ನೇ ಕೊನೆಗೊಳಿಸ ಲಿರುವ ಇಂತಹ ಅಸ್ತ್ರಗಳನ್ನು ಸಂಪೂರ್ಣ ನಿರ್ಮೂಲನಗೊಳಿಸುವುದು ಮನುಕುಲದ ಆದ್ಯ ಕರ್ತವ್ಯವಾಗಿದೆ. ಎರಡನೆಯದಾಗಿ ಓಜೋನ್ ವಲಯುವನ್ನು ನಾಶಗೊಳಿಸಬಲ್ಲ ಘಟಕಗಳ ಉತ್ಪಾದನೆಯನ್ನು ಕಮ್ಮಿ ಮಾಡಬೇಕು. ಸಾರಜನಕ ಮೂಲದ ರಸಗೊಬ್ಬರಗಳನ್ನು ಬಳಸುವಲ್ಲಿ ಅತಿ ಹೆಚ್ಚಿನ ಜಾಗರೂಕತೆವಹಿಸ ಬೇಕು. ಸದ್ಯ ನಮ್ಮನ್ನು ಸೂರ್ಯನ ಅಲ್ಟ್ರಾ-ವಯೊಲೆಟ್ ತೀಕ್ಷ್ಣ ಕಿರಣಗಳಿಂದ ಕಾಪಾಡುವ ನಿಸರ್ಗದ ಈ "ನೀಲಿ ಕವಚ"ಕ್ಕೆ ಹಾನಿ ತಪ್ಪಿಲ್ಲ.

(ಕೃಪೆ : ಪ್ರಿರೋಡಾ ಐ ಚೆಲೊವೆಕ್)



# ಪಂದ್ಯ

ವಿಶಾಲವಾದ ಹಾಲಿನಲ್ಲಿ ಸುರೇಶ ಓಬೆರಾಯ್ ಅತ್ತಿಂದಿತ್ತ, ಇತ್ತಿಂದತ್ತ, ದೀರ್ಘಾಲೋಚನೆಯಲ್ಲಿ ಸುತ್ತಾಡುತ್ತಿದ್ದರು. ಮುಖದ ತುಂಬಾ ಬೆವರಿನ ದುಂಬಿಗಳು ತುಂಬಿದ್ದವು. ಅವರ ಹೃದಯ ತೀರಾ ದುರ್ಬಲವಾಗಿತ್ತು. ಯಾವುದೋ ಸಂದಿಗ್ಧ ಸುಳಿಯಲ್ಲಿ ಸಿಲುಕಿ ನರಳುತ್ತಿರುವಂತೆ ಭಾಸವಾಗುತ್ತಿತ್ತು. ಬಾಲ್ಕನಿಯಿಂದ ಇಳಿಯುತ್ತಿದ್ದ ಅವರ ಪತ್ನಿ ರೀಟಾ ಅವರನ್ನು ವೀಕ್ಷಿಸಿ, "ನೀವು ಬಹಳ ಚಿಂತಾಮಗ್ನರಾಗಿದ್ದೀರಿ, ಅದೂ ಯಾವ ಸಮಸ್ಯೆ ನಿಮ್ಮನ್ನು ಈ ರೀತಿ ತಿನ್ನುತ್ತಿರುವುದು ನನಗರ್ಥವಾಗುತ್ತಿಲ್ಲ. ಸಾಲವೇನಾದರೂ ಮಾಡಿರುವಿರಾ, ಅದರ ಯೋಚನೆ ನಿಮ್ಮನ್ನು ಕಾಡುತ್ತಿದೆಯೇ ಹೇಳಿ, ನೀವು ಹೇಳಲೇ ಬೇಕು, ನನ್ನ ಮೇಲೆ ಆಣೆ, "ಎಂದಳು.

ಕೆಲವು ಕ್ಷಣ ಮೌನ ವ್ಯಾಪಿಸಿತ್ತು. ಆರಾಮ ಕುರ್ಚಿಯಲ್ಲಿ ಕುಸಿದರು. ಟವಲಿನಿಂದ ಅವರ ಮುಖ ಒರಿಸುತ್ತಾ, ದಿಟ್ಟಿಸಿದಳು. ಅವರು ಹೇಳತೊಡಗಿದರು:

*

ರೀಟಾ ಇಂದಿಗೆ ಹದಿನೈದು ವರ್ಷಗಳ ಹಿಂದೆ ನಾನೊಂದು ಪಾರ್ಟಿಗೆ ಹೋಗಿದ್ದೆ. ಅಲ್ಲಿ ಊರಿನ ಎಲ್ಲಾ ಗಣ್ಯ ವ್ಯಕ್ತಿಗಳು ಸೇರಿದ್ದರು. ಜಡ್ಜಿಗಳು, ಲಾಯರುಗಳು, ಮಂತ್ರಿಗಳು ಎಲ್ಲಾ ಹಿರಿಯ ವ್ಯಾಪಾರಿಗಳು ಸೇರಿದ್ದರು. ಆಗ ನನ್ನ ಹಡಗಿನ ವ್ಯಾಪಾರ ಉತ್ತಮವಾಗಿತ್ತು. ಪಾರ್ಟಿ ವಿಜೃಂಭಣೆಯಿಂದ ನಡೆಯುತ್ತಿತ್ತು. ಹೀಗೇ ಮಾತಾಡುತ್ತಾ ಒಂದು ಕಡೆ ಕೋರ್ಟಿನ ನಿರ್ಣಯದ ಬಗ್ಗೆ ಚರ್ಚೆ ನಡೆಯುತ್ತಿತ್ತು. ಅತ್ತ ಧಾವಿಸಿದೆ. "ನೀವು ಏನೇ ಹೇಳಿ ಜೀವಾವಧಿ ಶಿಕ್ಷೆಯೇ ಉತ್ತಮ, ಅಪರಾಧಿಗೆ ತನ್ನ ಪಾಪದ ಪ್ರಾಯಶ್ಚಿತ್ತ ಪಡೆಯಲು ಸಮಯ ಇರುತ್ತದೆ. ಶಿಕ್ಷೆ ಮುಗಿದ ನಂತರ ಮತ್ತೆ ಹೊಸ ಜೀವನ ಸಾಗಿಸಬಹುದು" ಎಂದು ಪತ್ರಿಕಾಕರ್ತ ಆರ್ಷಲ್ ಹೇಳುತ್ತಿದ್ದರು.

"ಬಹಳ ವರ್ಷ ನಕ್ಷತ್ರದಂತೆ ಮಿಂಚಿ ಮಿಂಚಿ ಮಾಯವಾಗುವುದಕ್ಕಿಂತ ಸೂರ್ಯನಾಗಿ ಒಂದು ಕ್ಷಣ ಉರಿಯುವುದು ಮೇಲು" ಮಲ್ಹೋತ್ರ ವಾದಿಸುತ್ತಿದ್ದರು. ನಾನು ಬರುತ್ತಿರುವುದನ್ನು ಕಂಡು "ನಿಮ್ಮ ಅಭಿಪ್ರಾಯ ಏನು ಮಿಸ್ಟರ್ ರಾಯ್?" ಎಂದು ಕೇಳಿದರು. "ನೋಡಿ ನನ್ನ ಅಭಿಪ್ರಾಯದಲ್ಲಿ ಮರಣದಂಡನೆ ಸರಿಯಾದದ್ದು." ಮಲ್ಹೋತ್ರರ ಅಸಿಸ್ಟೆಂಟ್ ವಿವೇಕ ಮಧ್ಯೆ ಪ್ರವೇಶಿಸಿ "ಜೀವಾವಧಿ ಶಿಕ್ಷೆಯೆ ಅಪರಾಧಿಗೆ ಶ್ರೇಷ್ಠ. ತಾನು ಮಾಡಿದ್ದು ತಪ್ಪು ಎಂದು ತಿಳಿಯಲು ದೀರ್ಘಾವಧಿ ಸಮಯವಿರುತ್ತದೆ. ಒಬ್ಬನು ದುಡುಕಿ ತಪ್ಪು ಮಾಡಿದ ಎಂದು ಅವನಿಗೂ ಅದನ್ನೇ ಮಾಡಿತೋರಿಸಿದರೆ ಸಾಧಿಸುವುದಾದರೂ ಏನು? ಜೀವ ತೆಗೆದುಕೊಳ್ಳುವುದಕ್ಕಿಂತ ಜೀವ ಉಳಿಸಿ ಅವರತಪ್ಪನ್ನು ತಿದ್ದುವುದು ಮಹತ್ವದ್ದು" ಎಂದರು.

"ಮಿಸ್ಟರ್ ವಿವೇಕ ನೀವು ಇನ್ನೂ ಯಂಗ್,

ಎಚ್. ಎಸ್. ಜಾಫರ್




ಕತ್ತಲೆ ಕೋಣೆಯಲ್ಲಿ ಬಂಧಿತರಾಗಿ ದಿನ ಕಳೆಯುವುದು ಎಷ್ಟು ಕಷ್ಟ ಗೊತ್ತೆ?" ನಾನು ಕೇಳಿದೆ.

"ನನಗೆ ಅದು ಕಷ್ಟದ ಹಾಗೆ ಕಾಣಿಸುವುದಿಲ್ಲ. ಮನುಷ್ಯ ಏಕಾಂಗಿಯಾಗಿ ಬಂದು ಏಕಾಂಗಿಯಾಗಿ ಹೋಗುತ್ತಾನೆ. ಈ ಸಹವಾಸ ಶಾಶ್ವತವಾದುದಲ್ಲ."

"ಹಾಗಾದರೆ ನಾನು ನಿಮಗೆ ೨೦ ಲಕ್ಷ ರೂಪಾಯಿ ಕೊಡುತ್ತೇನೆ. ನೀವು ಐದು ವರ್ಷ ಸೆರೆಯಲ್ಲಿ ಇರುತ್ತೀರಾ?" ಎಂದು ಕೇಳಿದೆ.

"೨೦ ಲಕ್ಷ ಕೊಡುವುದಾದರೆ ೫ ವರ್ಷ ಅಲ್ಲ ೧೫ ವರ್ಷ ಆದರೂ ಬಂಧನದಲ್ಲಿರುತ್ತೇನೆ. ೧೫ ವರ್ಷಗಳ ನಂತರ ೨೦ ಲಕ್ಷದಲ್ಲಿ ಮಜವಾಗಿ ಕಾಲ ಕಳೆಯುತ್ತೇನೆ" ವಿವೇಕ ಹೇಳಿದರು.

ಮಲ್ಹೋತ್ರ "ಮಿಸ್ಟರ್ ವಿವೇಕ ನೀವು ಆವೇಶದಿಂದ ದುಡುಕಬೇಡಿ. ರಾಯ್ ಮಾತು ಹೇಳಿದರೆ ಮುಗಿಯಿತು. ಅದು ಕಲ್ಲಿನ ಗೆರೆಯಂತೆ. ಯಾರೂ ಪರಿವರ್ತಿಸುವುದಕ್ಕೆ ಆಗುವುದಿಲ್ಲ. ಮತ್ತೊಮ್ಮೆ ಯೋಚಿಸಿ ನಿರ್ಣಯ ತೆಗೆದುಕೊಳ್ಳಿ."

"ಸಾರ್ ಚೆನ್ನಾಗಿ ಯೋಚಿಸುವುದೇನು ಉಳಿದಿದೆ? ಜೀವನ ಇಡೀ ಕಷ್ಟಪಟ್ಟು ಸಂಪಾದಿಸಿ

ದರೂ ೨೦ ಲಕ್ಷ ಸಂಪಾದಿಸಲು ಆಗಲಾರದು. ನಾನು ನನ್ನ ಈ ಮಾತು ಬದಲಾಯಿಸುವುದಿಲ್ಲ" ಎಂದ ವಿವೇಕ

"ಡನ್, ಇವತ್ತಿನಿಂದ ೧೫ ವರ್ಷ ನೀವು ನನ್ನ ಕೈದಿ" ಎಂದು ಕಾರಿನಲ್ಲಿ ಕೂರಿಸಿಕೊಂಡುಹೊರಟೆ.

ಕಾರು ನಗರವನ್ನು ಬಿಟ್ಟು ದೂರ ಸಾಗುತ್ತಿತ್ತು. ರಾತ್ರಿ ನೀರವ ವ್ಯಾಪಿಸಿತ್ತು. ಆಕಾಶ ಮಿಂಚು ಮೋಡಗಳಿಂದ ತುಂಬಿತ್ತು. ಮಳೆ ಹನಿಗಳು ಉದುರುತ್ತಿದ್ದವು. ಹಳ್ಳಿಯನ್ನು ಪ್ರವೇಶಿಸಿ ನಮ್ಮ ಹಳೆಯ ಮನೆಯನ್ನು ಸೇರಿದಾಗ ರಾತ್ರಿ ೧೨ ಆಗಿತ್ತು. ಪೀಟರನಿಗೆ, "ಪೀಟರ್, ಇವರು ನನ್ನ ಅತಿಥಿ ಮತ್ತು ಕೈದಿ. ಇವರು ಇವತ್ತಿನಿಂದ ಇಲ್ಲೇ ಇರುತ್ತಾರೆ. ಏನು ಕೇಳಿದರೂ ತಂದುಕೊಡಬೇಕು, ಇವರು ಇಚ್ಛೆಯಿಂದ ಬಂದಿಯಾಗಿದ್ದಾರೆ. ಒಂದು ವೇಳೆ ಅವರು ಹೋಗುತ್ತೇನೆಂದರೆ ತಡೆಯಬೇಡ, ನನಗೆ ತಿಳಿಸು. ಇವರ ಬಗ್ಗೆ ತಪ್ಪದೆ ವಿಷಯ ತಿಳಿಸುತ್ತಿರಬೇಕು ಎಂದೆ."

ವಿವೇಕ ಹೇಳಿದ, "ಮಿಸ್ಟರ್ ರಾಯ್, ನನ್ನ ಈ ನನ್ನ ಮೂರು ನಿರ್ಬಂಧನೆಗಳನ್ನು ನೀವು ಪಾಲಿಸಬೇಕು,

"೧ ನನಗೆ ಬೇಕಾದ ವಸ್ತುಗಳನ್ನು ಕಿಟಕಿಯಿಂದಲೇ ಒದಗಿಸಬೇಕು.

"೨ ನಾನು ಇರುವ ಕೋಣೆಯ ಬಾಗಿಲಿಗೆ ಸದಾ ಚಿಲಕ ಹಾಕಿರಬೇಕು. ಹಾಗೂ

"೩ ನನ್ನ ಶಿಕ್ಷೆ ಅವಧಿ ಮುಗಿದ ಕೂಡಲೆ ನನ್ನ ೨೦ ಲಕ್ಷ ಕೊಡಬೇಕು, ಯಾವ ಕಾರಣಕ್ಕೂ ಸಬೂಬು ಹೇಳಬಾರದು."

"ಡನ್" ಎಂದೆ.

ನಿಧಾನವಾಗಿ ಕಾರಿನಲ್ಲಿ ಕುಳಿತು ಮನೆ ಸೇರಿದೆವು. ಆಗ ೨೦ ಲಕ್ಷವನ್ನು ಕೇವಲ ಇಪ್ಪತ್ತು ರೂಪಾಯಿಯಂತೆ ಭಾವಿಸಿದ್ದೆ. ನಗರದ ಪ್ರಮುಖ ವ್ಯಾಪಾರಿ ನಾನು. ನನ್ನ ಹಡಗಿನ ವ್ಯಾಪಾರ ಹತ್ತಾರು ವರ್ಷದಿಂದ ಲಕ್ಷಾಂತರ ರೂಪಾಯಿ ಲಾಭ ನೀಡುತ್ತಿತ್ತು. ವರ್ಷಗಳು ಉರುಳುತ್ತಿದ್ದವು. ಆದರೆ ವ್ಯಾಪಾರ ಮಾತ್ರ ಪರಿವರ್ತಿಸಿತ್ತು. ನಾಲ್ಕಾರು ಹಡಗುಗಳು ಸಮುದ್ರದಲ್ಲಿ ಮುಳುಗಿ ಅನಿವಾರ್ಯವಾಗಿ ನಷ್ಟ ಅನುಭವಿಸಿದೆ. ಇಂದು ಈ ಮನೆ, ವ್ಯವಹಾರ, ಕಾರುಗಳನ್ನು ಮಾರಿದ್ದರೂ ಇಪ್ಪತ್ತು ಲಕ್ಷಗಳಾಗುತ್ತದೆ. ಯೋಚನೆಗಳಲ್ಲಿ ಸಿಲುಕಿ ನರಳತೊಡಗಿದೆ.

ರಾಜ್ಯದ ಪ್ರಮುಖ ವಾರಪತ್ರಿಕೆ ಸಂಪಾದಕರಾದ ಅರ್ಪಲ್ ಅವರು "ಗುಡ್ ಮಾರ್ನಿಂಗ್ ಸಾರ್, ಹೌ ಆರ್ ಯೂ?" ಎಂದು ವಿಚಾರಿಸಿದರು. "ಫೈನ್, ಥ್ಯಾಂಕ್ ಯೂ, ನಗರದ ಗಣ್ಯ ವ್ಯಕ್ತಿಗಳಾದ ತಾವು ಈ ಬಡ ಕುಟೀರಕ್ಕೆ ಧಾವಿಸಿದ್ದು ಅತಿ ಆಶ್ಚರ್ಯವಾಗಿದೆ," ಎಂದೆ.

"ಮಿಸ್ಟರ ರಾಯ್, ಇವತ್ತು ನಿಮ್ಮ ಪಂದ್ಯದ ಅಂತಿಮ ದಿನ ಅಲ್ಲವೆ? ಈ ರೋಮಾಂಚಕ ಘಟನೆಯ ಅನುಭವ ಕೇಳಲು ಬಂದಿರುವೆ. ಮುಂದಿನ ಸಂಚಿಕೆಯಲ್ಲಿ ಈ ಸ್ವಾರಸ್ಯಕರ ಕತೆ ಪ್ರಕಟಿಸುತ್ತೇನೆ. ಸ್ವಾರಸ್ಯವಾಗಿ ಕತೆ ಬರೆಯಲು ನಿಮ್ಮ ಅನುಭವವನ್ನು ದಯವಿಟ್ಟು ಸ್ವಲ್ಪ ವಿವರವಾಗಿ ಹೇಳಿ ಎಂದರು.

"ಮಿಸ್ಟರ್ ಅರ್ಪಲ್, ಆ ವ್ಯಕ್ತಿಯನ್ನು ಬಂಧಿಸಿದ ನಂತರ ಎರಡು ವರ್ಷ ಅವನು ವರ್ತಿಸುತ್ತಿದ್ದುದನ್ನು ನೋಡಿ ನಿಜವಾಗಿ ಇವನು ೧೫ ವರ್ಷ ಸೆರೆಯಲ್ಲಿ ಇರುತ್ತಾನೆ ಎಂಬ ನಂಬಿಕೆ ನನಗಿರಲಿಲ್ಲ. ಮನೆಯ ಗೋಡೆಗಳು ಬೀಳುವಂತೆ ಕಿರುಚುತ್ತಿದ್ದ. ನನ್ನನ್ನು ಬೈಯ್ಯುತ್ತಿದ್ದ. ಒಬ್ಬ ಹೀನ ವ್ಯಕ್ತಿಯಲ್ಲಿ ಇರುವಂತಹ ಎಲ್ಲಾ ಕೆಟ್ಟ ಚಟಗಳು ಅವನಲ್ಲಿ ಸೇರಿದವು. ಮಿತಿ ಮೀರಿ ಕುಡಿಯುವುದು, ಹುಚ್ಚು ಹುಚ್ಚನಂತೆ ವರ್ತಿಸುವುದು ಮಾಡತೊಡಗಿದ. ಹೀಗೆ ಕೆಲವು ವರ್ಷಗಳು ಸಾಗಿದವು. ನಂತರ ಓದಲುತೊಡಗಿದ. ಕಾಮಿಕ್ಸ್‌ನಿಂದ ಹಿಡಿದು ಎಲ್ಲಾ ತರಹದ ಸಾಹಿತ್ಯ, ಎಲ್ಲಾ ಭಾಷೆಯ ಎಲ್ಲಾ ಧರ್ಮಗ್ರಂಥಗಳನ್ನು ಓದುತ್ತಿದ್ದ. ಅವನು ಓದದೇ ಇರುವಂತಹ ಯಾವ ಪುಸ್ತಕವು ಇರಲಾರದೇನೊ? ಕೆಲವು ವರ್ಷದಿಂದ ಅವನು ಅತ್ಯಂತ ಮೌನಿಯಾಗಿದ್ದಾನೆ. ಸದಾ ಯಾವುದೋ ದೀರ್ಘಾಲೋಚನೆಯಲ್ಲಿ ಮುಳುಗಿರುತ್ತಾನೆ" ಎಂದೆ.

"ನಾಳೆಯೆ ಅವನ ಬಿಡುಗಡೆಯಲ್ಲವೆ? ಮಿಕ್ಕ ಕತೆ ಅವನ ಬಾಯಿಂದ ಕೇಳುತ್ತೇನೆ. ಬರುತ್ತೇನೆ ಮಿಸ್ಟರ್ ರಾಯ್, ಐ ಮೀಟ್ ಯೂ

ಟುಮಾರೋ."

ನಾನು ಮತ್ತೆ ಯೋಚನೆಯಲ್ಲಿ ಮುಳಗಿದೆ. ಇನ್ನು ಕೇವಲ ಎಂಟು ಗಂಟೆ ಮಾತ್ರ ಉಳಿದಿದೆ ಅವನ ಬಿಡುಗಡೆಗೆ.

ನಾನಲ್ಲಿಗೆ ಹೋದೆ.

"ಮಿಸ್ಟರ್ ರಾಯ್ ಇಂದು ನಾನು ಬಂದಿಯಲ್ಲ. ನಾನು ಸ್ವತಂತ್ರ. ನನಗೆ ಯಾರ ಬಂಧನವೂ ಇಲ್ಲ. ನಾನು ಈಗ ೨೦ ಲಕ್ಷದಲ್ಲಿ ಹಾಯಾಗಿ ಇರಬಹುದು. ಈ ಮನೆ ಈ ವ್ಯವಹಾರ ಈ ಕಾರುಗಳು ಎಲ್ಲ ನನ್ನವು. ಹಾಂ...ಹಾ...ಹಾ. ನನಗೆ ತಿಳಿದಿದೆ ನಿಮ್ಮ ವ್ಯವಹಾರಗಳು ಮುಳುಗಿದೆ ಎಂದು. ನೀವು ಇಂದು ಬಡವರಾಗಿದ್ದೀರಿ. ಇರಲು ಮನೆ ಕೂಡ ಇಲ್ಲ, ಆದರೆ ನಾನು ಲಕ್ಷಾಧೀಶ, ನನ್ನ ಮನಸ್ಸು ಬಂದಂತೆ ಮಜವಾಗಿರುತ್ತೇನೆ. ನೀವು ಬಯಸುವುದಾದರೆ ನನ್ನ ಔಟ್ ಹೌಸಿನಲ್ಲಿ ನೀವು ಇರಬಹುದು ಎಂದು ಹುಚ್ಚನಂತೆ ನಗುತ್ತಿದ್ದ. ಅವನ ನಗು ನನ್ನ ಹೃದಯದಲ್ಲಿ ಈಟಿಯು ಹಾಗೆ ನಾಟುತ್ತಿತ್ತು.

"ಯೂ ಬ್ಲಡಿ ಬ್ಯಾಸ್ಟರ್ಡ್." ಎಂದು ಹೂದಾನಿಯಿಂದ ಹೊಡೆದೆ. ಹೂದಾನಿ ಡ್ರೆಸ್ಸಿಂಗ್ ಟೇಬಲ್ ಗ್ಲಾಸ್ ಚೂರುಚೂರಾಯಿತು. ನಾನು ಕಂಡದ್ದು ಕನಸು ಎಂದು ಅರಿತೆ. ದೇಹವೆಲ್ಲಾ ಬೆವರಿನಲ್ಲಿ ನೆನೆದುಹೋಯಿತು. ಸಿಗಾರ್ ಹತ್ತಿಸಿ ಯೋಚಿಸಿ ಒಂದು ನಿರ್ಣಯಕ್ಕೆ ಬಂದು ಸ್ಟೋರ್‌ವೆಲ್‌ನ ಬಾಗಿಲು ತೆಗೆದು ಅದರಲ್ಲಿದ್ದ ರಿವಾಲ್ವರ್ ತೆಗೆದು ಅದರಲ್ಲಿ ಗುಂಡುಗಳು ಇರುವುದನ್ನು ಖಾತರಿಮಾಡಿಕೊಂಡು ರೇನ್‌ಕೋಟ್, ಹ್ಯಾಟ್ ಧರಿಸಿ ಕಾರಿನಲ್ಲಿ ಹಳ್ಳಿಯತ್ತಸಾಗಿದೆ. ಮಿಂಚು ಸಿಡಿಲುಗಳು ಘರ್ಜಿಸುತ್ತಿದ್ದವು. ಮಳೆಯ ನೀರಿನ ದಾರಿ ಸರಿಯಾಗಿ ಕಾಣುತ್ತಿರಲಿಲ್ಲ. ಕಾರಿನ ವೈಪರ್ ಗ್ಲಾಸಿನ ನೀರು ಸರಿಸಿ ದಾರಿ ತೋರಿಸುತ್ತಿತ್ತು. ಆವೇಶದಿಂದ ಮನೆಯನ್ನು ಪ್ರವೇಶಿಸಿ "ವಿವೇಕ ಎಲ್ಲಿದ್ದಿಯೋ ಬ್ಯಾಸ್ಟರ್ಡ್?" ಎಂದು ಕೂಗಿದೆ. ರಿವಾಲ್ವಾರ್ ರೆಡಿಯಾಗಿತ್ತು. "ನನ್ನ ನೆಮ್ಮದಿ ಹಾಳು ಮಾಡಿ ಎಲ್ಲಿ ಅವಿತಿದ್ದೀಯಾ? ಹೊರಗೆ ಬಾ" ಎಂದೆ. ಪೀಟರ್ ಓಡಿ ಬಂದು "ಬುದ್ಧಿ ಅವನು ನೀವು ಬರುವ ಕೇವಲ ಹತ್ತು ನಿಮಿಷ ಮುಂಚೆ ಹೊರಟು ಹೋದ. ನಿಮಗೆ ತಿಳಿಸುವಂತೆ ಹೇಳಿದೆ. ನನಗೆ ಅದರ ಅವಶ್ಯಕತೆ ಇಲ್ಲ ಎಂದು ಈ ಚೀಟಿಯನ್ನು ತಮಗೆ ಕೊಡಲು ಕೊಟ್ಟಿದ್ದಾರೆ" ಎಂದು ಪೀಟರ್ ಚೀಟಿ ಕೊಟ್ಟ.

'ಮಿಸ್ಟರ್ ರಾಯ್, ನನ್ನನ್ನು ಕ್ಷಮಿಸಿ. ನಾನು ಈ ಪಂದ್ಯದಲ್ಲಿ ಸೋತು ಹೋದೆ. ಆದರೆ ಗೆಲುವಿನಿಂದ ನಿಮ್ಮ ಅವಧಿಯ ಪ್ರಕಾರ ಕೇವಲ ಹತ್ತು ನಿಮಿಷ ಮುಂಚಿತವಾಗಿ ಹೋಗುತ್ತಿದ್ದೇನೆ. ಕಾರಣ ನನಗೆ ೨೦ ಲಕ್ಷದ ಅವಶ್ಯಕತೆ ಈಗ ಇರುವುದಿಲ್ಲ. ನಿಮ್ಮ ಈ ಬಂಧನದಲ್ಲಿ ಕಳೆದ ೧೫ ವರ್ಷಗಳಲ್ಲಿ ಜೀವನದ ಎಲ್ಲಾ ಅನುಭವಗಳನ್ನು ತೋರಿಸಿಕೊಟ್ಟಿರಿ. ನಿಜವಾಗಿಯೂ ನಾನು ಬಂದಿಯಾಗದೆ ಸ್ವತಂತ್ರನಾಗಿ ೧೫ ವರ್ಷ ಕಳೆದಿದ್ದರೆ ಇಷ್ಟೆಲ್ಲ ಅನುಭವವನ್ನು ನಾನು ಪಡೆಯುತ್ತಿರಲಿಲ್ಲ. ಸರಳವಾದ ಜೀವನವನ್ನು ಕಲಿತುಕೊಂಡೆ. ನಿಮ್ಮ ೨೦ ಲಕ್ಷ ನನಗೆ ಈಗ ಯಾವ ಪ್ರಯೋಜನವನ್ನೂ ನೀಡಲಾರದು. ೧೫ ವರ್ಷ ಬಂಧನದಲ್ಲಿಟ್ಟು ಈ ಅನುಭವ ಪಡೆಯುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟದ್ದಕ್ಕೆ ನಾನು ಆಭಾರಿ. ನಾನು ಹೋಗುತ್ತಿದ್ದೇನೆ. ದೂರ ಬಹಳ ದೂರ ಗುಡ್ ಬೈ.

ನಿಮ್ಮ ಆತ್ಮೀಯ, ವಿವೇಕ'

ಇದನ್ನು ಓದಿ ನನ್ನ ಕಣ್ಣಿನಿಂದ ಬಿಂದುಗಳು ಉದುರಿದವು. ರಿವಾಲ್ವರ್ ಕೈಯಿಂದ ಜಾರಿ ಕೆಳಗೆ ಬಿತ್ತು. ವಿವೇಕ ನನಗೆ ಚೆಕ್ ಅಂಡ್ ಮೇಟ್ ಮಾಡಿ ಸೋಲಿಸಿದ್ದಾನೆ. ನಾನು ಅವನನ್ನು ಕೊಲ್ಲಲು ಬಂದೆ. ನಾನು ಲೋಭಿ. ನಾನು ನೀಚ, ನಾನು ಅವನ ಮುಂದೆ ಸಣ್ಣವನಾದೆ. ನನ್ನ ಈ ಅಪರಾಧಕ್ಕೆ ಶಿಕ್ಷೆಯಾಗಬೇಕು. ಪೀಟರ್ ಇವತ್ತಿನಿಂದ ಮನೆ ಕಾರು ನನಗೆ ಯಾವುದೂ ಬೇಡ, ಇಲ್ಲೇ ನನ್ನ ವಾಸ, ಇನ್ನು ನನಗೆ ನೆಮ್ಮದಿಯಿಲ್ಲ... ಕಿರುಚುತ್ತಿದ್ದರು.

ಹೊರಗೆ ಮಳೆ ಸುರಿಯುತ್ತಲೇ ಇತ್ತು. ✡

# ಯಾವುದೇ ವಾಹನವು ಅಪಘಾತ ಮಾಡಿ ಪರಾರಿಯಾಗಿ ನೀವು ನೊಂದಿದ್ದೀರಾ?

ನಿಮ್ಮಲ್ಲಿ ಯಾರಾದರೂ ಆಕಸ್ಮಿಕವಾಗಿ ರಸ್ತೆಯ ಅಪಘಾತಕ್ಕೊಳಗಾಗಿ, ಅಪಘಾತವೆಸಗಿದ ವಾಹನ ಪರಾರಿಯಾಗಿದ್ದಲ್ಲಿ ಹತಾಶರಾಗಬೇಡಿ. 'ಏಕೆಂದರೆ ಈಗ ಅಂತಹ ಅಪಘಾತದಿಂದ ತೊಂದರೆಗೀಡಾದವರಿಗೆ ''ಸೊಲೇಷಿಯಂ'' ಅಥವಾ ಸಮಾಧಾನಾರ್ಥ ನಿಧಿಯಿಂದ ಪರಿಹಾರ ಒದಗಿಸಲಾಗುವದು.

## ಸೊಲೇಷಿಯಂ ಅಥವಾ ಸಮಾಧಾನಾರ್ಥ ಪರಿಹಾರ ನಿಧಿ ಎಂದರೇನು?

ಅಪಘಾತವೆಸಗಿ ವಾಹನ ಪರಾರಿಯಾದ ಸಂದರ್ಭಗಳಲ್ಲಿ ಅಪಘಾತಕ್ಕೀಡಾದವರಿಗೆ ಅಥವಾ ಅವರ ವಾರಸುದಾರರಿಗೆ ಪರಿಹಾರ ನೀಡಲು ಸರಕಾರ ರೂಪಿಸಿರುವ ನಿಧಿ.

ಅಪಘಾತಕ್ಕೆ ಕಾರಣವಾದ ವಾಹನವು ಪತ್ತೆಯಾಗದಿದ್ದಲ್ಲಿ ಈ ನಿಧಿಯಿಂದ ಕೂಡಲೇ ಪರಿಹಾರ ಒದಗಿಸಲಾಗುವುದು.

## ಅಪಘಾತ ಸಂಭವಿಸಿದ ನಂತರ ಏನು ಮಾಡಬೇಕು ?

ಮೊದಲನೆಯದಾಗಿ: ಅಪಘಾತಕ್ಕೆ ಒಳಗಾದವರು ಅಥವಾ ಅವರ ವಾರಸುದಾರರು ಹತ್ತಿರದ ಪೋಲೀಸ್ ಠಾಣೆಯಲ್ಲಿ ಅಪಘಾತದ ಬಗ್ಗೆ ದೂರು ಸಲ್ಲಿಸಬೇಕು.

ನಂತರ : ಹತ್ತಿರದ ಪೋಲೀಸ್ ಠಾಣೆ ಅಥವಾ ಕಂದಾಯ ಇಲಾಖಾ ಕಛೇರಿಗಳಲ್ಲಿ ಉಚಿತವಾಗಿ ದೊರೆಯುವ ನಿಗದಿತ ಅರ್ಜಿ ಪತ್ರದಲ್ಲಿ ವಿವರ ನೀಡಬೇಕು. ಅರ್ಜಿಯೊಂದಿಗೆ ವೈದ್ಯಕೀಯ ಪ್ರಮಾಣಪತ್ರವೊಂದನ್ನು ಲಗತ್ತಿಸಿ, ಅದನ್ನು ಅಪಘಾತ ಸಂಭವಿಸಿದ ತಾಲೂಕಿನ ತಹಸೀಲ್ದಾರರು ಅಥವಾ ಉಪ ವಿಭಾಗದ ಸಹಾಯಕ ಕಮೀಷನರಿಗೆ ಒಂದು ತಿಂಗಳ ಅವಧಿಯೊಳಗೆ ಸಲ್ಲಿಸಬೇಕು :

## ಪರಿಹಾರ ಧನದ ಪಾವತಿ

ಅಪಘಾತದ ಸಂಭವಿಸಿದ ತಾಲೂಕಿನ ತಹಸೀಲ್ದಾರರು ಅಥವಾ ಉಪ ವಿಭಾಗದ ಸಹಾಯಕ ಕಮೀಷನರರು ಈ ಕೆಳಕಂಡಂತೆ ಪರಿಹಾರ ಧನವನ್ನು ನೀಡುವ ಅಧಿಕಾರ ಪಡೆದಿದ್ದಾರೆ.

(i) ತೀವ್ರವಾಗಿ ಗಾಯಗೊಂಡವರಿಗೆ ರೂ. ೧,೦೦೦.

(ii) ಅಪಘಾತದಲ್ಲಿ ಮಡಿದವರ ವಾರಸುದಾರರಿಗೆ ರೂ. ೫,೦೦೦.

**ಹೆಚ್ಚಿನ ವಿವರಗಳಿಗೆ ಬರೆಯಿರಿ :**

ಸಾರಿಗೆ ಕಮೀಷನರು, ಕರ್ನಾಟಕ ಸರಕಾರ
೩ನೇಯ ಮಹಡಿ, ಬಹುಅಂತಸ್ತು ಕಟ್ಟಡ,
ಡಾ. ಅಂಬೇಡಕರ ವೀಧಿ, ಬೆಂಗಳೂರು-೫೬೦ ೦೦೧

ಕರ್ನಾಟಕ ವಾರ್ತಾ

ಡಿಐಪಿ/೨೦೩/೮೬

# ಚೆ ಗುವೇರಾ ಹೇಗೆ ಸತ್ತ?



ಅರ್ಜೆಂಟಿನಾದ ಬಂಡುಕೋರ ಪ್ರಸಿದ್ಧ ಕೂಟಯೋಧ ನಾಯಕ ಅರ್ನೆಸ್ಟೋ ಚೆ ಗುವೇರಾ, ಅಕ್ಟೋಬರ್ ೧೯೬೭ ರಂದು ಬೊಲಿವಿಯದ ದಟ್ಟಡವಿಯಲ್ಲಿ ಬೊಲಿವಿಯದ ಸೇನೆಯಿಂದ, ಅವನ ಅನುಯಾಯಿಗಳೊಂದಿಗೆ ಗುಂಡಿಕ್ಕಿ ಕೊಲ್ಲಲ್ಪಟ್ಟ. ಹೀಗೇಕೆ ಅವನ ಕೊನೆಯಾಯಿತು ಎಂಬುವುದಕ್ಕೆ ಅಮೇರಿಕದ ಪತ್ರಕರ್ತ ಡ್ಯಾನಿಯಲ್ ಜೋನ್ಸ್, ದಂತಕತೆ ಮತ್ತು ವಾಸ್ತವತೆಯನ್ನು ಪ್ರತ್ಯೇಕಿಸಿ ಚೆ ಗುವೇರಾನ ಬೊಲಿವಿಯ ಕ್ರಾಂತಿಯ ವೈಫಲ್ಯದ ನಿಜಸ್ಥಿತಿ ತಿಳಿಸಿದ್ದಾನೆ. ಈ ರಹಸ್ಯೋದ್ಘಾಟನೆಯಲ್ಲಿ ಚೆ ಗುವೇರಾನ ದುರಂತಕ್ಕೆ ಕಾರಣಳಾದ ವ್ಯಕ್ತಿಯ ಹೆಸರನ್ನು ಹೊರಗೆಡವಿದ್ದಾನೆ. ಕ್ರಾಂತಿಯ ವೈಫಲ್ಯ ಮತ್ತು ಅವನ ಮರಣಕ್ಕೆ ಕಾರಣಳಾದ ಟಾನಿಯಾ ಬಂಕ ಸಹ ಈ ದುರಂತದಲ್ಲಿ ಕೊನೆಯುಸಿರೆಳೆಯುತ್ತಾಳೆ.

ಸುಂದರ ಮುಗ್ಧಯುವತಿ ಟಾನಿಯಾಳಿಗೆ ಎರಡು ಹೊಣೆಗಳಿದ್ದವು, ಚೆ ಗುವೇರನನ್ನು ಪ್ರೀತಿಸುವುದು ಮತ್ತು, ಪ್ರೀತಿಯನ್ನೇ ತನ್ನ ಅಸ್ತ್ರವನ್ನಾಗಿ ಮಾಡಿಕೊಂಡು, ಅವನ ಸುತ್ತ ಬಲೆ ಹೆಣೆದು ಅವನನ್ನು ನಿಷ್ಕ್ರಿಯಗೊಳಿಸುವುದು. ಅವಳು ರಶಿಯದ ಗೂಢಚಾರಿಣಿಯಾಗಿದ್ದಳು ಎಂಬುದು ಕೊನೆ ಕೊನೆಗೆ ಗೊತ್ತಾಯಿತು. ಗುವೇರಾನ ಎಲ್ಲ ಕ್ರಾಂತಿಗಳನ್ನು ಧ್ವಂಸ ಮಾಡಿ ಅವನನ್ನು ಮುಗಿಸುವ ಹೊಣೆಯನ್ನು ರಶಿಯ ಅವಳಿಗೆ ವಹಿಸಿತ್ತು.

ಟಾನಿಯಾಳ ನಿಜ ಹೆಸರು ಹೈದಿ ತಮಾರ ಬಂಕ ಎಂದು. ತನ್ನ ಗೂಢಚರ್ಯೆಯ ಸಲುವಾಗಿ ಅವಳು ಅನೇಕ ಹೆಸರುಗಳನ್ನು ಬಳಸುತ್ತಿದ್ದಳು.

ವಿಚಿತ್ರವೆಂದರೆ, ಅವಳು ಕೇವಲ ಒಂದು ರಾಷ್ಟ್ರದ ಗೂಢಚಾರಿಣಿಯಾಗದೇ ಮೂರು ದಿಕ್ಕಿನಲ್ಲಿ ಗೂಢಚರ್ಯೆ ಮಾಡುತ್ತಿದ್ದಳು. ಬಾಲ್ಯದಿಂದಲೂ ಕಮ್ಯುನಿಸ್ಟ್ ತತ್ವಗಳಲ್ಲಿ ತರ-

---

**ನಾಮನ ನಾಡಿಗೇರ**

---

ಬೇತಿ ಹೊಂದಿದ ಟಾನಿಯಾ ಒಂದು ವಿಷಯದಲ್ಲಿ ಅತ್ಯಂತ ದೃಢವಾಗಿದ್ದಳು. ಕೇವಲ ಕಮ್ಯುನಿಸ್ಟ್ ರಾಷ್ಟ್ರಗಳ ಪರವಾಗಿ ಮಾತ್ರ ಗೂಢಚರ್ಯೆಯನ್ನು ಮಾಡುತ್ತಿದ್ದಳು. ರಶಿಯದ, ಕೆ. ಜಿ. ಬಿ., ಪೂರ್ವ ಜರ್ಮನಿಯ ಎಮ್. ಎಫ್. ಎಸ್. ಹಾಗೂ ಚೆ ಗುವೇರಾನ ಬೊಲಿವಿಯದಲ್ಲಿರುವ. ಕೂಟಯೋಧ ಸಂಘಟನೆ, ಇವುಗಳ ಕಾರ್ಯವನ್ನು ಏಕಕಾಲಕ್ಕೆ ಮಾಡುತ್ತಿದ್ದಳು.

ಅವಳು ಜನಿಸಿದ್ದು ಅರ್ಜೆಂಟಿನಾದ ರಾಜ

ಧಾನಿಯಾದ ಬ್ಯೂನೋಸ್ ಐರಿಸ್‌ನಲ್ಲಿ (೧೯೩೭). ಮೂಲತಃ ಬರ್ಲಿನ್ ವಾಸಿಗಳಾಗಿದ್ದ ಅವಳ ತಂದೆ, ಪ್ರೊ. ಎರಿಕ್ ಓಟ್ಟೊ ಹೈನ್‌ರಿಕ್ ಬಂಕ ಮತ್ತು ಪೋಲಂಡಿನ ಯಹೂದ್ಯಳಾದ ತಾಯಿ ನಾದ್ಯಾ ಬೈಡರ್, ಇಬ್ಬರೂ ಕಮ್ಯುನಿಸ್ಟ ತತ್ವಗಳಲ್ಲಿ ಆಳವಾದ ನಂಬಿಕೆಯುಳ್ಳವರು. ನಾಜಿಗಳ ಛಲನೆ ತಪ್ಪಿಸಿಕೊಳ್ಳಲು ೧೯೩೫ರಲ್ಲಿ ಅರ್ಜೆಂಟಿನಾಕ್ಕೆ ಪಲಾಯನ ಮಾಡಿದರು. ಅರ್ಜೆಂಟಿನಾದ ನಾಗರಿಕರಾದ ನಂತರ, ಅಲ್ಲಿಯ ಕಮ್ಯುನಿಸ್ಟ ಸಂಘಟನೆಯಲ್ಲಿ ತೊಡಗಿದರು. ಚಿಕ್ಕವಳಾದ ಟಾನಿಯಾ ಬೆಳೆದ ಪರಿಸರ, ಕಮ್ಯುನಿಸ್ಟ ಮಯವಾದುದರಿಂದ, ಟಾನಿಯಾಳಿಗೆ, ಸಹಜವಾಗಿಯೇ, ಕಮ್ಯುನಿಸ್ಟ ತತ್ವಗಳ ದೀಕ್ಷೆ ಲಭಿಸಿತು. ಇವಳು ತಾರುಣ್ಯಕ್ಕೆ ಬರುತ್ತಿದ್ದಂತೆ ಅರ್ಜೆಂಟಿನಾದ, ರಾಜಕೀಯ ದಿಗಂತದಲ್ಲಿ ಇನ್ನೋರ್ವ ವ್ಯಕ್ತಿಯ ಪ್ರವೇಶವಾಯಿತು. ಟಾನಿಯಾ ಇವನೊಂದಿಗೆ ಇಡಿ ಜೀವನವನ್ನೇ ಕಳೆಯಬೇಕಾಗಿತ್ತು. ಈ ಕ್ರಾಂತಿಕಾರನ ಪೂರ್ಣ ಹೆಸರು, ಅರ್ನೆಸ್ಟೊ ಚೆ ಗುವೇರಾ ಡ ಲಾ ಸರ್ನಾ ಎಂದು. ಟಾನಿಯಾಳಂತೆ, ಇವನಿಗೂ ಇವನ


ಟಾನಿಯಾ

ತಂದೆ, ಅರ್ನೆಸ್ಟೊ ಗುವೇರಾ ಲಿಂಚ್ ಮತ್ತು ತಾಯಿ ಸಿಲೀಯಾ ಡ ಲಾ ಸರ್ನಾ ಅವರಿಂದ ಕಮ್ಯುನಿಸ್ಟ ತತ್ವಗಳ ಗಾಢ ಪರಿಚಯವಾಗಿತ್ತು. ಇವರು ಶ್ರೀಮಂತ ಕುಟುಂಬಕ್ಕೆ ಸೇರಿದ್ದರು. ಆಡಳಿತ ಪಕ್ಷದ ತೀವ್ರ ತೊಂದರೆಯಿಂದ ಎಡಪಕ್ಷಗಳತ್ತ ವಾಲಿದವರು. ಟಾನಿಯಾ ಹದಿನೈದು ವರ್ಷದವಳಿದ್ದಾಗ ಅವಳ ತಂದೆ-ತಾಯಿ, ಅರ್ಜೆಂಟಿನಾ ತ್ಯಜಿಸಿ, ಪೂರ್ವ ಜರ್ಮನಿಗೆ ತೆರಳಿ ಅಲ್ಲಿ ವಾಸಿಸಲು ಪ್ರಾರಂಭಿಸಿದರು. ತಮಾರಾಳ ಕ್ರಾಂತಿವೃತ್ತಿಯ ಶಿಕ್ಷಣ ಪೂರ್ವ ಜರ್ಮನಿಯಲ್ಲಿ ಪ್ರಾರಂಭವಾಯಿತು. ತಮಾರಾ ರಾಜ್ಯ ವ್ಯಾಯಾಮ ಮಂಡಳದ ಸದಸ್ಯೆಯಾಗಿ, ಸ್ವತಂತ್ರ ಜರ್ಮನ್ ಯುವ ಸಂಘಟನೆ (ಎಫ್.-ಡಿ. ಜೆ.)ಯಲ್ಲಿ ಸಕ್ರಿಯ ಕಾರ್ಯಕರ್ತಳಾದಳು.

ಬೊಲಿವಿಯದ ೧೯೫೩ರ ಪ್ರಥಮ ಕ್ರಾಂತಿ, ೧೯೫೪ರಲ್ಲಿ ಗೌಟೆಮಾಲಾದಲ್ಲಿ ಅಮೇರಿಕದ ಸಾಮ್ರಾಜ್ಯಶಾಹಿಯೊಂದಿಗೆ ಘರ್ಷಣೆ. ಮೆಕ್ಸಿಕೊ ಅರಣ್ಯದಲ್ಲಿ ದೊರಕಿದ ಕೂಟಸಮರ ತರಬೇತಿ ಮುಂತಾದ ಅನುಭವಗಳಿಸಿದ ಚೆ ಗುವೇರಾ ತನ್ನ ಕ್ರಾಂತಿಕಾರಿ ರಾಜಕೀಯ ಶಿಕ್ಷಣವನ್ನು ಕೊನೆಗೊಳಿಸುವನಿದ್ದ. ತಮಾರಾಳು ಪದವೀಧರಳಾದಾಗ, ಕ್ಯೂಬಾದಲ್ಲಿ ಕ್ಯಾಸ್ಟ್ರೊ ಬಂಧುಗಳು, ತಮ್ಮ ಕ್ರಾಂತಿಯನ್ನು ಅದೇ ಆರಂಭಿಸಿದ್ದರು.

ಚೆ ಗುವೇರಾ ಮತ್ತು ಅವನ ಅನುಯಾಯಿಗಳು ೧೯೫೭ ರಿಂದ ೧೯೫೯ ರವರೆಗೆ ನಡೆದ ಅನೇಕ ಕೂಟಯೋಧ ಸಮರದಲ್ಲಿ ನಿರ್ಣಾಯಕ ವಿಜಯದತ್ತ ಸಾಗುತ್ತಿದ್ದಾಗ, ತಮಾರಾ ಪೂರ್ವ ಜರ್ಮನಿಯಲ್ಲಿ, ಮಾರ್ಕ್ಸವಾದದಲ್ಲಿ ಪರಿಣತಿ ಪಡೆಯುತ್ತಿದ್ದಳು. ಶಿಕ್ಷಣ ಮುಗಿಸಿ ಸ್ವತಂತ್ರ ಜರ್ಮನ್ ಯುವ ಸಂಘಟನೆಯ ವಿದೇಶ ಭಾಷಾ ವಿಭಾಗದಲ್ಲಿ ಅಧಿಕಾರಿಯಾಗಿ ನೇಮಕಗೊಂಡಳು. ಲ್ಯಾಟಿನ್ ಅಮೇರಿಕದಿಂದ ಬರುವ ಶಿಷ್ಟ ಮಂಡಳದೊಂದಿಗೆ ಸ್ಪ್ಯಾನಿಶ್ ಭಾಷೆಯಲ್ಲಿ ವ್ಯವಹರಿಸುವ ಕಾರ್ಯ ತಮಾರಾಳದಾಗಿತ್ತು. ಅಲ್ಲದೇ ಆ ಶಿಷ್ಟಮಂಡಳದೊಂದಿಗೆ ನಿರಂತರವಾಗಿ ಯಾತ್ರೆ ಮಾಡುತ್ತಿದ್ದುದರಿಂದ, ರಶಿಯದ, ಕೆ. ಜಿ. ಬಿ. ಅಧಿಕಾರಿಗಳ ಗಮನಕ್ಕೆ ಬಿದ್ದಳು.

ತಮಾರಾ ಬಂಕ ಅತ್ಯಂತ ಸುಂದರ ಯುವತಿ. ಪೂರ್ವ ಜರ್ಮನಿಯ ಗೂಢಚಾರ ದಳ, ತನ್ನ ಕಾರ್ಯದಲ್ಲಿ ತಮಾರಳನ್ನು ಉಪಯೋಗಿಸಿ-ಕೊಳ್ಳಲು ಸಿದ್ಧವಾಯಿತು. ವಿದೇಶಿಯರನ್ನು ಆಕರ್ಷಿಸಿ, ಅವರೊಡನೆ ದೈಹಿಕ ಸಂಬಂಧ ಬೆಳೆಸಿದಾಗ, ಎಮ್. ಎಫ್. ಎಸ್. ಫೋಟೋ ತೆಗೆದುಕೊಂಡು, ಈ ಫೋಟೋಗಳ ಮೂಲಕ, ಬ್ಲ್ಯಾಕ್ ಮೇಲ್ ಮಾಡಿ ವಿದೇಶಿಯರು ತಮ್ಮ ಪರವಾಗಿ, ಅವರ ಮೂಲಕ ಅವರವರ ದೇಶಗಳಲ್ಲಿ ಗೂಢಚರ್ಯೆಯನ್ನು ಮಾಡಿಸುವುದೇ ಈ ಫೋಟೋಗಳ ಉದ್ದೇಶವಾಗಿತ್ತು.

ಟಾನಿಯಾ ಈಗ ಪ್ರಮುಖ ಗೂಢಚಾರಿಣಿಯಾಗಿದ್ದಳು. ಕ್ಯೂಬಾದಲ್ಲಿ ಬ್ಯಾಟಿಸ್ಟಾ ಸರಕಾರದ ಪತನವಾಗಿ, ಕ್ಯಾಸ್ಟ್ರೊ ಅಧಿಕಾರಕ್ಕೆ ಬಂದನಂತರ ಚೆ ಗುವೇರಾನನ್ನು ಕ್ಯೂಬಾ ರಾಷ್ಟ್ರೀಯ ಬ್ಯಾಂಕಿಗೆ ಅಧ್ಯಕ್ಷನನ್ನಾಗಿ ನೇಮಿಸಲಾಯಿತು. ಅಮೇರಿಕದ ಆರ್ಥಿಕ ದಿಗ್ಬಂಧನದಿಂದಾಗಿ ಕ್ಯೂಬಾ ಆರ್ಥಿಕ ಬಿಕಟ್ಟಿನಲ್ಲಿ ಜರ್ಜರಿತವಾಗಿತ್ತು. ಈ ತೊಂದರೆಯಿಂದ ಪಾರಾಗಲು ದೊಡ್ಡ ಸಾಲ ದೊರಕಿಸಲು ಆತ ಪೂರ್ವ ಜರ್ಮನಿಗೆ ಪ್ರಯಾಣಮಾಡಿದ. ಟಾನಿಯಾಳನ್ನು ಚೆ ಗುವೇರಾನ, ದ್ವಿಭಾಷಿ ಎಂದು ನಿಯಮಿಸಲಾಯಿತು. ಅವನನ್ನು ನೋಡಿದ ತಕ್ಷಣ ಟಾನಿಯಾಳಲ್ಲಿ ಪ್ರೇಮಾಂಕುರವಾಯಿತು. ಚೆ ಗುವೇರಾ ತನ್ನ ಎರಡನೇ ಹೆಂಡತಿ, ಅಲಿದಾ ಮಾರ್ಚಳೊಂದಿಗೆ ಸುಖವಾಗಿದ್ದರೂ ಟಾನಿಯಾಳ ಪ್ರೇಮಪಾಶದಲ್ಲಿ ಸಿಲುಕಿದ. ಟಾನಿಯಾ ಸ್ಪ್ಯಾನಿಶ್ ಭಾಷೆಯನ್ನು ನಿರರ್ಗಳವಾಗಿ ಮಾತನಾಡುತ್ತಿದ್ದುದರಿಂದ ಚೆ ಗುವೇರಾನಿಗೆ ತಾನು ಪರದೇಶದಲ್ಲಿರುವೆ ಎಂಬುದು ಕೂಡ ಮರೆತು ಹೋಯಿತು. ಮಾರ್ಕ್ಸ್ ತತ್ವದಲ್ಲಿ ದೃಢ ನಂಬುಗೆ, ಸುಶಿಕ್ಷಿತತೆ, ಮೋಹಕ ಹಾವಭಾವನಯ ನಾಜೂಕಿನಿಂದ ಕೂಡಿದ ಸುಂದರಿ ಟಾನಿಯಾಳಿಗೆ ಚೆ ಗುವೇರಾ ಮಾರುಹೋದುದು ಅಸಹಜವಾದುದೇನಲ್ಲ.

ರಶಿಯವು ಲ್ಯಾಟಿನ್ ಅಮೇರಿಕದಲ್ಲಿ ತನ್ನ ಪರವಾಗಿ ಗೂಢಚರ್ಯೆ ಮಾಡಲು, ಚಾಣಾಕ್ಷ ವ್ಯಕ್ತಿಯನ್ನು ಹುಡುಕುತ್ತಿತ್ತು. ವಿಯೆನ್ನಾದ ಸಾಂಸ್ಕೃತಿಕ ಮೇಳದಲ್ಲಿ ಭಾಗವಹಿಸುತ್ತಿದ್ದಾಗ, ಕೆ. ಜಿ. ಬಿ. ಅಧಿಕಾರಿ ಲ್ಯಾಟಿನ್ ಅಮೇರಿಕದ ಕಾರ್ಯದ ಬಗೆಗೆ ಮಾಹಿತಿ ಕಲೆ ಹಾಕಬೇಕೆಂದು ತಿಳಿಸಿದಾಗ ಟಾನಿಯಾ ತಕ್ಷಣ ತನ್ನ ಒಪ್ಪಿಗೆ ನೀಡಿದಳು.

ಅವಳಿಗೆ ರಶಿಯದ ಕೆ. ಜಿ. ಬಿ. ಅತ್ಯಂತ ನಿಕರದ ತರಬೇತಿ ನೀಡಿತು. ಏಕೆಂದರೆ ಅವಳ ಕಾರ್ಯವೇ ಅಷ್ಟು ನಿಕರವಾಗಿತ್ತು. ಅನಿಶ್ಚಿತ ಮನೋವೃತ್ತಿಯ ವ್ಯಕ್ತಿಯಾದ ಕ್ಯಾಸ್ಟ್ರೊ ಮತ್ತು ಅವನ ಗುಂಪಿನ ಮೇಲೆ ಕಣ್ಣಿಡುವುದರೊಂದಿಗೆ ಚೆ ಗುವೇರಾನ ಮೇಲೂ ಗಮನ ವಿಡುವ ಕೆಲಸ ಅವಳದಾಗಿತ್ತು.

ಕ್ಯೂಬಾದ ಕೂಟಯೋಧರು, ೧೯೫೯ ರಲ್ಲಿ ಯಶಸ್ಸು ಸಂಪಾದಿಸುವ ಮೊದಲೇ ಅನೇಕ ಕೂಟಯೋಧರ ಪರಿಚಯ ಟಾನಿಯಾಳಿಗಿತ್ತು. ಆ ಕೂಟಯೋಧರು, ಮಾವೋ ಪರ ಎಂಬ ವದಂತಿ ಇದ್ದುದರಿಂದ ಅವರ ಸಂಘಟನೆಯಲ್ಲಿ ಕೆ.ಜಿ.ಬಿ. ಪ್ರವೇಶಿಸಿತ್ತು.

ಪೂರ್ವ ಜರ್ಮನಿಗೆ ಕ್ಯೂಬಾದ ನೃತ್ಯಮೇಳ ಬಂದಾಗ ಅವಳು ಅದನ್ನು ಸೇರಿಕೊಂಡಳು. ಜರ್ಮನಿಯಿಂದ ಹೊರಗೆ ಹೋಗಬೇಕಾದರೆ ಇದೊಂದೇ ಮಾರ್ಗವಾಗಿತ್ತು. ಕ್ಯೂಬಾಕ್ಕೆ ತೆರಳಿದ ನಂತರ, ಚೆ ಗುವೇರಾನ ಸಹಾಯದಿಂದ ಶೀಘ್ರವಾಗಿ ಮೇಲೇರಿದಳು. ಸದಾ ಅವನೊಂದಿಗೆ ಇರುತ್ತಿದ್ದುದರಿಂದ, ಎಲ್ಲ ಮೇಲ್ವರ್ಗಗಳ ಪರಿಚಯ ಅವಳಿಗಾಯಿತು. ಕ್ಯೂಬಾದ ಆಡಳಿತ ಚಕ್ರದಲ್ಲಿ ಕ್ಯಾಸ್ಟ್ರೊ ಬಂಧುಗಳು ಮತ್ತು ಚೆ ಗುವೇರಾ ಅತಿ ದೊಡ್ಡ ಪ್ರಭಾವಿ ವ್ಯಕ್ತಿಗಳಾಗಿದ್ದರು.

ಚೆ ಗುವೇರಾ ೧೯೬೨ರಲ್ಲಿ ಟಾನಿಯಾಳನ್ನು ನಿಕರಾಗುವಾ ಕೂಟಯೋಧರ ತಂಡದ ಸದಸ್ಯಳನ್ನಾಗಿ ಮಾಡಿ, ನಿಕರಾಗುವಾಕ್ಕೆ ಕಳುಹಿಸಿದ. ಇದು ರಶಿಯದ ಆಶಯವಾಗಿರಲಿಲ್ಲ. ಇದಲ್ಲದೇ ಕ್ಯೂಬಾ ಲ್ಯಾಟಿನ್ ಅಮೇರಿಕದಲ್ಲಿ ಸಶಸ್ತ್ರ ಕ್ರಾಂತಿಯನ್ನುಂಟುಮಾಡಬೇಕು, ಎಂಬ ವಿಚಾರ ಹೊಂದಿತ್ತು. ರಶಿಯ ಇದಕ್ಕೆ ಸಂಪೂರ್ಣ ವಿರೋಧವಾಗಿತ್ತು. ಇದಕ್ಕಿಂತ ಹೆಚ್ಚಾಗಿ ಚೆ ಗುವೇರಾ, ಉದ್ಯಮದ ಸಚಿವನಾಗಿ ಕ್ಯೂಬಾದ ಆರ್ಥಿಕ

ಪರಿಸ್ಥಿತಿಯನ್ನು ಹದಗೆಡಿಸಿದ್ದಾನೆ ಎಂದಾಗ ತಾವೇಕೆ ಧನಸಹಾಯ ಮಾಡಬೇಕು ಎಂಬುದು ರಶಿಯದ ಧೋರಣೆಯಾಗಿತ್ತು. ಕ್ಯಾಸ್ಟ್ರೊ ಕೂಡ, ಚೆ ಗುವೇರಾನೊಂದಿಗೆ ಅನೇಕ ಭಿನ್ನಾಭಿಪ್ರಾಯಗಳನ್ನು ಹೊಂದಿದುದರಿಂದ ಚೆ ಗುವೇರಾನನ್ನು ಪಕ್ಷದಿಂದಲೂ ಸೈನ್ಯದಿಂದಲೂ ಹೊರಗೆ ಹಾಕಲಾಯಿತು. ಚೆ ಗುವೇರಾ ಮತ್ತೆ ಬೀದಿಪಾಲಾಗಿ ಉಳಿದ ರಾಷ್ಟ್ರಗಳಲ್ಲಿ ಕ್ರಾಂತಿಯ ಸಂಘಟನೆಯಲ್ಲಿ ತೊಡಗಬೇಕಾಯಿತು. ೧೯೬೫ರಲ್ಲಿ ಕಾಂಗೋದಲ್ಲಿ ಕಿನ್ಸ್ಹಾಸಾ ಪ್ರಾಂತದ ಕೂಟಯೋಧರಿಗೆ ತರಬೇತಿ ನೀಡಿದ ನಂತರ ಅವನು ಬೊಲಿವಿಯದಲ್ಲಿ ಕ್ರಾಂತಿಯನ್ನು ಮಾಡುವ ಕನಸನ್ನು ಕಂಡು, ಕ್ಯೂಬಾಕ್ಕೆ ಮರಳಿದ. ಚೆ ಗುವೇರಾ ಯಶಸ್ವಿಯಾದರೆ, ಕ್ಯಾಸ್ಟ್ರೊನಿಗೆ ಲಾಭವೇ ಇತ್ತು. ಸೋತರಂತೂ ಅದು ಅವನ ಕೊನೆ ಎಂಬುದು ಕ್ಯಾಸ್ಟ್ರೊನಿಗೆ ಗೊತ್ತಿದ್ದು ಯಾವ ಪರಿಣಾಮವೇ ಆದರೂ, ಅನುಕೂಲ ಎಂದು ಕಾಸ್ಟ್ರೊ ಚೆ ಗುವೇರಾನಿಗೆ ಸಂಪೂರ್ಣ ಬೆಂಬಲ ನೀಡಿದ. ಟಾನಿಯಾ ಈ ವಿಚಾರವನ್ನು ರಶಿಯಕ್ಕೆ ತಿಳಿಸಿದಾಗ ಚೆಗುವೇರಾನ ಕಾರ್ಯವನ್ನು ವಿಫಲಗೊಳಿಸಲು ಕೆ. ಜಿ. ಬಿ. ಆಜ್ಞೆ ನೀಡಿತು.

ಚೆ ಗುವೇರಾನಿಗಿಂತ ಮೊದಲೇ ಟಾನಿಯಾ ಬೊಲಿವಿಯದಲ್ಲಿ ಬಂದಿಳಿದಳು. ಲಾರಾ ಬಾವರ್ ಎಂದು ಅವಳ ಹೆಸರು ಬದಲಿಸಿ ಹೊಸ ಪಾಸ್‌ಪೋರ್ಟ್ ರಚಿಸಲಾಗಿತ್ತು. ತಾನು ಬಡವಿ, ಜರ್ಮನ್ ಭಾಷೆಯನ್ನು ಕಲಿಸಿ ತನ್ನ ಹೊಟ್ಟೆ ತುಂಬಿಕೊಳ್ಳುವೆ ಎಂದು ತನ್ನನ್ನು ಭೇಟಿಯಾದವರೊಂದಿಗೆ ಆಕೆ ಹೇಳುತ್ತಿದ್ದಳು. ಒಂದು ಚಿಕ್ಕ ಫ್ಲ್ಯಾಟಿನಲ್ಲಿ ವಾಸವಾಗಿ ನೆಲದ ಮೇಲೆ ಮಲಗುತ್ತಿದ್ದಳು.

ಟಾನಿಯಾಳಿಗೆ ಅನಿತಾ ಹೈನ್ರಿಕ್ ಎಂಬ ಆತ್ಮೀಯ ಗೆಳತಿಯಿದ್ದಳು. ಅವಳು ಕಾನೂನು ಸಚಿವ ಆ್ಯತೋನಿಯೋನ ಆಪ್ತ ಕಾರ್ಯದರ್ಶಿಯಾಗಿದ್ದಳು. ಯುರೋಪಿನಲ್ಲಿ ಪಡೆದ ಶಿಕ್ಷಣ ಹಾಗೂ ಅವಳ ಸೌಂದರ್ಯಗಳು ಲಾಪಾಝ್‌ದ ತರುಣರನ್ನೆಲ್ಲ ಆಕರ್ಷಿಸಿದ್ದವು. ಕಲಾವಿದರು, ಪಂಡಿತರು ಹಾಗೂ ರಾಜಕೀಯ ಪಕ್ಷಗಳ ಕಾರ್ಯಕರ್ತರಿಗೆ ಅವಳು ಪರಿಚಿತ ವ್ಯಕ್ತಿಯಾಗಿದ್ದಳು. ಸಾಂಸ್ಕೃತಿಕ, ಕಲಾತ್ಮಕ ಜೀವನದ ವೇಷದಲ್ಲಿ ಚೆ ಗುವೇರಾ ಮತ್ತು ಕೆ. ಜಿ. ಬಿ. ಪರವಾಗಿ ಸುಲಭವಾಗಿ ಕಾರ್ಯ ಮಾಡುತ್ತಿದ್ದಳು. ಬೊಲಿವಿಯದ ಕೂಟಯೋಧರು ಮತ್ತು ಚೆ ಗುವೇರಾ ನಡುವಿನ ಸಂಪರ್ಕ ಸಾಧನ ಅವಳಾಗಿದ್ದಳು.

ಬೊಲಿವಿಯದ ಕಮ್ಯುನಿಸ್ಟ್ ಪಕ್ಷದೊಂದಿಗೆ ಸಹ ಅವಳು ಸಂಪರ್ಕ ಹೊಂದಿರುವದು ಅನಿವಾರ್ಯವಾಗಿತ್ತು. ಚೆ ಗುವೇರಾ ಮತ್ತು ಕ್ಯಾಸ್ಟ್ರೋರಿಗೆ ಕಮ್ಯುನಿಸ್ಟ್ ಬೆಂಬಲ ಅತ್ಯವಶ್ಯವಾಗಿತ್ತು. ಇವರ ಬೆಂಬಲದಿಂದಲೇ ಕ್ರಾಂತಿ ನಡೆಯಬೇಕಾಗಿತ್ತು.

ಟಾನಿಯಾ ೧೯೬೬ರಲ್ಲಿ ಬೊಲಿವಿಯದ ವಿದ್ಯಾರ್ಥಿಯನ್ನು ಮದುವೆಯಾದಳು. ಇದರಲ್ಲಿ ಪ್ರೇಮಕ್ಕಿಂತ ಸ್ವಾರ್ಥವೇ ಹೆಚ್ಚಾಗಿತ್ತು. ಏಕೆಂದರೆ ಅವಳಿಗೆ ಬೊಲಿವಿಯದ ನಾಗರಿಕತ್ವ ಬೇಕಾಗಿತ್ತು. ಇವಳ ಪತಿ, ಮಾರಿಯೊ ಅಲ್ವಾರೀಜ್, ಟಾನಿಯಾ ವ್ಯವಸ್ಥೆ ಮಾಡಿದ ಶಿಷ್ಯವೃತ್ತಿಯನ್ನು ಸ್ವೀಕರಿಸಿ ಬಲ್ಗೇರಿಯಾಕ್ಕೆ ಪ್ರಯಾಣಿಸಿದ. ಮುಂದೆ ಏಳು ತಿಂಗಳ ನಂತರ, ಟಾನಿಯಾ ಮಾರಿಯೊನಿಂದ ವಿವಾಹ ವಿಚ್ಛೇದನ ಪಡೆದಳು. ಅವಳಿಗೆ ಯಾವುದೇ ಬಂಧನ ಬೇಡವಾಗಿತ್ತು. ತನ್ನ ತಿರುಗಾಟದ ಸಲುವಾಗಿ ಅರ್ಜೆಂಟಿನಾದಲ್ಲಿ ೩೦೦೦ ಡಾಲರು ನೀಡಿ ಟೊಯೊಡಾ ಜೀಪ್ ಖರೀದಿಸಿದಳು. ತನಗೆ ಅಕಸ್ಮಾತಾಗಿ ೩೦೦೦ ಡಾಲರು ದೊರೆತುದರಿಂದ ತಾನು ಅದನ್ನು ಖರೀದಿಸಲು ಸಾಧ್ಯವಾಯಿತು ಎಂದು ಹೇಳಿ ಎಲ್ಲರ ಬಾಯಿ ಮುಚ್ಚಿಸಿಬಿಟ್ಟಳು. ಅವಳು ವಾಡಿಕೆಯಾಗಿ ತನ್ನ ಜೀಪಿನಲ್ಲಿ ಸಾಂತಾಕ್ರುಝಿಗೆ ಪ್ರಯಾಣಿಸುತ್ತಿದ್ದಳು. ಅಲ್ಲಿಂದ ನಾಂಚುರಿಝಿಗೆ ಕೂಟಯೋಧರು ತೆರಳುತ್ತಿದ್ದರು.

ಆದರೆ ಅವಳ ವರ್ತನೆ ಬೇಜವಾಬ್ದಾರಿಯ ಅಂಚನ್ನು ತಲಪಿತ್ತು. ಚೆ ಗುವೇರಾನ ಅನುಯಾಯಿಗಳಾದ ರಾಬರ್ಟ್ ಮತ್ತು ಗಿಡೋ ಪೆರೆಡೋನೊಂದಿಗೆ ಬಹಿರಂಗವಾಗಿ ತಿರುಗಾಡಹತ್ತಿದಳು. ಅಲ್ಲದೆ ತಾವು ಹೋದಲ್ಲೆಲ್ಲ ತಾವೆಲ್ಲ ಕೂಟಯೋಧರು ಎಂದು ಹೇಳತೊಡಗಿದಳು. ಅಲ್ಲಿಯವರೆಗೆ ಜನರು ಬೊಲಿವಿಯ ಕೂಟ

ಯೋಧರ ಹೆಸರನ್ನೇ ಕೇಳಿರಲಿಲ್ಲ. ಇದರ ಸುಳಿವನ್ನರಿತ ಸೇನಾಪಡೆ ಟಾನಿಯಾಳ ಮೇಲೆ, ಕಣ್ಣಿಡಲು ಪ್ರಾರಂಭಿಸಿತು. ಚಾಣಾಕ್ಷ ಗೂಢ ಚಾರಿಣಿಯಾಗಿದ್ದ ಅವಳು ಹೀಗೇಕೆ ವರ್ತಿಸಿದಳು ಎದನ್ನುವುದು ನಿಗೂಢವಾಗಿಯೇ ಇದೆ. ಬೊಲಿವಿಯದ ಕೊಟಯೋಧರ ಕಾರ್ಯವನ್ನು ಅವಳು ಧ್ವಂಸ ಮಾಡಬೇಕು ಎಂದು ಕೆ. ಜಿ. ಬಿ. ಆಜ್ಞೆ ಮಾಡಿತ್ತು. ಆದರೆ ಚೆ ಗುವೇರಾ ಬಲಿಯಾಗಬೇಕು ಎಂಬುದು ಅವಳ ಆಶಯವಾಗಿರಲಿಲ್ಲ.

ಚೆ ಗುವೇರಾನ ಕೂಟಯೋಧರಿಗೆ ನಗರದಿಂದ ಟಾನಿಯಾಳ ಮೂಲಕ ಆಹಾರ, ಶಸ್ತ್ರ, ಬಟ್ಟೆ ಬರೆಗಳು ಪೂರೈಕೆಯಾಗುತ್ತಿದ್ದವು. ಚೆ ಗುವೇರಾನಿಗೆ ಬೊಲಿವಿಯಕ್ಕಿಂತ ಮೊದಲು ಅರ್ಜೆಂಟಿನಾದಲ್ಲಿ ಕ್ರಾಂತಿಯನ್ನುಂಟುಮಾಡಬೇಕಾಗಿತ್ತು. ಚೆ ಗುವೇರಾ ಟಾನಿಯಾಳನ್ನು ಅರ್ಜೆಂಟಿನಾಕ್ಕೆ ಕಳುಹಿಸಿ ಅಲ್ಲಿ ತನ್ನ ಮುಖ್ಯ ಕೂಟಯೋಧರನ್ನು ನಾಂಚುರಿರ್ಷುಗೆ ಒಂದು ಭೇಟಿಯಾಗುವಂತೆ ತಿಳಿಸಿದ್ದ. ಆದರೆ ಟಾನಿಯಾ ನಾಂಚುರಿರ್ಷುಗೆ ಬರಬಾರದು ಎಂದು ಅವಳನ್ನು ಪ್ರತಿಬಂಧಿಸಿದ್ದ. ನಾಂಚುರಿರ್ಷುದ ಒಂದು ತೋಟದಲ್ಲಿ ಕೂಟಯೋಧರಿಗೆ ತರಬೇತಿ ನೀಡಲಾಗುತ್ತಿತ್ತು. ಜ್ಯೂಲ್ಸ್ ಡೆಬ್ರಿ ಮತ್ತು ಬಿಸ್ಟೋಸ್ ಎಂಬ ಇಬ್ಬರು ಫ್ರೆಂಚ್ ನಾಗರಿಕರೊಂದಿಗೆ, ಟಾನಿಯಾ ನಾಂಚುರಿರ್ಷುಗೆ ಪ್ರಯಾಣ ಬೆಳೆಸಿದಳು. ಅವಳ ಸಹಕಾರಿಯೊಬ್ಬ ನಾಂಚುರಿರ್ಷುವ ಮೇಲೆ ಪೋಲೀಸರು ಎರಡು ಸಾರೆ ದಾಳಿ ಮಾಡಿದುದರಿಂದ ಭದ್ರತಾ ಸಮಸ್ಯೆ ಒದಗಿದೆ ಎಂದು ತಿಳಿಸಿದರೂ ಟಾನಿಯಾ ಅಲ್ಲಿಗೆ ಜೀಪಿನಲ್ಲಿ ಪ್ರಯಾಣಿಸಿದಳು.

ಚೆ ಗುವೇರಾನ ಆಜ್ಞೆಯನ್ನು ಟಾನಿಯಾ ಬಹಿರಂಗವಾಗಿಯೇ ಉಲ್ಲಂಘಿಸಿದ್ದಳು. ಅವಳು, ದಕ್ಷಿಣ ಅಮೇರಿಕದ ಕ್ರಾಂತಿಯ ಬೀಜವನ್ನೇ ಕಿತ್ತಿ ಹಾಕಲು ಪ್ರತಿಜ್ಞೆ ಮಾಡಿದ್ದಳು.

ನಾಂಚುರಿರ್ಷುನತ್ತ ಶೀಘ್ರ ಗತಿಯಲ್ಲಿ ಸಾಗುತ್ತಿದ್ದ ಜೀಪನ್ನು ಸೇನಾ ಕಾವಲು ಪಡೆ ತಡೆದು ನಿಲ್ಲಿಸಿ ಶೋಧಿಸಿದಾಗ ಅತಿ ಮಹತ್ವದ ವಸ್ತುಗಳು ಸೇನೆಗೆ ದೊರಕಿದ್ದವು. ನಗರದಲ್ಲಿ ಕೂಟಯೋಧರಿಗೆ ಮಾಹಿತಿ ಪೂರೈಸುತ್ತಿದ್ದವರ ಪತ್ತೆ, ಕ್ಯೂಬಾದ ಕೂಟಯೋಧ ರಿಕಾರ್ಡೋರ್‌ನ ಪತ್ರಗಳು ದೊರೆತವು. ಇದರ ಪರಿಣಾಮವಾಗಿ ಸೇನಾಪಡೆಯು ನಾಂಚುರಿರಷ್ ತೋಟವನ್ನು ಕಾಯಲು ಪ್ರಾರಂಭಿಸಿತು. ಮೇ ೧೩, ೧೯೬೭ರಂದು ಸೇನೆಯ ತುಕಡಿಯೊಂದು ತೋಟವನ್ನು ಪ್ರವೇಶಿಸಿದಾಗ ಅಲ್ಲಿದ್ದ ಕೂಟಯೋಧರು, ಸೇನೆಯ ಮೇಲೆ ದಾಳಿ ಮಾಡಿ ಅನೇಕ ಸೈನಿಕರನ್ನು ಕೊಂದು ಹಾಕಿದರು. ಚೆ ಗುವೇರಾ ಸಿದ್ಧವಾಗುವ ಮೊದಲೇ ದಾಳಿ ಆರಂಭವಾದುದರಿಂದ ಇದು ಆತನ ಮರಣಕ್ಕೆ ಕಾರಣವಾಯಿತು ಎಂದು ಪತ್ರಕರ್ತ ಡೆಬ್ರಿ ನುಡಿದಿದ್ದಾನೆ.

ಚೆ ಗುವೇರಾ ಅತ್ಯಂತ ನೋವಿನಿಂದ ತನ್ನ ದಿನವಹಿಯಲ್ಲಿ ಟಾನು ಟಾನಿಯಾಳನ್ನು ಗುರುತಿಸಲಾಗದಿರುವುದರಿಂದ, ಎರಡು ವರ್ಷದ ಶ್ರಮ ಕರಗಿಹೋಯಿತು ಎಂದು ತಿಳಿಸಿದ್ದಾನೆ. ಟಾನಿಯಾ ಚೆ ಗುವೇರಾನನ್ನು ಭೇಟಿಯಾದಾಗ ಅವನು ಟಾನಿಯಾಳ ಮೇಲೆ ಅತಿ ಕ್ರುದ್ಧನಾಗಿ ಒದರಾಡಿದ. ಟಾನಿಯಾ ಅಳುತ್ತ ಹೊರಗೆ ಹೋದಾಗ ಯಾರೂ ಅವಳನ್ನು ತಡೆಯಲಿಲ್ಲ.




"ಅಣ್ಣೋ ನೀನು ನಿನ್ನೆ 'ಅದಲು-ಬದಲು' ಚಿತ್ರಕ್ಕೆ ಹೋಗಿದ್ದೆ ತಪ್ಪಾಯಿತು. ಈಗ ನೋಡು ಎಂತ ಎಡವಟ್ಟು ಮಾಡಿದ್ದೀಯಾ...!"

ಟಾನಿಯಾ ತಾನು ಚೆ ಗುವೇರಾನ ಆಜ್ಞೆಯನ್ನು ಉಲ್ಲಂಘಿಸಿದುದರಿಂದ, ನಗರದಿಂದ ಬರುವ ವಸ್ತುಗಳ ಪೂರೈಕೆ ನಿಂತುಹೋಯಿತು ಎಂಬುದನ್ನು ಅರಿಯಲಿಲ್ಲ.

ಸೇನಾಪಡೆಯನ್ನು ಕೂಟಯೋಧ ಶಿಬಿರಕ್ಕೆ ನೇರವಾಗಿ ಕರೆದುಕೊಂಡು ಬಂದು ಅವಳು ಚೆ ಗುವೇರಾನ ಜೀವನ ತಂತುವನ್ನೆ ತುಂಡರಿಸಿದ್ದಳು. ರಶಿಯ, ಪೂರ್ವ ಜರ್ಮನಿಯ ಗೂಢಚಾರಿಣಿ ಯಾವ ವಿಫಲತೆಗೂ ಅವಕಾಶ ನೀಡದೆ ತನ್ನ ಪ್ರಿಯಕರನನ್ನು ಲಾಪಾರ್ಷ್ ಮತ್ತು ನಾಂಚುರಿರ್ಷಿನಲ್ಲಿ ಬಲೆಯಲ್ಲಿ ಸಿಗಿಸಿ ಬಿಟ್ಟಿದ್ದಳು. ಟಾನಿಯಾ ಈ ಘಟನೆಯ ನಂತರ ಶಿಬಿರವನ್ನು ಬಿಟ್ಟು ಹೋಗಲು ಯೋಚಿಸಿದ್ದಳು. ಆದರೆ ಅವಳು ಇಟ್ಟ ಸಿಡಿಮದ್ದು ಅವಳನ್ನು ಸಹ ಸುಟ್ಟುಹಾಕಿತು. ಸೇನಾಪಡೆ ಎಲ್ಲೆಡೆ ಕಾವಲು ಕಾಯಲು ಪ್ರಾರಂಭಿಸಿದುದರಿಂದ, ಕೂಟಯೋಧರೊಂದಿಗೆ ಶಿಬಿರ ತ್ಯಜಿಸಿ ಅವಳು ಪ್ರಯಾಣಿಸಬೇಕಾಯಿತು. ತೀವ್ರ ಜ್ವರದಿಂದ ಬಳಲುತ್ತಿದ್ದ ಅವಳು ಕೂಟಯೋಧರೊಂದಿಗೆ ಪ್ರಯಾಣಿಸಲು ಸಾಧ್ಯವಾಗಲಿಲ್ಲ. ಬೊಲಿವಿಯದ ದಟ್ಟಡವಿಯಲ್ಲಿ ಆಹಾರ ಸಿಕ್ಕದೆ, ವಿಶ್ರಾಂತಿ ಇಲ್ಲದೇ ಟಾನಿಯಾ ಆರೋಗ್ಯ ಹದಗೆಟ್ಟಿತು. ಅವಳ ಮಾನಸಿಕ ಸ್ಥಿತಿ ಸಹ ಉಲ್ಬಣವಾಗಿ ಅವಳು ಸದಾ 'ಸೇನೆ ಬಂತು ಸೇನೆ ಬಂತು' ಎಂದು ಚೀರುತ್ತಿದ್ದಳು.

ಟಾನಿಯಾ, ತನ್ನ ಗುಣಧರ್ಮಗಳಾದ ಜಗಳ, ಸಿಟ್ಟು, ಅಹಂಭಾವಗಳನ್ನು ಸದಾ ವ್ಯಕ್ತ ಮಾಡುತ್ತಿದ್ದಳು. ಇನ್ನುಳಿದ ಕೂಟಯೋಧರನ್ನು ಛೇಡಿಸಿ ದಡ್ಡರೆಂದು ಗೇಲಿ ಮಾಡುತ್ತಿದ್ದಳು. ತನ್ನ ಜಾಣತನದ ಗರ್ವದಿಂದ, ಯುರೋಪಿನ ಶಿಕ್ಷಣ, ಸೌಖ್ಯ ಜೀವನವನ್ನು ವಿವರಿಸಿ ಹೇಳುತ್ತಿದ್ದಳು. ಗ್ರಾಮಗಳಿಂದ ಬಂದ ಕೂಟಯೋಧರಿಗೆ, ಟಾನಿಯಾಳ ಮೇಲೆ ದ್ವೇಷವೇ ಪ್ರಾರಂಭವಾಯಿತು.

ನಿರಂತರ ಜಗಳಗಳು, ದಾರುಣವಾದ ತಾಪ, ಅರಣ್ಯ, ಗುಡ್ಡಗಳಲ್ಲಿ ಪ್ರಯಾಣ, ಹಸಿವೆ ಅವಳನ್ನು ಮಾನಸಿಕವಾಗಿ ಕ್ಷೀಣಗೊಳಿಸಿದ್ದವು. 'ನಾನು ಇದನ್ನು ತಡೆಯಲಾರೆ ನನಗೆ ಗುಂಡಿಕ್ಕಿರಿ' ಎಂದು ಒದರುತ್ತಿದ್ದಳು. ಈಗ ಅವಳು ಗರ್ಭಿಣಿಯಾಗಿದ್ದಳು, ಇದರಿಂದ ಕೂಟಯೋಧರ ಪ್ರಯಾಣ ಇನ್ನಷ್ಟು ಕುಂಠಿತವಾಯಿತು. ಹೀಗಾಗಿ ಕೂಟಯೋಧರು ಅವಳನ್ನು ಕಂಡರೆ ಬೆಂಕಿ ಕಾರತೊಡಗಿದರು. ಇದಲ್ಲದೇ ಕೂಟಯೋಧರ ವಿಕೃತ ಕಾಮದಿಂದ ಅವಳು ಜರ್ಜರತಳಾಗಿದ್ದಳು. ಜೋಸ್ಪಿನ್ ಮತ್ತು ಬ್ರೌಲಿಯೋ ಎಂಬ ಕೂಟಯೋಧರು, ನಗ್ನರಾಗಿ ಕಾಮಕೇಳಿಯಲ್ಲಿ ತೊಡಗಿದಾಗ ಟಾನಿಯಾ ಚೀರುತ್ತ ಓಡಿ ಹೋಗುತ್ತಿದ್ದಳು. ಏಕೆಂದರೆ, ಟಾನಿಯಾಳಿಗೆ ತೊಂದರೆ ಕೊಡುವುದೇ ಅವರ ಉದ್ದೇಶವಾಗಿರುತ್ತಿತ್ತು.

ಅವಳ ಕೊನೆ ಮಾತ್ರ ದಾರುಣವಾಗಿರಲಿಲ್ಲ. ದಣಿದ ಕೂಟಯೋಧರ ಗುಂಪು, ಅಗಸ್ಟ್ ೩೧, ೧೯೬೭ರಂದು ಮಾಸಿಕ್ಲುರಿ ನದಿಯ ಮುಖವನ್ನು ತಲಪಿತು. ಇದರ ಸುಳಿವನ್ನರಿತಿದ್ದ ಬೊಲಿವಿಯದ ಸೇನಾಪಡೆ ಇವರಿಗಾಗಿ ಕಾಯುತ್ತ ಕುಳಿತಿತ್ತು. ಕೂಟಯೋಧರು ತಮ್ಮ ಶಸ್ತ್ರಾಸ್ತ್ರ ಮುಂತಾದವುಗಳೊಂದಿಗೆ ನದಿಯನ್ನು ದಾಟುತ್ತಿದಾಗ ಸೇನೆಯು ಮಶಿನ್ ಗನ್ ದಾಳಿ ಆರಂಭಿಸಿತು. ಟಾನಿಯಾ ಹಿಂದೆ ಇದ್ದುದರಿಂದ ಗುಂಡಿಗೆ ಅವಳೇ ಮೊದಲು ಬಲಿಯಾದಳು. ಅನೇಕ ದಿನಗಳ ನಂತರ ಅವಳ ದೇಹ ದೊರಕಿತು. ಟಾನಿಯಾಳ ಹತ್ತಿರ ದೊರೆತ ಪಾಸ್ ಪೋರ್ಟು, ಕೆ. ಜಿ. ಬಿ. ಯ ಗುರುತಿನ ಚೀಟಿ ಮುಂತಾದವುಗಳಿಂದ ಅವಳನ್ನು ಗುರುತಿಸಲಾಯಿತು. ಇದಲ್ಲದೇ ಕಮ್ಯುನಿಸ್ಟ ಸಹಚಾರಿಗಳ ವಿಳಾಸ, ಅಮೇರಿಕನ್ ಜಾನಪದ ಸಂಗೀತದ ಟೇಪ್ ಸಹ ದೊರೆತವು. ಇದೇ ದಿಕ್ಕಿನಲ್ಲಿ ಬರುತ್ತಿದ್ದ ಚೆ ಗುವೇರಾನ ಗುಂಪನ್ನು ಸಹ ಸೇನೆ ಮುತ್ತಿಗೆ ಹಾಕಿ, ಕೊಂದುಹಾಕಿತು.

ಚೆ ಗುವೇರಾನ ಕೊನೆಯಾದಾಗ, ಲ್ಯಾಟಿನ್ ಅಮೇರಿಕದ ಅನೇಕ ಸರಕಾರಗಳು ನಿಟ್ಟುಸಿರು ಬಿಟ್ಟವು. ಆದರೆ, ಅವನ ಮರಣಕ್ಕೆ ಟಾನಿಯಾ ನಿಜವಾಗಿಯೂ ಕಾರಣಳಾದವಳೇ ಎಂಬುದು ಚರ್ಚಾಸ್ಪದ ವಿಷಯವಾಗಿದೆ. ◻



# ಚೆನ್ನಿ

ಇದೊಂದು ಹೆಣ್ಣು ನಾಯಿಯೊಂದರ ಬದುಕಿನ ಚಿತ್ರ. ಕೆಟ್ಟು ಪಟ್ಟಣ ಸೇರು ಎಂಬ ಗಾದೆ ಮನುಷ್ಯನಿಗೆ ಹೇಗೋ ಹಾಗೆಯೆ ಚೆನ್ನಿಗೂ ಅನ್ವಯಿಸಿತು. ಮನುಷ್ಯನ ಸ್ವಭಾವದ ಪ್ರತೀಕವಾಗಿ ಗಲ್ಲಿ ಗಲ್ಲಿ ತಿರುಗಿದ ಚೆನ್ನಿ ಪಡೆದ ಅನುಭವ ಅನುಕಂಪ ಮೂಡಿಸುವಂತಹುದಷ್ಟೇ ಅಲ್ಲ, ಆತ್ಮವಿಮರ್ಶೆಗೂ ಎಡೆಮಾಡಿಕೊಡುವಂತಹುದು.

ಜನರ ಅಂತಸ್ತನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಅಳೆಯುತ್ತಾರೆ. ನೌಕರರಾದರೆ ಅವರಿಗೆ ಬರುವ ಸಂಬಳ, ವ್ಯಾಪಾರಿಗಳಾದರೆ ಅವರ ವಾರ್ಷಿಕ ವರಮಾನ, ಲೇಖಕರಾದರೆ ಅವರು ಬರೆದಿರುವ ಗ್ರಂಥಗಳ ಸಂಖ್ಯೆ, ಜಮೀನುದಾರರಾದರೆ ಆಸ್ತಿ, ವಕೀಲರಾದರೆ ಅವರಿಗೆ ಬರುವ ಕೇಸುಗಳ ಸಂಖ್ಯೆ–ಹೀಗೆ ಒಂದೊಂದು ಅಳತೆಗೋಲನ್ನು ಬಳಸುತ್ತಾರೆ. ಆದರೆ ಗೊಲ್ಲಳ್ಳಿ ಚನ್ನೇಗೌಡರ ಅಳತೆಗೋಲೇ ಬೇರೆ. ಮನೆಯಲ್ಲಿ ಎಷ್ಟು ಸೊಲಿಗೆ ಕುರಿಗಳಿವೆ ಎಂದು ಅವರು ಲೆಕ್ಕ ಹಾಕುತ್ತಾರೆ. ಒಂದು ಸೊಲಿಗೆ ಎಂದರೆ ೫೦ ಕುರಿಗಳು. ಹತ್ತು ಸೊಲಿಗೆ ಇರುವವನು ಶ್ರೀಮಂತ, ಐದು ಸೊಲಿಗೆ ಇರುವವನು ಸ್ಥಿತಿವಂತ, ಮೂರು ಸೊಲಿಗೆ ಇರುವವನು ಸಾಧಾರಣ, ಎರಡು ಸೊಲಿಗೆ, ಒಂದು ಸೊಲಿಗೆ ಇರುವವನು ಕಡು ಬಡವ, ಒಂದು ಸೊಲಿಗೆಗೂ ಕಡಿಮೆಯಿರುವವನು ನಿರ್ಗತಿಕ – ಹೀಗೆ ಇವರ ಲೆಕ್ಕ. ತಮ್ಮ ಮನೆಯಲ್ಲಿ ೧೦ ಸೊಲಿಗೆಗಿಂತ ಹೆಚ್ಚು ಕುರಿಗಳನ್ನು ಸಾಕಿದ್ದರು. ಕುರಿಗಳ ಸಂಖ್ಯೆ ಹೆಚ್ಚಿದರೆ ಧರೆಗೆ ಕ್ಷೇಮವೆಂದು ಹೇಳುತ್ತಿದ್ದರು. ಕುರಿಯಂಥ ಸಾಧು ಪ್ರಾಣಿ ಮತ್ತೊಂದಿಲ್ಲ. ಎಷ್ಟೇ ಕಷ್ಟ ಬರಲಿ, ತಲೆ ತಗ್ಗಿಸಿಕೊಂಡೇ ಇರುತ್ತದೆ. ಅಂತಹ ಮುಗ್ಧ ಪ್ರಾಣಿಗಳು ಇರುವುದರಿಂದಲೇ ಇನ್ನೂ ಭೂಮಿಯ ಮೇಲೆ ಮಳೆ, ಬೆಳೆ ಆಗುತ್ತದೆಂದು ಸಾರಿ ಹೇಳುತ್ತಿದ್ದರು. ಇವರಿಗೆ ಕುರಿಯ ಮೇಲಿರುವ ಮಮತೆ ಅಥವಾ ಹುಚ್ಚಿನಿಂದಾಗಿ ಸುತ್ತ ಹಳ್ಳಿಯ ಜನರು ಇವರನ್ನು 'ಕುರಿ ಚನ್ನೇಗೌಡ'ರೆಂದೇ ಕರೆಯುತ್ತಿದ್ದರು.

ತಮ್ಮ ಈ ಕುರಿಯ ಮೋಹದಿಂದಾಗಿ ಇವರು ಒಂದು ಸಾರಿ ಪೇಚಿಗೆ ಸಿಕ್ಕಿದರು. ತಂಗಿ ಸಿದ್ದಿಯನ್ನು ಚಿಕ್ಕಳ್ಳಿ ದ್ಯಾವನಿಗೇ ಕೊಡಬೇಕೆಂದು ಚನ್ನೇಗೌಡರ ತಂದೆಯವರು ಹಟ ಹಿಡಿದರು. "ನನ್ನ ಮಗಳನ್ನು ನನ್ನ ತಂಗಿಯ ಮಗನಿಗೆ ಕೊಡದೇ ಯಾರಿಗೆ ಕೊಡಲಿ?" ಎಂದು ಪಟ್ಟು ಹಿಡಿದರು. ಸಿದ್ದಿಗೂ ದ್ಯಾವನ ಮೇಲೆ ಮನಸ್ಸಿತ್ತು. ಚನ್ನೇಗೌಡರು ಇಕ್ಕಟ್ಟಿಗೆ ಸಿಕ್ಕಿ ಬಿದ್ದರು. ತಂದೆಯ ಮಾತನ್ನು ಮೀರುವುದು ಈ ಜನ್ಮದಲ್ಲಿ ಸಾಧ್ಯವಿರಲಿಲ್ಲ. ತಂಗಿಯೂ ದ್ಯಾವನನ್ನು ಮೆಚ್ಚಿಕೊಂಡಿದ್ದಾಳೆ. ಆದರೆ ದ್ಯಾವನಿಗೆ ಏನಿದೆ? ಕೇವಲ ಎರಡು ಸೊಲಿಗೆ ಕುರಿ. ಇಂತಹ ಬಡವನಿಗೆ ತನ್ನ ತಂಗಿಯನ್ನು ಕೊಡುವುದಕ್ಕೆ ಅವರ ಮನಸ್ಸೊಪ್ಪಲಿಲ್ಲ. ಇದ

ಕ್ಕೇನು ಮಾಡುವುದು? ಹಿರಿಯರ ಮಾತೂ ಉಳಿಯಬೇಕು, ತನ್ನ ಅಂತಸ್ತೂ ಉಳಿಯಬೇಕು; ಅವರಿಗೆ ಒಂದು ದಾರಿ ಹೊಳೆಯಿತು. ತಂಗಿಗೆ ಬಳುವಳಿಯಾಗಿ ಮೂರು ಸೊಲಿಗೆ ಕುರಿಯನ್ನು ಕೊಟ್ಟರೆ ದ್ಯಾವನ ಕುರಿಗಳೂ ಸೇರಿ ಐದು ಸೊಲಿಗೆಯಾಗುತ್ತವೆ. ದ್ಯಾವನೂ ಸ್ಥಿತಿವಂತ ನೆನಿಸಿಕೊಳ್ಳುತ್ತಾನೆ. ಹೀಗೆ ಯೋಚಿಸಿ ತಂಗಿಯ ಮದುವೆಗೆ ಒಪ್ಪಿ ಮೂರು ಸೊಲಿಗೆ ಕುರಿಗಳನ್ನು ತಂಗಿಗೆ ಬಳುವಳಿಯಾಗಿ ಕೊಟ್ಟರು.

ಚನ್ನೇಗೌಡರಿಗೆ ಈ ಕುರಿಯ ಮೋಹದ ಜೊತೆಗೆ ಮತ್ತೊಂದು ಮೋಹವೂ ಇತ್ತು. ಅದು ನಾಯಿ ಸಾಕುವುದು. ಕುರಿ ಸಾಕುವವರಿಗೆ ನಾಯಿಗಳು ಬೇಕೇ ಬೇಕು. ಕಳ್ಳರು ಬಂದಾಗ, ತೋಳ-ಚಿರತೆಗಳು ಕುರಿಮಂದೆಗೆ ನುಗ್ಗಿದಾಗ ನಾಯಿಗಳು ಜೀವದ ಹಂಗು ಬಿಟ್ಟು ಹೋರಾಡಿ ಕುರಿಗಳನ್ನು ರಕ್ಷಿಸುತ್ತವೆ. ಚನ್ನೇಗೌಡರು ನಾಲ್ಕೈದು ನಾಯಿಗಳನ್ನು ಸಾಕಿದ್ದರು. ಒಂದೊಂದಕ್ಕೂ ಅದರ ಬಣ್ಣ, ಗಾತ್ರಕ್ಕೆ ತಕ್ಕಂಥ ಹೆಸರಿಟ್ಟಿದ್ದರು. ಕರಿ ನಾಯಿಗೆ ಕರಿಯ, ಬಿಳಿ ನಾಯಿಗೆ ಬಿಳಿಯ ಎಂದು ಕರೆಯುತ್ತಿದ್ದರು. ಹೆಣ್ಣು ನಾಯಿಗಳಿಗೆ ಚೆನ್ನಿ, ಭೈರಿ, ಈರಿ ಎಂದು ಹೆಸರಿಟ್ಟಿದ್ದರು. ಈ ನಾಯಿಗಳಿಗೆ ಹಿಟ್ಟನ್ನು ತಾವೇ ಹಾಕುತ್ತಿದ್ದರು. ಅಲ್ಲದೆ ಮನೆಯ ಮತ್ತಾರೂ ತಿಂಡಿ ಹಾಕದಂತೆ ಹೇಳಿದ್ದರು. ಏಕೆಂದರೆ, ಹಲವು ಜನರ ಕೈತುತ್ತಿನ ಪಾಠವಾದರೆ ನಾಯಿಗಳು ಕಳ್ಳರು ಹಾಕಿದ ಹಿಟ್ಟನ್ನೂ ತಿಂದು ಸುಮ್ಮನಿರುತ್ತವೆ. ಆದುದರಿಂದ ಹಿಟ್ಟನ್ನು ತುತ್ತು ಮಾಡಿ ಎಲ್ಲಾ ನಾಯಿಗಳನ್ನು ನಿಲ್ಲಿಸಿ ತುತ್ತನ್ನು ಮೇಲಕ್ಕೆ ಎಸೆಯುತ್ತಿದ್ದರು. ನಾಯಿಗಳು ಛಂಗನೆ ಹಾರಿ ಆ ತುತ್ತು ನೆಲಕ್ಕೆ ಬೀಳದಂತೆ ಹಿಡಿದುಕೊಳ್ಳುತ್ತಿದ್ದುವು. ಈ ದೃಶ್ಯ ಮಕ್ಕಳಿಗೊಂದು ತಮಾಷೆಯಾಗಿ ಕಂಡು ಅವು ಅಚ್ಚರಿಪಡುತ್ತಿದ್ದುವು. ಇತರ ಜನ ಇವರ ಶ್ವಾನ ಪ್ರೀತಿಯನ್ನು ನೋಡಿ, "ಹಿಂದಿನ ಜನ್ಮದಲ್ಲಿ ಇವರೂ ನಾಯಿಯಾಗಿದ್ದರೇನೋ," ಎಂದು ಹಾಸ್ಯ ಮಾಡುತ್ತಿದ್ದರು. ಚನ್ನೇಗೌಡರು ಮಾತ್ರ ಯಾರು ಏನಾದರೂ ಅನ್ನಲಿ, ನಾಯಿ ನಾರಾಯಣ, ಕುರಿ ಪರಮೇಶ್ವರ ಎಂದೇ ಭಾವಿಸಿದ್ದರು.

ಒಂದು ವರ್ಷ ಚಿಕ್ಕಳ್ಳಿಯ ಸುತ್ತಮುತ್ತ ಕುರಿಯ ಮೇವಿಗೆ ಕೊರತೆಯಾಯಿತು. ಕೆರೆ ಕಟ್ಟೆಗಳು ಒಣಗಿ ಕುಡಿಯಲು ನೀರು ಸಿಗದಂತಾಯಿತು. ದ್ಯಾವ ಕುರಿಗಳನ್ನು ಹೊಡೆದುಕೊಂಡು ಗೊಲ್ಲಳ್ಳಿಗೆ ಬಂದ. ಚನ್ನೇಗೌಡರ ಕುರಿಗಳ ಜೊತೆ ತನ್ನ ಕುರಿಗಳನ್ನೂ ಬಿಟ್ಟ. ಎರಡು ತಿಂಗಳು ಗೊಲ್ಲಳ್ಳಿಯಲ್ಲೇ ನಿಂತ. ಅವನು ಕುರಿಗಳ ಜೊತೆ ನಾಯಿಗಳನ್ನೂ ಕರೆ ತಂದಿದ್ದ. ದ್ಯಾವನ ನಾಯಿಗಳೂ ಗೌಡರ ನಾಯಿಗಳೂ ಮೊದಮೊದಲು ಜಗಳವಾಡುತ್ತಿದ್ದವು. ಕ್ರಮೇಣ ಅವು ಹೊಂದಿಕೊಂಡವು. ದ್ಯಾವನ ನಾಯಿಗಳಲ್ಲಿ ಒಂದು ದೆವ್ವದಂಥ ನಾಯಿಯಿತ್ತು. ದ್ಯಾವ ಅದನ್ನು 'ದೋಮ' ಎಂದು ಕರೆಯುತ್ತಿದ್ದ. ದೂರದಿಂದ ನೋಡಿದರೆ ಅದೊಂದು ತೋಳದಂತೆ ಕಾಣುತ್ತಿತ್ತು. ಬೊಗಳಿದಾಗ ಹುಲಿ ಗರ್ಜಿಸಿದಂತಾಗುತ್ತಿತ್ತು. ಇಂತಹ ಭೀಮಕಾಯದ ನಾಯಿಗೆ ಚನ್ನೇಗೌಡರ ಹೆಣ್ಣು ನಾಯಿ ಚೆನ್ನಿ ಮನ ಸೋತಿತು. ಚೆನ್ನಿ ಸದಾ ದೋಮನ ಜೊತೆಯಲ್ಲೇ ಇರುತ್ತಿತ್ತು. ಕುರಿಯ ಜೊತೆ ಕಾವಲಿಗೆ ಹೋದಾಗ ದೋಮನ ಕೂಡ ಚಕ್ಕಂದವಾಡುತ್ತಿತ್ತು. ದೋಮನ ಮೇಲೆ ಬಿದ್ದು, ಅದನ್ನು ಕೆಡವಿ ಕೈಗೆ ಸಿಗದಂತೆ ದೂರ ಓಡಿ ಹೋಗುತ್ತಿತ್ತು. ದೋಮನೂ ಚೆನ್ನಿಗೆ ಮನ ಸೋತಿತು.

ಬೇಸಿಗೆ ಮುಗಿದು ಮಳೆಗಾಲ ಬಂದಿತು. ದ್ಯಾವ ತನ್ನ ಊರಿಗೆ ಹೊರಡಲು ಅನುವಾದ. ತನ್ನ ಕುರಿಗಳನ್ನು ಚನ್ನೇಗೌಡರ ಕುರಿಗಳಿಂದ ವಿಂಗಡಿಸಿದ. ಎಲ್ಲ ಕುರಿಗಳೂ ಒಂದೇ ತರಹ ಕಂಡರೂ ಕುರಿ ಕಾಯುವವರು ತಮ್ಮ ಕುರಿಗಳನ್ನು ಸುಲಭವಾಗಿ ಗುರುತಿಸುತ್ತಾರೆ. ದ್ಯಾವ ತನ್ನ ಕುರಿಗಳನ್ನು ಹೊಡೆದುಕೊಂಡು ಹೊರಟ. ಅವನ ಎಲ್ಲ ನಾಯಿಗಳೂ ಅವನ ಹಿಂದೆ ಹೊರಟವು. ಆದರೆ ದೋಮ ಮಾತ್ರ ಕಾಣಲಿಲ್ಲ. ಕೂಗಿದ; ಸುತ್ತಲೂ ನೋಡಿದ. ದೋಮ ಚೆನ್ನಿಯ ಜೊತೆ ದೂರದಲ್ಲಿ ನಿಂತು ನೋಡುತ್ತಿತ್ತು. ಎಷ್ಟು ಕರೆದರೂ ಬರಲಿಲ್ಲ. ಕೋಲು ಹಿಡಿದುಕೊಂಡು ಹತ್ತಿರಕ್ಕೆ ಹೋದ. ದೋಮ ಚೆನ್ನಿಯೊಡನೆ ದೂರ ಓಡಿತು. ದ್ಯಾವ

ಹೋದಂತೆಲ್ಲಾ ಅದು ದೂರ ಹೋಗುತ್ತಿತ್ತು. ಇದನ್ನು ಕಂಡು ಚನ್ನೇಗೌಡರು, "ಹೋಗ್ಲಿ ಬಿಡು ದ್ಯಾವ, ನೀನು ನಮಗೆ ನೆಂಟ, ನಿನ್ನ ದೋಮನೂ ನೆಂಟ," ಎಂದು ನಕ್ಕರು. ದ್ಯಾವ ದೋಮನನ್ನು ಗೊಲ್ಲಳ್ಳಿಯಲ್ಲೇ ಬಿಟ್ಟು ಇತರ ನಾಯಿಗಳೊಂದಿಗೆ ಕುರಿಗಳನ್ನು ಹೊಡೆದು ಕೊಂಡು ಹೋದ.

ದ್ಯಾವನು ದೂರ ಹೋದ ಮೇಲೆ ದೋಮನೂ ಚೆನ್ನಿಯೂ ಮೆಲ್ಲನೆ ಕಾಲು ಹಾಕುತ್ತ ಮನೆಯ ಹತ್ತಿರ ಬಂದವು. ಗೌಡರು ನಗುತ್ತಾ, "ಬಾರೋ ಅಳಿಯಯ್ಯ," ಎಂದು ದೋಮನನ್ನು ಕರೆದರು. ದೋಮ ಅಂಜುತ್ತಲೇ ಬಂತು. ಗೌಡರು ಅದರ ಬೆನ್ನು ಸವರಿ, "ನೀನಿನ್ಮೇಲೆ ಇಲ್ಲೇ ಇರು. ಚೆನ್ನಿ ಕೊಟ್ಟು ಮದ್ವೇ ಮಾಡ್ತೀನಿ," ಎಂದು ನಕ್ಕರು. ದೋಮ ಒಪ್ಪಿಕೊಂಡಂತೆ ಕುಂಯಿಗುಟ್ಟಿತು. ಗೌಡರ ಮಾತನ್ನು ಕೇಳಿ ಚೆನ್ನಿಗೆ ನಾಚಿಕೆಯಾಯಿತೋ ಏನೋ, ಅದೂ ಕುಂಯಿಗುಟ್ಟಿತು.

ಸ್ವಾತಂತ್ರ್ಯಪೂರ್ವ ಭಾರತದ ಹಲವು ದೇಶೀಯ ಸಂಸ್ಥಾನದ ರಾಜರುಗಳು ಲಕ್ಷಾಂತರ ರೂಪಾಯಿ ಖರ್ಚು ಮಾಡಿ ನಾಯಿಗಳಿಗೆ ಮದುವೆ ಮಾಡುತ್ತಿದ್ದರಂತೆ. ಅವುಗಳ ಸುಖ ಸಂಸಾರಕ್ಕೆ ತಮ್ಮ ಬೊಕ್ಕಸದಿಂದ ಹೇರಳವಾದ ಹಣವನ್ನು ಮೀಸಲಾಗಿಡುತ್ತಿದ್ದರಂತೆ. ಆದರೆ ಗೊಲ್ಲಳ್ಳಿಯಲ್ಲಿ ದೋಮ-ಚೆನ್ನಿಯರಿಗೆ ಯಾರೂ ಮದುವೆ ಮಾಡದಿದ್ದರೂ ಅವು ಗಂಡ ಹೆಂಡಿರಾಗಿಯೇ ಮೆರೆದವು. ರಾಜರ ಅರಮನೆಯಲ್ಲಿ ವಿಧ್ಯುಕ್ತವಾಗಿ ಮದುವೆಯಾದ ನಾಯಿಗಳಷ್ಟೇ ಇವೂ ಸಂತೋಷದಿಂದಿದ್ದವು.

ನಾಯಿಗಳ ಸಮಾಜದಲ್ಲಿ ಬಲಿಷ್ಠನದೇ ಆಡಳಿತ. ಬಲಿಷ್ಠ ನಾಯಿ ಬಂದಿತೆಂದರೆ ಇತರ ನಾಯಿಗಳು ಬಾಲ ಮುರಿದುಕೊಂಡು ದೂರ ಹೋಗುತ್ತವೆ. ದೋಮನನ್ನು ಕಂಡರೆ ಇತರ ನಾಯಿಗಳು ಹೆದರುತ್ತಿದ್ದುವು. ಅವುಗಳಿಗೂ ಚೆನ್ನಿಯ ಮೇಲೆ ಮನಸ್ಸಿತ್ತು. ಚೆನ್ನಿಯ ಅಂದ ಚೆಂದಗಳಿಗೆ ಅವುಗಳೂ ಮಾರುಹೋಗಿದ್ದುವು. ಆದರೆ ದೋಮನ ಭಯಕ್ಕೆ ತಮ್ಮ ಆಸೆಯನ್ನು ಕೈ ಬಿಟ್ಟವು. ಎಟುಕದ ವಸ್ತುವಿಗೆ ಏಕೆ ಕೈ ನೀಡಬೇಕೆಂದು ಸುಮ್ಮನಾದವು. ದೋಮ-ಚೆನ್ನಿ ರಾಜ - ರಾಣಿಯರಂತೆ ವಿಹರಿಸುತ್ತಿದ್ದುವು. ಅವೆರಡೇ ಇದ್ದಾಗ ಯಾವ ನಾಯಿಯೂ ಅವುಗಳತ್ತ ಸುಳಿಯುತ್ತಿರಲಿಲ್ಲ. ಅವು ತಿರುಗುತ್ತಿದ್ದ ಹಾದಿಯಲ್ಲಿ ಇತರ ನಾಯಿಗಳು ಮರೆತೂ ಹೋಗುತ್ತಿರಲಿಲ್ಲ. ಹಾಗಿತ್ತು ದೋಮನ ಭಯ.

ಚಿತ್ತಿ ಮಳೆ ನಾಯಿಗಳಿಗೆ ವಸಂತ ಮಾಸ ವಿದ್ದಂತೆ. ಆಗ ಎಲ್ಲ ನಾಯಿಗಳ ಮನಸ್ಸೂ ಮಿಡಿಯುತ್ತದೆ. ತಮ್ಮ ಸಂಗಾತಿಗಳ ಜೊತೆ ಮಿಲನಕ್ಕೆ ಹಾತೊರೆಯುತ್ತವೆ. ದೋಮನೂ ಚೆನ್ನಿಯೂ ಅಂಕೆ ಇಲ್ಲದೆ ವಿಹರಿಸಿದುವು. ಒಂದನ್ನೊಂದು ಓಡಿಸಿಕೊಂಡು ಹೋಗುವುದು, ಸುಸ್ತಾಗಿ ಎರಡೂ ಒಂದು ಕಡೆ ಎದುರು ಬದುರು ಕುಳಿತು ಕೊಳ್ಳುವುದು, ಮತ್ತೆ ಓಡಾಡುವುದು, ಒಂದರ ಬಾಲವನ್ನು ಮತ್ತೊಂದು ಕಚ್ಚಿ ಎಳೆಯುವುದು, ಮೇಲೆ ಬಿದ್ದು ಒದ್ದಾಡುವುದು, ಹೀಗೆ ಚೆಲ್ಲಾಟ ವಾಡಿದವು. ಚೆನ್ನಿ ಅತ್ತ ಇತ್ತ ಕೈಗೆ ಸಿಕ್ಕದಂತೆ ಓಡಾಡಿ ದೋಮನನ್ನು ಚೆನ್ನಾಗಿ ದಣಿಯುವಂತೆ ಮಾಡಿತು. ನಲ್ಲನನ್ನು ಹೆಚ್ಚು ದಣಿಸಿ ಸತಾಯಿಸುವುದು ತರವಲ್ಲವೆಂದು ಮರುಕಪಟ್ಟು ದೋಮನಿಗೆ ತನ್ನ ದೇಹವನ್ನೊಡ್ಡಿ ನಿಂತಿತು. ದೋಮ ತನ್ನ ಸರ್ವಶಕ್ತಿಯಿಂದ ಚೆನ್ನಿಯ ಸರ್ವಸ್ತ್ರೀತ್ವವನ್ನು ಸೂರೆಗೈವಂತೆ ಅದರ ಮೇಲಡರಿ ಬಿಗಿದಪ್ಪಿತು. ಆ ಅಪ್ಪುಗೆಯ ಆನಂದಕ್ಕೆ ಚೆನ್ನಿಗೆ ರೋಮಾಂಚನವಾಯಿತು.

ಒಂದು ರಾತ್ರಿ ಕುರಿಯ ಮಂದೆಯನ್ನು ತೋಟದಲ್ಲಿ ಬಿಟ್ಟಿದ್ದರು. ಸುಮಾರು ಎಂಟು ಗಂಟೆ ಇರಬಹುದು. ತಿಂಗಳು ಬೆಳಕು ಹಾಲು ಚೆಲ್ಲಿದಂತಿತ್ತು. ಚನ್ನೇಗೌಡರು ಊಟಕ್ಕೆ ಮನೆಗೆ ಹೋಗಿದ್ದರು. ಮನೆಯೇನೂ ದೂರವಿರಲಿಲ್ಲ. ಆಗ ಎಲ್ಲಿ ಕಾದಿತ್ತೋ ಒಂದು ತೋಳ ಬಂದು ಕುರಿಯ ಮಂದೆಯನ್ನು ಹೊಕ್ಕಿತು. ಕುರಿಗಳೆಲ್ಲಾ ಒಮ್ಮೆಲೆ ಬ್ಯಾ ಎಂದು ಅರಚಿಕೊಂಡು ಓಡಾಡಿದುವು. ದೋಮ ಹುಲಿಯಂತೆ ಛಂಗನೆ ಹಾರಿ ತೋಳನ ಕುತ್ತಿಗೆಯನ್ನು ಹಿಡಿಯಿತು. ತೋಳ ಎಷ್ಟಾದರೂ ಕಾಡು ಪ್ರಾಣಿ. ದೋಮನ ಬಾಯಿಂದ ತಪ್ಪಿಸಿಕೊಂಡಿತು. ಎದುರಿಗೆ ಬಂದ

ಚೆನ್ನಿಯನ್ನು ಕಚ್ಚಿ ದೂರ ಎಸೆಯಿತು. ಇತರ ನಾಯಿಗಳನ್ನು ಹತ್ತಿರ ಸೇರಗೊಡಲಿಲ್ಲ. ದೋಮ ಮತ್ತೊಮ್ಮೆ ಆಕ್ರಮಣ ಮಾಡಿತು. ತೋಳ ದೋಮನ ಕಿಬ್ಬೊಟ್ಟೆಯನ್ನು ಕಚ್ಚಿ ಎಳೆದಾಗ ದೋಮನ ಕರುಳು ಈಚೆಗೆ ಬಂದಿತು. ಅದು ನಿತ್ರಾಣವಾಗಿ ನೆಲಕ್ಕೊರಗಿತು. ತಮ್ಮ ಜೊತೆಯ ನಾಯಿ ನೆಲಕ್ಕೆ ಬಿದ್ದುದನ್ನು ನೋಡಿ ಇತರ ನಾಯಿಗಳು ಜೋರಾಗಿ ಬೊಗಳುತ್ತಾ ಒಮ್ಮೆಲೆ ತೋಳದ ಮೇಲೆ ಎರಗಿದವು. ತೋಳನಿಗೂ ಆಗಲೇ ಶಕ್ತಿ ಕುಗ್ಗುತ್ತಾ ಬಂದಿತು. ಇಷ್ಟು ನಾಯಿಗಳನ್ನು ಎದುರಿಸುವುದು ಅಶಕ್ಯವೆಂದು ತಿಳಿದು ತೋಳ ಕಾಲಿಗೆ ಬುದ್ಧಿ ಹೇಳಿತು. ಚೆನ್ನಿಯು ಓಡಿ ಹೋಗಿ ತೋಳನ ಒಂದು ಹಿಂಗಾಲನ್ನು ಹಿಡಿದುಕೊಂಡಿತು. ತೋಳ ತಿರುಗಿದಂತೆಲ್ಲಾ ಚೆನ್ನಿಯೂ ತಿರುಗಿ ತೋಳಕ್ಕೆ ಬಾಯಿ ಹಾಕಲು ಅವಕಾಶ ಕೊಡಲಿಲ್ಲ. ಇತರ ನಾಯಿಗಳು ತೋಳದ ಮೈಮೇಲೆ ಬಿದ್ದು ಕಚ್ಚಿ ಅದನ್ನು ಅರೆ ಜೀವ ಮಾಡಿದವು.

ಸಾವಿರಾರು ಕುರಿಗಳು ಒಂದೇ ಸಮನೆ ಬ್ಯಾಂ ಎಂದು ಅರಚುತ್ತಿದ್ದುದು ಸಮುದ್ರದ ಗರ್ಜನೆಯಂತೆ ಕೇಳಿಸುತ್ತಿತ್ತು. ನಾಯಿಗಳ ಕೂಗಾಟವೂ ಜೋರಾಗಿತ್ತು. ಊಟಕ್ಕೆ ಕುಳಿತ ಗೌಡರು ಈ ಸದ್ದನ್ನು ಕೇಳಿ ತೋಟಕ್ಕೆ ಓಡಿ ಬಂದರು. ಗೌಡರನ್ನು ನೋಡುತ್ತಿದ್ದಂತೆ ನಾಯಿಗಳ ಧೈರ್ಯ ಇಮ್ಮಡಿಯಾಯಿತು. ಅರೆಜೀವವಾಗಿದ್ದ ತೋಳವನ್ನು ಪೂರ್ಣ ಮುಗಿಸಿಯೇಬಿಟ್ಟವು. ಗೌಡರಿಗೆ ನಡೆದ ಸಂಗತಿ ಅರಿವಾಯಿತು. ದೋಮ ಸತ್ತುಹೋಗಿತ್ತು. ಚೆನ್ನಿ ಸೊರಗಿ ನೆಲದ ಮೇಲೆ ಬಿದ್ದಿತ್ತು. ಇತರ ನಾಯಿಗಳ ಮೈಯೆಲ್ಲಾ ರಕ್ತಮಯವಾಗಿತ್ತು. ತೋಳ ನಾಲಿಗೆ ಚಾಚಿಕೊಂಡು ಸತ್ತುಬಿದ್ದಿತ್ತು. ಗೌಡರನ್ನು ನೋಡಿ ಚೆನ್ನಿ ಕುಂಯಿಗುಟ್ಟುತ್ತಾ ಮೇಲೇಳಲು ಪ್ರಯತ್ನ ಮಾಡಿತು. ಆದರೆ ಅದು ಸಂಪೂರ್ಣ ನಿಶ್ಶಕ್ತವಾಗಿತ್ತು. ಅದರ ಹೊಟ್ಟೆಗೆ ಏಟು ಬಿದ್ದಿತ್ತು. ಮಲಗಿದ್ದಲ್ಲಿಯೇ ಕುಂಯಿಗುಟ್ಟಿತು. ಗೌಡರು ಹತ್ತಿರ ಹೋಗಿ ಅದರ ಮೈದಡವಿದರು. ಸತ್ತು ಬಿದ್ದಿದ್ದ ದೋಮನನ್ನು ನೋಡಿ ಅವರಿಗೆ ಬಹಳ ವ್ಯಥೆಯಾಯಿತು. ಅಷ್ಟರಲ್ಲಿ ಮನೆಯಿಂದ ಇನ್ನಿಬ್ಬರು ಬಂದರು. ಅವರು ನಾಯಿಗಳ ಶೌರ್ಯವನ್ನು ನೋಡಿ ಬೆರಗಾದರು. ಬೇಲಿಯಿಂದ ರೋಜಾ ಸೊಪ್ಪನ್ನು ತಂದು, ಹೊಸಕಿ ಅದರ ರಸವನ್ನು ನಾಯಿಗಳ ಗಾಯಕ್ಕೆ ಲೇಪಿಸಿದರು. ಮರುದಿನ ಸತ್ತುಹೋದ ದೋಮನನ್ನು ಒಂದು ಮರದ ಕೆಳಗೆ ಹೂತರು. ಚೆನ್ನಿಯೂ ಇತರ ನಾಯಿಗಳೂ ಕಂಬನಿದುಂಬಿ ತಮ್ಮ ಗೆಳೆಯನ ಅಂತ್ಯದರ್ಶನ ಪಡೆದವು.

ಚೆನ್ನಿಯು ಹೊಟ್ಟೆಗೆ ಏಟು ಬಿದ್ದಿದ್ದರಿಂದ ಅದಕ್ಕೆ ಗರ್ಭಸ್ರಾವವಾಯಿತು. ಚೆನ್ನಿಯ ಮನಸ್ಸಿನ ಮೇಲೆ ಆದ ಆಘಾತ ಅಷ್ಟಿಷ್ಟಲ್ಲ. ಹಿಟ್ಟು ತಿನ್ನುವುದನ್ನು ಬಿಟ್ಟಿತು. ಮಂದೆಯ ಹತ್ತಿರವೂ ಹೋಗುತ್ತಿರಲಿಲ್ಲ. ಮನೆಯ ಬಾಗಿಲಲ್ಲಿ ಒಂದು ಕಡೆ ಸದಾ ಮಲಗಿರುತ್ತಿತ್ತು. ಅದರ ಕಣ್ಣು ಸದಾ ತೇವವಾಗಿರುತ್ತಿತ್ತು. ಮುಖದಲ್ಲಿ ಶೋಕ ಎದ್ದು ಕಾಣುತ್ತಿತ್ತು. ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ದೋಮನನ್ನು ನೆನೆಯುತ್ತಿತ್ತು. ಗೌಡರು ಹಿಟ್ಟು ತಂದಾಗ ಯಾಂತ್ರಿಕವಾಗಿ ತಿನ್ನುತ್ತಿತ್ತು. ಗೌಡರು ಅದರ ತಲೆ ಸವರಿದಾಗ ಅಳುವ ಮಕ್ಕಳು ತಾಯಿಯನ್ನು ನೋಡುವಂತೆ ಗೌಡರ ಮುಖವನ್ನು ನೋಡಿ ಕುಂಯಿಗುಡುತ್ತಿತ್ತು. ಹತ್ತಾರು ದಿನಗಳಾದ ಮೇಲೆ ಎದ್ದು ತಿರುಗಾಡತೊಡಗಿತು. ಗೌಡರು ಚೆನ್ನಿಯನ್ನು ಮನೆಯ ಹತ್ತಿರವೇ ಬಿಟ್ಟರು. ಅದಕ್ಕೆ ಸರಿಯಾಗಿ ಹಿಟ್ಟು ಹಾಕುವಂತೆ ಮನೆಯವರಿಗೆ ಹೇಳಿದರು.

ಸತ್ತವರ ಜೊತೆ ಮನುಷ್ಯರೇ ಸಾಯುವುದಿಲ್ಲ. ಅಂದಮೇಲೆ ಮೂಕ ಪ್ರಾಣಿಗಳು ಸಾಯುತ್ತವೆಯೆ? ಚೆನ್ನಿ ದೋಮನ ವಿರಹವನ್ನು ಮರೆಯಿತು. ಮುಂಚಿನಂತೆ ಓಡಾಡತೊಡಗಿತು. ಗೌಡರ ಚಿಕ್ಕ ಮಕ್ಕಳ ಜೊತೆ ಆಟವಾಡಿಕೊಂಡು ಮನೆಯಲ್ಲೇ ಇರುತ್ತಿತ್ತು.

ಗೌಡರ ಮಗ ತುಮಕೂರಿನಲ್ಲಿ ಕಾಲೇಜು ವ್ಯಾಸಂಗ ಮಾಡುತ್ತಿದ್ದ. ಕಾಲೇಜಿನ ಹಿಂದೆ ಒಂದು ಆಂಗ್ಲೋ – ಇಂಡಿಯನ್ ಸಂಸಾರವಿತ್ತು. ಅವರು ಹಲವು ಜಾತಿಯ ನಾಯಿಗಳನ್ನು ಸಾಕಿದ್ದರು. ಆ ನಾಯಿಗಳನ್ನು ನೋಡಿದಾಗ ಗೌಡರ ಮಗನಿಗೆ ತಾನೂ ಒಂದು ಜಾತಿ ನಾಯಿ

ಯನ್ನು ಸಾಕಬೇಕೆಂದು ಮನಸ್ಸಾಗುತ್ತಿತ್ತು. ತನ್ನ ತಂದೆ ಸಾಕಿರುವ ನಾಯಿಗಳೆಲ್ಲವೂ ಕಂತ್ರಿ. ಇಂತಹ ಒಂದು ಇಂಗ್ಲಿಷ್ ನಾಯಿಯನ್ನು ಸಾಕಿದರೆ ಊರಿನಲ್ಲಿ ತನ್ನ ಹಿರಿತನ ಹೆಚ್ಚಾಗುತ್ತದೆ, ಜನರೆಲ್ಲ ತನ್ನನ್ನು ಗೌರವಿಸುತ್ತಾರೆ ಎಂದು ಲೆಕ್ಕ ಹಾಕಿ, ಒಂದು ದಿನ ಆ ಮನೆಯವರನ್ನು ಕೇಳಿ, ಅವರು ಕೇಳಿದ ಹಣ ತೆತ್ತು ಒಂದು ನಾಯಿಯನ್ನು ಕೊಂಡುಕೊಂಡ. ಅದಕ್ಕೆ ಬೇಕಾಗುವ ಒಳ್ಳೆಯ ಕೊರಳಪಟ್ಟಿ, ಸರಪಳಿ, ಬಿಸ್ಕತ್ತು ಕೊಂಡು ತಂದು ರೈಲಿನಲ್ಲಿ ತನ್ನೂರಿಗೆ ಬಂದ. ರೈಲಿನಿಂದಿಳಿದು ಸರಪಳಿಯನ್ನು ಹಿಡಿದುಕೊಂಡು ನಾಯಿಯನ್ನು ಮುಂದೆ ಬಿಟ್ಟುಕೊಂಡು ರಾಜಠೀವಿಯಿಂದ ಹೊರಟ. ದಾರಿಯಲ್ಲಿ ಜನರು ಈ ನಾಯಿಯನ್ನೇ ನೋಡುತ್ತಿದ್ದರು. ಊರ ನಾಯಿಗಳು ಹೊಸ ನಾಯಿಯನ್ನು ನೋಡಿ ಬೊಗಳಿದವು. ಆದರೆ ಮೇಲೆರಗುವ ಧೈರ್ಯ ಅವಕ್ಕಿರಲಿಲ್ಲ. ಬೊಗಳಿದಾಗಲೆಲ್ಲ ಗೌಡರ ಮಗ ಬೀದಿ ನಾಯಿಗಳನ್ನು ಕಲ್ಲೆಸೆದು ಅವುಗಳನ್ನು ಓಡಿಸುತ್ತಿದ್ದ.

ಮನೆ ಸೇರಿದ ಬಳಿಕ ತನ್ನ ತಂದೆ ಚಿಕ್ಕಪ್ಪಂದಿರೆದುರು. ತಾನು ತಂದ ನಾಯಿಯನ್ನು ವಿಧವಿಧವಾಗಿ ಹೊಗಳಿದ. ಹುಲಿಯನ್ನಾದರೂ ಕೊಂದು ಹಾಕುತ್ತದೆ ಎಂದು ಕೊಚ್ಚಿಕೊಂಡ. ಗೌಡರು ನಸುನಗುತ್ತ, "ಹುಂ ಹುಲಿ ಕೊಲ್ಲೋ ಮುಖ್ವೇ ಇದು? ಎರಡು ದಿನ ಕುರಿಮಂದೆ ಜೊತೆಗೆ ಬಾರೇನೆಲ್ಲ ಸುತ್ತಿ ಬರ್ಲಿ, ಗೊತ್ತಾಗುತ್ತೆ," ಎಂದರು. ಮಗ ಕೊಸರಿಕೊಂಡು, "ನಿನ್ನ ಕುರಿ ಕಾಯೋಕೆ ತಂದಿಲ್ಲ ಈ ನಾಯೀನ್ನ." ಎಂದ. ತಾನು ತಂದ ಜಾತಿನಾಯಿ ಮಲಗಲು ಒಂದು ಹಲಗೆಯ ಮೇಲೆ ಗೋಣೀಚೀಲದ ಹಾಸಿಗೆ ಮಾಡಿದ. ಅದು ಹಾಲು ಕುಡಿಯಲು ಒಂದು ತಟ್ಟೆಯನ್ನಿಟ್ಟ. ಹಿಟ್ಟು ತಿನ್ನಿಸಿದರೆ ಎಲ್ಲಿ ಕಾಯಿಲೆ ಬರುತ್ತದೋ ಎಂದು ಬಿಸ್ಕತ್ತು, ರೊಟ್ಟಿ, ಹಾಲನ್ನೇ ಕೊಡುತ್ತಿದ್ದ. ಚೆನ್ನಿ ಇದನ್ನೆಲ್ಲಾ ಕುತೂಹಲದಿಂದ ನೋಡುತ್ತಿತ್ತು. ಅದು ಮರಿಯಾಗಿದ್ದಾಗ ತನ್ನ ತಾಯ ಹಾಲನ್ನು ಕುಡಿದಿತ್ತು. ಹೊರತು ಬೆಳೆದ ಮೇಲೆ ಅದು ಹಾಲನ್ನೇ ಕುಡಿದಿರಲಿಲ್ಲ. ಬಿಸ್ಕತ್ತು ಎಂದರೇನೆಂದು ಅದಕ್ಕೆ ತಿಳಿದಿರಲಿಲ್ಲ. ಗೌಡರ ಮಗ ತನ್ನ ಜಾತಿ ನಾಯಿಗೆ ಬಿಸ್ಕತ್ತು ಹಾಕುವಾಗ ತನಗೂ ಕೊಡಬಹುದೆಂದು ಅವನನ್ನೇ ನೋಡುತ್ತಿತ್ತು. ಆದರೆ ಅವನು ಮರೆತಾದರೂ ಒಂದು ಚೂರನ್ನೂ ಅದಕ್ಕೆಸೆಯಲಿಲ್ಲ. ಚೆನ್ನಿ ಜೊಲ್ಲು ಸುರಿಸಿಕೊಂಡು ಸುಮ್ಮನಾಗುತ್ತಿತ್ತು.

ಗೌಡರ ಮಗನಿಗೆ ಒಂದು ವಿಧದ ಅಹಂಭಾವ. ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ಮೂರು ವರ್ಷ ಪಲ್ಟಿ ಹೊಡೆದಿದ್ದರೂ ತನ್ನಂತಹ ವಿದ್ಯಾವಂತರು ಆ ಸುತ್ತಲೆಲ್ಲೂ ಇಲ್ಲ ಎಂದು ಬೀಗುತ್ತಿದ್ದ. ಹಳ್ಳಿಯ ಇತರ ಹುಡುಗರ ಜೊತೆ ಬೆರೆತರೆ ತನ್ನ ಘನತೆಗೆ ಕುಂದೆಂದು ಹಳ್ಳಿಯವರನ್ನು ದೂರವಿಟ್ಟಿದ್ದ. ಮನೆಯಲ್ಲಿಯೂ ಅಷ್ಟೆ: ತನ್ನ ತಮ್ಮಂದಿರನ್ನೂ ಹತ್ತಿರ ಸೇರಗೊಡುತ್ತಿರಲಿಲ್ಲ. ಸಣ್ಣ ಮಕ್ಕಳು ತನ್ನನ್ನು ಮುಟ್ಟಿಕೊಂಡಾಗ ಸಿಡಿಮಿಡಿಗೊಳ್ಳುತ್ತಿದ್ದ. ಒಬ್ಬಂಟಿಯಾಗಿ ತನ್ನ ಕೋಣೆಯಲ್ಲಿರುತ್ತಿದ್ದ. ಬೇಸರವಾದಾಗ ತನ್ನ ನಾಯಿಯನ್ನು ಹಿಡಿದುಕೊಂಡು ತೋಟಕ್ಕೆ ಹೋಗಿಬರುತ್ತಿದ್ದ. ತಾನು ಹೇಗೆ ಹಳ್ಳಿಯವರಿಂದ ದೂರವಿದ್ದನೋ ಹಾಗೆಯೇ ತನ್ನ ನಾಯಿಯೂ ಇತರ ಬೀದಿ ನಾಯಿಗಳ ಸಂಗ ಮಾಡಬಾರದೆಂದು ಅದನ್ನು ಬಹಳ ಎಚ್ಚರಿಕೆಯಿಂದ ಕಾಯುತ್ತಿದ್ದ.

ಒಮ್ಮೆ ಆತ ತುಮಕೂರಿಗೆ ಹೋಗಬೇಕಾಯಿತು. ಹೋಗುವ ಮುನ್ನ ತನ್ನ ನಾಯಿಯ ಆರೈಕೆಯನ್ನು ತಮ್ಮನಿಗೆ ವಹಿಸಿ ಅದಕ್ಕೆ ಬಿಸ್ಕತ್ತು, ಹಾಲು, ರೊಟ್ಟಿಯನ್ನು ಸಕಾಲಕ್ಕೆ ಕೊಡಬೇಕೆಂದು ಅಪ್ಪಣೆಮಾಡಿದ. ಗೌಡರ ಮಗ ಇದ್ದಾಗ ಸದಾ ಬಂಧನದಲ್ಲೇ ಇದ್ದ ಆ ನಾಯಿಗೆ ಈಗ ಸ್ವಾತಂತ್ರ್ಯ ದೊರೆತಂತಾಯಿತು. ಆ ಕಡೆ, ಈ ಕಡೆ ಓಡಾಡಿತು. ಅದರ ಕಣ್ಣು ಮೂಲೆಯಲ್ಲಿ ಮುದುಡಿ ಮಲಗಿದ್ದ ಚೆನ್ನಿಯ ಮೇಲೆ ಬಿತ್ತು. ಶ್ರೀಮಂತರ ಮಕ್ಕಳು ತಮ್ಮ ಹೊಲದಲ್ಲಿ ದುಡಿಯುವ ಹೆಣ್ಣಾಳುಗಳನ್ನು ಕದ್ದು ಕೆಣಕುವಂತೆ ಅದು ಮೆಲ್ಲನೆ ಚೆನ್ನಿಯನ್ನು ಕೆಣಕಿತು. ಮಲಗಿದ್ದ ಚೆನ್ನಿ ಎಚ್ಚೆತ್ತು ಹೆದರಿ ದೂರ ಹೋಯಿತು. ಆದರೆ ಜಾತಿ ನಾಯಿ ಅದರ ಹಿಂದೆಯೇ ಹೋಯಿತು. ಚೆನ್ನಿಗೂ ಮನಸ್ಸು ಕಲಕಿದಂತಾಯಿತು. ಇಂಗ್ಲಿಷ್

ನಾಯಿ ತಾನಾಗಿ ಮೋಹಿಸಿ ಬಂದಾಗ ಬೇಡ-ವೆನ್ನುವುದೇಕೆ? ಲಜ್ಜೆಯಿಂದ ಸುಮ್ಮನೆ ನಿಂತಿತು. ಇಂಗ್ಲಿಷ್ ನಾಯಿ ಚೆನ್ನಿಯ ಜೊತೆ ಚಕ್ಕಂದ ಮಾಡಿತು. ಹೀಗೆ ಎರಡು ದಿನ ಕಳೆಯಿತು. ಈಗ ಚೆನ್ನಿಗೆ ಲಜ್ಜೆಯಾಗುತ್ತಿರಲಿಲ್ಲ. ಇಂಗ್ಲೀಷ್ ನಾಯಿ ಸುಮ್ಮನಿದ್ದರೆ ಚೆನ್ನಿಯೇ ಕೀಟಲೆ ಮಾಡಿ ಆಟವಾಡುತ್ತಿತ್ತು.

ಗೌಡರ ಮಗ ಊರಿಗೆ ಹಿಂದಿರುಗಿ ಬಂದ. ಮನೆಯ ಹತ್ತಿರ ಬಂದಾಗ ತನ್ನ ನಾಯಿಯೂ ಚೆನ್ನಿಯೂ ಒಂದರ ಮೇಲೊಂದು ಬಿದ್ದು ಹೊರಳಾಡುತ್ತಿದ್ದುದನ್ನು ನೋಡಿದ. ತನ್ನ ಇಂಗ್ಲಿಷ್ ನಾಯಿ ಕಂತ್ರಿ ನಾಯಿಯ ಜೊತೆ ಇರುವುದೆಂದರೇನು! ಅಲ್ಲೊಂದು ದೊಣ್ಣೆ ಬಿದ್ದಿತ್ತು. ಅದನ್ನು ಕೈಗೆತ್ತಿಕೊಂಡ. ಗೌಡರ ಮಗನನ್ನು ನೋಡಿ ಚೆನ್ನಿ ಹೆದರಿ ದೂರ ನಿಂತಿತು. ದೊಣ್ಣೆಯಿಂದ ಆತ ಚೆನ್ನಿಗೆ ಬಲವಾಗಿ ಒಂದೇಟು ಹಾಕಿದ. ಏಟು ಚೆನ್ನಿಯ ಕಾಲಿಗೆ ಬಿದ್ದು, ಕಯ್ಯೊಯ್ಯೊ ಎನ್ನುತ್ತಾ ಅದು ದೂರ ಓಡಿ ಹೋಯಿತು. ಕಾಲಿನಿಂದ ರಕ್ತ ಬರುತ್ತಿತ್ತು. ಗೌಡರ ಮಗ ಮತ್ತೊಮ್ಮೆ ದೊಣ್ಣೆ ತೋರಿಸಿ, "ಇನ್ನೇನಾದ್ರು ಮನೆ ಹತ್ರ ಬಾ, ಕೊಂದಾಕಿ ಬಿಡ್ತೀನಿ," ಎಂದು ತನ್ನ ನಾಯಿಯನ್ನು ಕಟ್ಟಿ ಹಾಕಿದ. ಹೆದರಿ ಬಹಳ ಹೊತ್ತಿನವರೆಗೆ ದೂರದಲ್ಲೇ ಇದ್ದ ಚೆನ್ನಿ ಕಾಲೆಳೆದುಕೊಂಡು ಮನೆಯ ಹತ್ತಿರ ಹೋಯಿತು. ಯಮದೂತನಂತೆ ಗೌಡರ ಮಗ ಜಗುಲಿಯ ಮೇಲೆ ಕುಳಿತಿದ್ದ. ಮನೆಯ ಹತ್ತಿರ ಬರುವ ಚೆನ್ನಿಯನ್ನು ನೋಡಿ ದೊಣ್ಣೆಯನ್ನೆತ್ತಿ ಕೊಂಡು ಅಟ್ಟಿಸಿಕೊಂಡು ಹೋದ. ಚೆನ್ನಿ ಕುಂಟುತ್ತಲೇ ಓಡಿಹೋಯಿತು. ಒಂದು ಮರದ ಕೆಳಗೆ ಕುಳಿತು ತನ್ನ ಕಾಲಿನ ರಕ್ತವನ್ನು ನೆಕ್ಕುತ್ತಾ ರಾತ್ರಿಯನ್ನು ಕಳೆಯಿತು.

ಬೆಳಿಗ್ಗೆ ಚೆನ್ನಿ ಮನೆಯ ಹತ್ತಿರ ಹೋದಾಗ ಗೌಡರ ಮಗ ಮತ್ತೆ ಪ್ರತ್ಯಕ್ಷನಾದ. ಅವನೊಂದಿಗೆ ದೊಣ್ಣೆಯ ದರ್ಶನವೂ ಆಯಿತು. ಇನ್ನು

ಮನೆಗೆ ಹೋಗುವುದು ಕ್ಷೇಮವಲ್ಲೆಂದು ಚೆನ್ನಿಗೆ ಮನವರಿಕೆಯಾಯಿತು. ತನ್ನ ಕಷ್ಟವನ್ನು ಯಾರಿಗೆ ಹೇಳುವುದು? ಗೌಡರು ನಿನ್ನೆಯಿಂದ ಕಾಣಿಸಲಿಲ್ಲ. ಅವರು ಊರಿನಲ್ಲಿರಲಿಲ್ಲ. ಅವರನ್ನು ಕಾದು ಕುಳಿತಿತು. ಅವರು ಎರಡು ದಿನವಾದರೂ ಬರಲೇ ಇಲ್ಲ. ಅವರು ಬಾರದೆ ಮನೆಯ ಹತ್ತಿರ ಹೋಗುವುದು ಸಾಧ್ಯವಿಲ್ಲ. ಹೋದರೆ ಗೌಡರ ಮಗ ಪ್ರಾಣ ತೆಗೆಯುವುದರಲ್ಲಿ ಸಂಶಯವಿಲ್ಲ. ಹಾಗಾದರೆ ಏನು ಮಾಡುವುದು? ಆಗ ಚೆನ್ನಿಗೆ ದೋಮನ ನೆನಪಾಯಿತು. ತಾವು ರಾಜ – ರಾಣಿಯರಂತೆ ಮೆರೆದ ದಿನಗಳು ನೆನಪಾದವು. ಕುರಿಯ ಮಂದೆಯನ್ನು ರಕ್ಷಿಸಲು ಜೀವದ ಹಂಗು ತೊರೆದು ಹೋರಾಡಿದುದನ್ನು ನೆನೆದಾಗ ಅದರ ಕಣ್ಣುಗಳಲ್ಲಿ ನೀರೂರಿತು. ಯಾವ ಮನೆಗಾಗಿ ನಿಯತ್ತಿನಿಂದ ದುಡಿದಿತ್ತೊ ಆ ಮನೆಗೆ ಮತ್ತೆ ಹೋಗುವಂತಿಲ್ಲ. ರಾಣಿಯಂತೆ ಮೆರೆದ ಚೆನ್ನಿಗೆ ಈಗ ಬೀದಿ ನಾಯಂತೆ ಊರಿನಲ್ಲಿ ಬಾಳಲು ಮನಸ್ಸಾಗಲಿಲ್ಲ. ಗಂಡನನ್ನು ಕಳೆದುಕೊಂಡು ಮನೆಯಿಂದ ನೂಕಲ್ಪಟ್ಟ ಮೇಲೆ ಇನ್ನು ಆ ಊರಿನಲ್ಲಿರಬಾರದು, ಯಾವುದಾದರೂ ಊರಿಗೆ ಹೋಗುವುದೇ ಮೇಲು ಎಂದು ಮನಸ್ಸು ಮಾಡಿತು. ಕಾಲೆಳೆದುಕೊಂಡು ಯಾವುದೋ ದಾರಿಯಲ್ಲಿ ಹೊರಟಿತು. ಹೊರಡುವ ಮುನ್ನ ತಾನು ಬೆಳೆದ ಮನೆಯನ್ನೊಮ್ಮೆ ನೋಡಿತು. ತನ್ನ ಮನೆ ತನಗೆ ಎರವಾಯಿತೇ ಎಂದು ಕೊರಗಿತು. ಈ ಗೌಡರು, ಈ ಊರು ಇವನ್ನು ತೊರೆದು ಹೋಗಬೇಕಲ್ಲಾ ಎಂದು ಮರುಗಿತು. ಆದರೆ ಹೋಗದೆ ಬೇರೆ ದಾರಿಯಿರಲಿಲ್ಲ. ಮನೆಯನ್ನು ಮತ್ತೊಮ್ಮೆ ನೋಡಿತು. ಮನೆಯ ಮುಂದೆ ಆ ಇಂಗ್ಲಿಷ್ ನಾಯಿ ಮಲಗಿತ್ತು. ತಾನಾಗಿ ಅದರ ಸಂಗ ಬಯಸಲಿಲ್ಲ. ಅದೇ ಮೇಲೆ ಬಿದ್ದು ಕೆಣಕಿದಾಗ ಅದರೊಡನೆ ಆಟವಾಡಿದ್ದು ತಪ್ಪೆ? ಅದು ತಪ್ಪಾಗಿದ್ದರೆ ತನಗೆ ಮಾತ್ರ ಶಿಕ್ಷೆ ಏಕೆ? ಆ ನಾಯಿಗೂ ಶಿಕ್ಷೆಯಾಗಬೇಕಲ್ಲವೆ? ಆದರೆ ಅದಕ್ಕೆ ಶಿಕ್ಷೆ ಕೊಡುವವರಾರು? ಶ್ರೀಮಂತರು ಬಡ ಹೆಣ್ಣನ್ನು ಕೆಣಕಿದರೆ ಪೆಟ್ಟು ಬೀಳುವುದು ಆ ಬಡ ಹೆಣ್ಣಿಗೇ ಹೊರತು ಕೆಣಕಿದ ಶ್ರೀಮಂತರಿಗಲ್ಲ ಅಲ್ಲವೆ? ಯೋಚನೆ ಮಾಡಿದಂತೆಲ್ಲಾ ದುಃಖ ಹೆಚ್ಚಾಗುತ್ತಾ ಹೋಯಿತು. ಹೆಚ್ಚು ನಿಲ್ಲುವುದು ಸಾಧ್ಯವಾಗಲಿಲ್ಲ. ಬಾಳಿದ ಮನೆಯನ್ನು, ಬೆಳೆದ ಊರನ್ನು ತೊರೆದು ಹೊರಟಿತು.

ಯಾವ ಊರಿಗೆ ಹೋಗುವುದು? ತನ್ನ ಊರನ್ನು ಬಿಟ್ಟ ಮೇಲೆ ಯಾವ ಊರಾದರೇನು? ದಾರಿ ಎಲ್ಲಿಗೆ ಹೋಗುವುದೋ ಅಲ್ಲಿಗೆ ಹೋಗುವುದು. ಹೋಗ ಹೋಗುತ್ತಾ ದಾರಿಯಲ್ಲಿ ಒಂದು ಮಾವಿನ ತೋಪು ಸಿಕ್ಕಿತು. ಅಲ್ಲಿ ನಾಲ್ಕೈದು ಎತ್ತಿನ ಗಾಡಿಗಳನ್ನು ಬಿಟ್ಟಿದ್ದರು. ಗಾಡಿಯವರು ಮರದ ಕೆಳಗೆ ಕಲ್ಲು ಹೂಡಿ ಅಡುಗೆ ಮಾಡುತ್ತಿದ್ದರು. ಸಂಜೆಯೂ ಆಗಿತ್ತು. ನಡೆದು ದಣಿವೂ ಆಗಿತ್ತು. ಚೆನ್ನಿ ಬಾಲ ಅಲ್ಲಾಡಿಸಿಕೊಂಡು ಅಡುಗೆ ಮಾಡುತ್ತಿದ್ದ ಸ್ಥಳಕ್ಕೆ ಹೋಯಿತು. ಸ್ವಲ್ಪ ದೂರದಲ್ಲಿ ಕುಳಿತು ದಣಿವಾರಿಸಿಕೊಂಡಿತು. ಗಾಡಿಯವರು ತಾವು ಊಟ ಮಾಡಿ ಮಿಕ್ಕದ್ದನ್ನು ಚೆನ್ನಿಗೆ ಹಾಕಿದರು. ಹಿಟ್ಟು ತಿಂದು ಮೂರು ದಿನವಾಗಿತ್ತು. ಗಾಡಿಯವರು ಹಾಕಿದ್ದನ್ನು ಗಬಗಬನೆ ತಿಂದಿತು. ಗಾಡಿಯವರು ಮಲಗಿಕೊಂಡರು. ಚೆನ್ನಿಯೂ ಗಾಡಿಯ ಬಳಿ ಮಲಗಿತು.

ಬೆಳ್ಳಿ ಹುಟ್ಟಿದಾಗ ಗಾಡಿಯವರು ಎದ್ದು ಗಾಡಿ ಕಟ್ಟಿದರು. ಅವರು ಬೆಂಗಳೂರಿಗೆ ಹುಣಿಸೆ ಹಣ್ಣು ತುಂಬಿಕೊಂಡು ಹೊರಟಿದ್ದರು. ಚೆನ್ನಿಯೂ ಗಾಡಿಯ ಹಿಂದೇ ಹೊರಟಿತು. ಗಾಡಿ ಪೀಣ್ಯದ ಹತ್ತಿರ ಹೋದಾಗ ಹೊತ್ತು ಹುಟ್ಟಿತು. ಗಾಡಿಯ ಹಿಂದೆ ಹೋಗುತ್ತಿದ್ದ ಚೆನ್ನಿಯನ್ನು ಕಂಡು ಆ ಊರ ನಾಯಿಗಳು ಒಂದೊಂದಾಗಿ ಬಾಲ ಅಲ್ಲಾಡಿಸಿಕೊಂಡು ಬಂದುವು. ಚೆನ್ನಿಯು ಹೆಣ್ಣೆಂದು ತಿಳಿದಾಗ ಬಾಯಿ ಚಪ್ಪರಿಸಿದುವು. ಹೆಣ್ಣೊಬ್ಬಳು ದಾರಿ ತಪ್ಪಿ ಒಂಟಿಯಾಗಿ ಸಿಕ್ಕಿದರೆ ಕುಂಟನೂ ನಾಗಾಲೋಟದಿಂದ ಓಡಿ ಬರುತ್ತಾನೆ, ಹೆಳವನೂ ಜಿಂಕೆಯಂತೆ ಹಾರಿ ಬರುತ್ತಾನೆ, ಕುರುಡ ತಡವಿಕೊಂಡು ಬರುತ್ತಾನೆ. ಹೆಣ್ಣಿನ ಆಸೆ ಮಾನವರನ್ನು ದಾನವರನ್ನಾಗಿ ಮಾಡುತ್ತದೆ. ಇಂದ್ರ ಋಷಿಪತ್ನಿಯನ್ನು ಮೋಸಪಡಿಸಿದ, ಚಂದ್ರ ಗುರುಪತ್ನಿಗೆ ಗಂಟು ಬಿದ್ದ. ಇನ್ನು ನಾಯಿಗಳ ಮಾತೇನು! ಎಲ್ಲ ನಾಯಿಗಳೂ

ಚೆನ್ನಿಯ ಮೇಲೆ ಬಿದ್ದವು. ಚೆನ್ನಿಯು ಗೋಳಿ-ಡುತ್ತ ಗಾಡಿಯ ಕೆಳಗೆ ತೂರಿತು. ಗಾಡಿಯವರು ಇದನ್ನು ಕಂಡು ಆ ನಾಯಿಗಳಿಗೆ ಚಾಟಿಯಿಂದ ಬಿಗಿದರು. ಚೆನ್ನಿ ನಾಯಿಗಳ ಕಾಟದಿಂದ ತಪ್ಪಿಸಿ ಕೊಂಡಿತು. ಏಟು ತಿಂದ ನಾಯಿಗಳು ಮತ್ತೆ ಗಾಡಿಯ ಹಿಂದೆ ಹೋಗಲಿಲ್ಲ. ಕೈಗೆ ಅನಾಯಾಸ ವಾಗಿ ಸಿಕ್ಕಿದ್ದ ತುತ್ತನ್ನು ತಿನ್ನಲಾಗಲಿಲ್ಲವಲ್ಲಾ ಎಂದು ಗಾಡಿಯವರನ್ನು ಬಯ್ಯುವಂತೆ ಎಲ್ಲಾ ನಾಯಿಗಳು ಬೊಗಳಿದುವು. ಚೆನ್ನಿಯು ಮಧ್ಯದ ಗಾಡಿಯ ಕೆಳಗೆ ಅದರ ಜೊತೆಗೇ ಹೋಯಿತು.

ಗಾಡಿಗಳು ತರಗುಪೇಟೆಯಲ್ಲಿ ನಿಂತವು. ತಾವು ತಂದಿದ್ದ ಹುಣಿಸೇ ಹಣ್ಣನ್ನು ಮಂಡಿಗೆ ಹಾಕಿ ತಮ್ಮ ವ್ಯವಹಾರವನ್ನು ಮುಗಿಸಿಕೊಂಡು ತಮ್ಮ ಊರಿಗೆ ಹೊರಡಲು ಗಾಡಿಗಳನ್ನು ಕಟ್ಟಿದರು. ಅವರೇನೋ ಅವರ ಊರಿಗೆ ಹೋಗುತ್ತಾರೆ. ಅವರಿಗೆ ಅಪ್ಪರು ಇಪ್ಪರು ಮಡದಿ-ಮಕ್ಕಳು ಇದ್ದಾರೆ. ಆದರೆ ಚೆನ್ನಿಗೆ ಯಾರಿದ್ದಾರೆ? ಬೆಂಗಳೂರಿನಲ್ಲಿಯೇ ನಿಂತಿತು. ಚೆನ್ನಿ ಕೆಟ್ಟು ಪಟ್ಟಣ ಸೇರಿತು.

ತರಗುಪೇಟೆಯ ಗಲ್ಲಿಯೊಂದರಲ್ಲಿ ಮುದುಕಿ

ಯೊಬ್ಬಳು ಇಡ್ಲಿ, ಚಿತ್ರಾನ್ನ ಮಾರುತ್ತಿದ್ದಳು. ತರಗುಪೇಟೆಯಲ್ಲಿ ಕೂಲಿ ಮಾಡುವ ಹಮಾಲರು ಆ ಮುದುಕಿಯ ಸುತ್ತ ಕುಳಿತು ತಿಂಡಿ ತಿನ್ನುದ್ದರು. ಚೆನ್ನಿ ಅಲ್ಲಿಗೆ ಹೋಯಿತು. ಅವರೆಸೆದ ತುತ್ತನ್ನು ತಿಂದಿತು. ಅವರು ತಿಂದು ಎಸೆದ ಎಂಜಲೆಲೆಯನ್ನು ನೆಕ್ಕಿತು. ಅಷ್ಟರಲ್ಲಿ ಎಲ್ಲಿಂದಲೋ ನಾಲ್ಕೈದು ನಾಯಿಗಳು ಬಂದು ಚೆನ್ನಿಯ ಮೇಲೆರಗಿದವು. ಚೆನ್ನಿಗೆ ಹೊಸ ಜಾಗ. ಎಲ್ಲಿ ರಕ್ಷಣೆ ಪಡೆಯುವುದು? ಎಂದು ಬಾಲ ಮುದುರಿಕೊಂಡು ಕುಂಯಿಗುಡುತ್ತಾ ಗಲ್ಲಿಯೊಂದರಲ್ಲಿ ಓಡಿತು. ನಾಯಿಗಳೂ ಹಿಂದೆಯೇ ಓಡಿದವು. ದಾರಿಯಲ್ಲಿ ಸಿಕ್ಕಿದ ಒಂಟಿ ಹೆಣ್ಣನ್ನ ಹಿಂದೆಯೇ ಅಲೆಯುವ ಕುಂಟ ಲಂಪಟರಂತೆ ಚೆನ್ನಿ ಹೋದೆಡೆಯೆಲ್ಲಾ ಅಟ್ಟಿಸಿಕೊಂಡು ಹೋದವು. ಚೆನ್ನಿ ಹಿಂದಕ್ಕೆ ನೋಡುವುದು, ಮುಂದೆ ಓಡುವುದು. ಹೀಗೆ ಓಡಿ ಹೋಗುವಾಗ ದಾರಿಯಲ್ಲಿ ಒಂದು ಧಡಿಯ ನಾಯಿ ಎದುರಾಯಿತು. ಚೆನ್ನಿಗೆ ಜೀವ ಹೋದಂತಾಯಿತು. ಮುಂದೆ ಯಮದೂತನಂತಹ ನಾಯಿ; ಹಿಂದೆ ಬೆನ್ನತ್ತಿ ಬರುವ ನಾಯಿಗಳ ದಂಡು. ಗಲ್ಲಿಯೋ ಕಿರಿದು. ಏನೂ ತೋಚದೆ ಕ್ಷಣ ಕಾಲ ಸುಮ್ಮನೆ ನಿಂತಿತು. ಆ ಧಡಿಯ ನಾಯಿ ಇತರ ನಾಯಿಗಳ ಮೇಲೆ ಬಿದ್ದು ಅವುಗಳನ್ನು ಓಡಿಸಿ ಚೆನ್ನಿಯನ್ನು ರಕ್ಷಿಸಿತು. ನಂತರ ಹತ್ತಿರ ಬಂದು ಚೆನ್ನಿಗೆ ತೆಕ್ಕೆ ಬಿತ್ತು. ಚೆನ್ನಿಗೆ ಹಾವಿನ ಬಾಯಿಂದ ತಪ್ಪಿಸಿಕೊಂಡು ಹದ್ದಿನ ಬಾಯಿಗೆ ಬಿದ್ದಂತಾಗಿತ್ತು. ಅಬಲೆಯೊಬ್ಬಳನ್ನು ಪುಂಡರ ಕೈಯಿಂದ ರಕ್ಷಿಸಿ ಕೊನೆಗೆ ತಾವೇ ಭಕ್ಷಿಸುವ ಗಣ್ಯ ವ್ಯಕ್ತಿಗಳಂತೆ ಆ ಧಡಿಯ ನಾಯಿ ಚೆನ್ನಿಯನ್ನು ಬೀದಿಯ ನಾಯಿಗಳಿಂದ ಬಿಡಿಸಿ ತಾನೇ ಭುಂಜಿಸಬಯಸಿತು. ಇದನ್ನರಿತ ಚೆನ್ನಿ ಓಡಲಾರಂಭಿಸಿತು. ಎಷ್ಟು ಜೋರಾಗಿ ಓಡಿದರೂ ಆ ದಡಿಯ ನಾಯಿ ಹುಲಿಯಂತೆ ಎರಗಿತು. ದಾರಿಗಾಣದೆ ಚೆನ್ನಿ ಅಲ್ಲಿಯೆ ಇದ್ದ ಒಂದು ಚರಂಡಿಯಲ್ಲಿ ನುಗ್ಗಿತು. ದಡಿಯ ನಾಯಿಯೂ ಅಲ್ಲಿಯೆ ತೂರಿಕೊಂಡಿತು. ಆ ಚರಂಡಿ ಮಧ್ಯದಲ್ಲಿ ಮುಚ್ಚಿಹೋಗಿತ್ತು. ದಾರಿಗಾಣದೆ ಚೆನ್ನಿ ಸರಕ್ಕನೆ ಹಿಂದಕ್ಕೆ ತಿರುಗಿದಾಗ ಧಡಿಯ ನಾಯಿ ಖಳನಾಯಕನಂತೆ ನಿಂತಿತ್ತು. ಅದರ ಮುಖದಲ್ಲಿ ಪೈಶಾಚಿಕ ನಗೆ ತುಳುಕುತ್ತಿತ್ತು. ನೀನು ಪಾತಾಳ ಹೊಕ್ಕರೂ ಬಿಡುವುದಿಲ್ಲ ಎಂದು ಹೇಳುವಂತಿತ್ತು ಅದರ ಮುಖಮುದ್ರೆ. ಧಡಿಯ ನಾಯಿ ಈಗ ತನ್ನ ಅಂಗಚೇಷ್ಟೆಯನ್ನು ಶುರು ಮಾಡಿತು. ಚೆನ್ನಿಯು ಕೊಸರಾಡಿದರೂ ಆ ನಾಯಿಯ ಕಬಂಧ ಬಂಧನದಿಂದ ಪಾರಾಗಲು ಸಾಧ್ಯವಾಗಲಿಲ್ಲ. ಆ ಧಡಿಯ ಕೀಚಕನಂತೆ ಚೆನ್ನಿಯ ಮೇಲೇರಿತು. ಕ್ಷಣಮಾತ್ರದಲ್ಲಿ ಪೂರ್ವಕ್ಕೊಂದು, ಪಶ್ಚಿಮಕ್ಕೊಂದು ಮುಖ ಮಾಡಿ ನಿಂತವು. ಧಡಿಯನ ಮುಖದಲ್ಲಿ ವಿಜಯೋತ್ಸಾಹ ತುಂಬಿ ತುಳುಕುತ್ತಿತ್ತು. ಚೆನ್ನಿಯ ಮುಖದಲ್ಲಿ ಅಧೈರ್ಯ, ಅಸಹಾಯಕತೆ, ಅಪಮಾನ, ಮಾನಭಂಗ ಎಲ್ಲವೂ ಒಟ್ಟಿಗೆ ಕಾಣುತ್ತಿತ್ತು. ಚೆನ್ನಿಯ ಶೀಲಹರಣದಿಂದ ತೃಪ್ತಗೊಂಡ ಆ ಧಡಿಯ ನಾಯಿ ತನ್ನ ಬಂಧನವನ್ನು ಸಡಿಲುಗೊಳಿಸಿ ತನ್ನ ಬಾಲವನ್ನು ಸಂತೋಷದಿಂದ ಅಲ್ಲಾಡಿಸುತ್ತಾ ಹೊರಟಿತು.

ಚೆನ್ನಿಯ ಮನಸ್ಸು ಚೂರುಚೂರಾಯಿತು. ನೆಮ್ಮದಿಯಿಂದ ಬಾಳಬೇಕೆಂದು ಕೆಟ್ಟು ಪಟ್ಟಣ ಸೇರಿದರೆ ಆದದ್ದೇನು? ಬೀದಿ ನಾಯಿಯಿಂದ ಬಲವಂತದ ಆಕ್ರಮಣ, ಶೀಲಭಂಗ. ಹಿಂದೆ ದೋಮನ ಜೊತೆ ತೆಕ್ಕೆ ಬಿದ್ದುದನ್ನು ಸ್ಮರಿಸಿತು. ಆಗ ಎಷ್ಟು ಆನಂದವಿತ್ತು! ಅದೇನು ಉಲ್ಲಾಸವಿತ್ತು! ಅದು ಒಲುಮೆಯ ಆಲಿಂಗನ. ಇದು ಬಲೋನ್ಬಂಧನ. ಆ ಅಮರವಲ್ಲಿ! ಈ ಹಾವರವಲ್ಲಿ! ತನುವಿನ ನೋವಿಗಿಂತ ಮನಸ್ಸಿನ ನೋವು ಅಧಿಕವಾಯಿತು. ಆ ನೋವಿನಲ್ಲಿಯೇ ಕೊರಗುತ್ತಾ ಚೆನ್ನಿ ಆ ಚರಂಡಿಯಲ್ಲಿ ಮಲಗಿತು.

ಮಾರುದಿನ ಎದ್ದಾಗ ಮೈ ಭಾರವಾಗಿತ್ತು. ಚಿಂತೆಯಿಂದ ತಲೆ ಸಿಡಿದುಹೋಗುವಷ್ಟು ನೋಯುತ್ತಿತ್ತು. ಅತ್ತು ಅತ್ತು ಕಣ್ಣುಗಳು ಬಾತುಕೊಂಡಿದ್ದವು. ನಡೆಯಲು ಶಕ್ತಿಯೇ ಇರಲಿಲ್ಲ. ತನ್ನ ಚೇತನವನ್ನೆಲ್ಲಾ ಆ ರಾಕ್ಷಸ ನಾಯಿ ಹೀರಿ ದೇಹ ಬೆಂಡಾದಂತೆ ಕಂಡಿತು. ನಿನ್ನೆಯಿಂದ ಹೊಟ್ಟೆಗೇನೂ ತಿಂದಿರಲಿಲ್ಲ. ನಿದ್ರೆಯಿಂದೆದ್ದ ಮೇಲೆ ಹೊಟ್ಟೆಯಲ್ಲಿ ಭೂತ ಕುಣಿದಂತಾಯಿತು. ಎಷ್ಟು ಯೋಚಿಸಿದರೂ ಅಷ್ಟೇ. ಒಮ್ಮೆ ಭ್ರಷ್ಟಳಾದ ಮೇಲೆ ಇನ್ನೆಲ್ಲಿಯ ಶೀಲ? ಬೀದಿಗಿಳಿಯ-

ಲೇಬೇಕು. ಹಸಿವನ್ನು ನೀಗಲು ಎಲ್ಲಿಗಾದರೂ ಹೋಗಲೇಬೇಕು. ಚೆನ್ನಿ ಎದ್ದು ಬೀದಿಗೆ ಬಂದಿತು. ಅಲ್ಲಿ ಇಲ್ಲಿ ಸಿಕ್ಕಿದುದನ್ನು ತಿಂದು ಹೊಟ್ಟೆ ಹೊರೆಯಲಾರಂಭಿಸಿತು. ಹೀಗೆ ಒಂದು ತಿಂಗಳು ಕಳೆಯಿತು.

ಒಂದು ದಿನ ಹೊಟ್ಟೆಯಲ್ಲಿ ಏನೋ ಅಲುಗಾಡಿದಂತಾಯಿತು. ಚೆನ್ನಿ ಒಂದು ಕಡೆ ಅಲ್ಲಾಡದೇ ನಿಂತುಕೊಂಡು ಏನೆಂದು ಯೋಚಿಸಿತು. ಹೊಟ್ಟೆಯಲ್ಲಿ ಅಲುಗಾಟ ಸ್ಪಷ್ಟವಾಗಿತ್ತು. ಚೆನ್ನಿಗೆ ಅರಿವಾಯಿತು—ತಾನು ಗರ್ಭಿಣಿಯಾಗಿದ್ದೇನೆಂದು, ಆ ದುರುಳ ದೈತ್ಯನ ದುಷ್ಟಾಂಶಗಳು ಹೊಟ್ಟೆಯಲ್ಲಿ ಬೆಳೆಯುತ್ತಿವೆಯೆಂದು. ಮನುಷ್ಯರಿಗಾದರೆ ಗರ್ಭವನ್ನು ಕಳೆದುಕೊಳ್ಳಲು ಹಲವಾರು ಮಾರ್ಗಗಳಿವೆ. ಆದರೆ ನಾಯಿಗಳಿಗೆ? ಮನಸ್ಸಿರಲಿ, ಇಲ್ಲದಿರಲಿ ಮರಿಗಳಿಗೆ ಜನ್ಮ ಕೊಡಲೇ ಬೇಕು. ಮರಿ ಹಾಕುವ ದಿನ ಹತ್ತಿರ ಬಂತು. ಎಲ್ಲಿಯಾದರೂ ಸುರಕ್ಷಿತ ಸ್ಥಳ ನೋಡಬೇಕು. ಯಾವುದೋ ಒಂದು ಮನೆಯ ಕಾಂಪೌಂಡಿನ

ಮೂಲೆಯಲ್ಲಿ ಒಂದು ಪೊದೆ ಬೆಳೆದುಕೊಂಡಿತ್ತು. ಆ ಪೊದೆಯ ಕೆಳಗೆ ಆಶ್ರಯ ಹೊಂದಿ ಮರಿಗಳನ್ನು ಹಾಕುವುದೆಂದು ಲೆಕ್ಕ ಹಾಕಿತು. ಆದರೆ ಮನೆಯವರು ಸುಮ್ಮನೆ ಬಿಡುವರೇ? ಮನೆಯ ಬಾಗಿಲು ಸದಾ ಮುಚ್ಚಿಯೇ ಇತ್ತು. ಎರಡು ದಿನವಾದರೂ ತೆರೆಯಲಿಲ್ಲ. ಬಹುಶಃ ಮನೆಯವರು ಊರಿನಲ್ಲಿರಲಿಕ್ಕಿಲ್ಲ ಎಂದು ಯೋಚಿಸಿ ಸಂಜೆಯಾದಾಗ ಆ ಪೊದೆಯಲ್ಲಿ ಹೋಗಿ ಮಲಗಿತು. ನಡು ರಾತ್ರಿಯಲ್ಲಿ ಮರಿ ಹಾಕಿತು. ಕೊನೆಯ ಮರಿಯನ್ನು ಹಾಕಿದಾಗ ನಿತ್ರಾಣದಿಂದ ಪ್ರಜ್ಞೆ ತಪ್ಪಿ ನೆಲಕ್ಕೊರಗಿತು.

ಬೆಳಿಗ್ಗೆ ಎದ್ದಾಗ ಚೆನ್ನಿ ತನ್ನ ಮರಿಗಳನ್ನು ನೋಡಿತು. ಒಂದೇ, ಎರಡೆ, ಐದು ಮರಿಗಳು! ಬಾಲ ಸೂರ್ಯನ ಬೆಳಕಿನಲ್ಲಿ ಮರಿಗಳು ಬಹು ಮುದ್ದಾಗಿ ಕಂಡವು. ಆ ಹೂ ಮರಿಗಳನ್ನು ನೋಡಿ ಚೆನ್ನಿ ಅವುಗಳ ಮೈ ನೆಕ್ಕಿತು. ಮರು ಕ್ಷಣದಲ್ಲಿ ಇವು ಆ ದುರುಳ ನಾಯಿಯ ದುರ್ಬೀಜದಿಂದ ಹುಟ್ಟಿದವುಗಳು. ಇವುಗಳನ್ನು ಸಾಕುವುದಕ್ಕಿಂತ ಒಂದೊಂದನ್ನೇ ಕೊಲ್ಲಬೇಕೆಂದು ಯೋಚಿಸಿತು. ಆದರೆ ಹಾಗೆ ಮಾಡಲು ಮನಸ್ಸು ಬರಲಿಲ್ಲ. ಹೆಪ್ಪು ಯಾರದಾದರೇನು, ಹಾಲು ತನ್ನದು. ಎಷ್ಟಾದರೂ ತನ್ನ ರಕ್ತ ಮಾಂಸದಿಂದಲೇ ಮೈದಾಳಿ ಬಂದ ನಿಷ್ಪಾಪ ಕುನ್ನಿಗಳು ಇವಲ್ಲವೆ? ಎಂಬ ಭಾವ ಮೊಳೆಯಿತು. ಮಮತೆಯ ಮೊಗ್ಗು ಅರಳಿತು. ಚೆನ್ನಿ ತನ್ನ ಕರುಳ ಬಳ್ಳಿಗಳಿಗೆ ಹಾಲುಣಿಸಿತು.

ಏಳೆಂಟು ದಿನಗಳಾದ ಮೇಲೆ ಆ ಮನೆಯವರು ಬಂದರು. ಅವರನ್ನು ಕಂಡು ಚೆನ್ನಿ ಭಯದಿಂದ ಎದ್ದು ಪಿಳಪಿಳನೆ ಕಣ್ಣು ಬಿಡುತ್ತಾ ನಿಂತಿತು. ಅದರ ದೀನ ನೋಟವನ್ನು ನೋಡಿ ಮನೆಯವರು, 'ಇದ್ದರೆ ಇರಲಿ' ಎಂದುಕೊಂಡರು. ಅವರ ಮಕ್ಕಳು ಒಂದೊಂದು ಮರಿಯನ್ನೆತ್ತಿಕೊಂಡು, "ಇದು ನನ್ನ ಮರಿ" ಎಂದು ಆಟವಾಡುತ್ತಿದ್ದರು. ಅವರು ಮರಿಗಳಿಗೆ ಆಗಾಗ್ಗೆ ತಿಂಡಿ ಹಾಕುತ್ತಿದ್ದರು. ಚೆನ್ನಿ ಬಂದಾಗ ಮರಿಗಳು ಎಲ್ಲವೂ ಒಟ್ಟಿಗೆ ಅದರ ಎದೆಗೆ ಅಂಟಿಕೊಳ್ಳುತ್ತಿದ್ದವು. ಆದರೆ ಐದು ಮರಿಗಳಿಗೂ ಸಾಲುವಷ್ಟು ಹಾಲು ಕುಡಿಸಬೇಕಾದರೆ ತಾನು ಹೊಟ್ಟೆ ತುಂಬ ತಿನ್ನಬೇಕು. ಹೆತ್ತ ಹೊಟ್ಟೆಗೆ ಏನು ಹಾಕಿದರೂ ತುಂಬುವುದಿಲ್ಲ. ಅರೆ ಹೊಟ್ಟೆಯಲ್ಲಿ ಒಂದು ಮಲಗಿದಾಗ ಐದೂ ಮರಿಗಳು ಹಾಲು ಕುಡಿಯಲು ಹಾತೊರೆಯುತ್ತಿದ್ದುವು. ಹಾಲು ಸಾಕಾಗದಿದ್ದಾಗ ಮೊಲೆಯನ್ನೇ ಕಚ್ಚುತ್ತಿದ್ದುವು. ಏನಾದರೂ ಆಗಲಿ, ಮಕ್ಕಳಿಗೆ ಹೆಚ್ಚು ಹಾಲು ಕುಡಿಸಬೇಕು ಎನ್ನುವುದಕ್ಕಾದರೂ ಹೊಟ್ಟೆ ತುಂಬ ತಿನ್ನಬೇಕು ಎಂದು ನಿರ್ಧರಿಸಿ ಮರಿಗಳನ್ನು ಬಿಟ್ಟು ಆಹಾರ ಸಂಗ್ರಹಕ್ಕೆ ಹೊರಟಿತು.

ಒಂದು ದಿನ ಒಂದು ಗಲ್ಲಿಗೆ ಹೋದಾಗ ಮನೆಯ ಹಿಂಬಾಗಿಲು ತೆರೆದಿತ್ತು. ಬಾಗಿಲ ಬಳಿಯಲ್ಲಿಯೇ ಅಡುಗೆಯ ಒಲೆ. ಅಲ್ಲಿ ಹೆಂಗಸೊಬ್ಬಳು ಒಬ್ಬಟ್ಟು ಬೇಯಿಸುತ್ತಿದ್ದಳು. ಒಬ್ಬಟ್ಟಿನ ವಾಸನೆಗೆ ಚೆನ್ನಿಯ ಮೂಗು ಅರಳಿತು. ಬಾಯಲ್ಲಿ ನೀರೂರಿತು. ಬಾಲ ನಲಿದಾಡಿತು. ಹಿಂದೆಲ್ಲೊ ಚನ್ನೇಗೌಡರ ಮನೆಯಲ್ಲಿ ಒಬ್ಬಟ್ಟು ತಿಂದಿದ್ದು; ಬೆಂಗಳೂರಿಗೆ ಬಂದ ಮೇಲೆ ಒಬ್ಬಟ್ಟಿನ ಮಾತು ಹಾಗಿರಲಿ, ಸಾಕಷ್ಟು ಹಿಟ್ಟೂ ಸಿಕ್ಕಿರಲಿಲ್ಲ. ಚೆನ್ನಿ ಸುತ್ತಲೂ ನೋಡಿತು. ಮೆಲ್ಲನೆ ಬಾಗಿಲಿಗೆ ಕಾಲಿಟ್ಟಿತು. ಆ ಹೆಂಗಸು ಹಂಚಿನ ಮೇಲಿದ್ದ ಒಬ್ಬಟ್ಟಿನ ಮೇಲೇ ಗಮನವಿಟ್ಟಿದ್ದರಿಂದ ನಾಯಿ ಬಂದದ್ದು ತಿಳಿಯಲಿಲ್ಲ. ಒಂದು ತಟ್ಟೆಯ ತುಂಬ ಒಬ್ಬಟ್ಟು ಇತ್ತು. ಮತ್ತೊಂದು ತಟ್ಟೆಯಲ್ಲಿ ಕೆಲವು ಇದ್ದವು. ಹೆಂಗಸು ಬೇಯಿಸಿದ ಒಬ್ಬಟ್ಟನ್ನು ಎರಡನೇ ತಟ್ಟೆಗೆ ಹಾಕುತ್ತಿದ್ದಳು. ಚೆನ್ನಿ ಒಬ್ಬಟ್ಟು ತುಂಬಿದ್ದ ತಟ್ಟೆಗೆ ಬಾಯಿ ಹಾಕಿ ಸ್ವಲ್ಪವೂ ಸದ್ದಾಗದಂತೆ ಆ ತಟ್ಟೆಯನ್ನು ಖಾಲಿ ಮಾಡಿತು. ನಂತರ ಎರಡನೇ ತಟ್ಟೆಗೆ ನಾಲಿಗೆ ಚಾಚಿತು. ಒಮ್ಮೆ ಹೆಂಗಸು ತಿರುಗಿ ನೋಡಿದಳು. ನಾಯಿ ಎಲ್ಲಾ ಒಬ್ಬಟ್ಟನ್ನೂ ಮುಗಿಸಿತ್ತು. ಅವಳು ಕೆಂಡವಾಗಿ ಒಲೆಯಲ್ಲಿದ್ದ ಸೌದೆ ಕೊಳ್ಳಿಯಿಂದ ನಾಯಿಯ ಮುಖಕ್ಕೆ ತಿವಿದಳು. ಚೆನ್ನಿಯ ಮೂತಿ ಸುಟ್ಟಿತು. ಕಯ್ಯಯ್ಯೊ ಎನ್ನುತ್ತಾ ಅದು ಹೊರಗೋಡಿತು. ಹಿಂದೆ ನಾಯೊಂದು ಕನಕದಾಸರ ಮನೆಯಿಂದ ರೊಟ್ಟಿ ಕಚ್ಚಿಕೊಂಡು ಹೋದಾಗ ಕನಕದಾಸರು ಬೆಲ್ಲವನ್ನು ಹಿಡಿದುಕೊಂಡು ನಾಯಿಯ ಹಿಂದೆಯೇ

ಓಡಿದರಂತೆ. ಅದು ಕನಕದಾಸರ ಕಾಲ. ನಾಯಿಯನ್ನು ನಾರಾಯಣ ಎಂದು ನಂಬಿದ್ದ ಕಾಲ. ಸರ್ವಪ್ರಾಣಿ ವರ್ಗದಲ್ಲಿ ಪರಮಾತ್ಮನನ್ನು ಕಾಣುತ್ತಿದ್ದ ಆಸ್ತಿಕರ ಕಾಲ. ಕನಕದಾಸರ ನಂಬಿಗೆಗೆ ಸರಿಯಾಗಿ ನಾಯಿ ನಾರಾಯಣನಾಗಿ ದರ್ಶನವಿತ್ತಿತಂತೆ. ಆ ಕಾಲ ಬೇರೆ, ಈ ಕಾಲ ಬೇರೆ.

ನಾಯಿ ಮರಿಗಳು ಮುದ್ದಾಗಿ ಕಂಡರೂ ಅವುಗಳ ಉಪಟಳ ಜಾಸ್ತಿ. ಚೆನ್ನಿಯ ಮರಿಗಳು ಮನೆಯೊಳಗೆ ಹೋಗುತ್ತಿದ್ದವು. ಎಲ್ಲೆಂದರೆ ಅಲ್ಲಿ ಹೇಸಿಗೆ ಮಾಡುತ್ತಿದ್ದವು. ಅಡುಗೆ ಮನೆಗೆ ಹೋಗಿ ಎಲ್ಲಿ ಬೇಕೆಂದರಲ್ಲಿ ಬಾಯಿ ಹಾಕುತ್ತಿದ್ದವು. ನಡೆದಾಡುವಾಗ ಕಾಲಿಗೆ ಸಿಕ್ಕಿ ತೊಡರಿಕೊಳ್ಳುತ್ತಿದ್ದವು. ಮಕ್ಕಳ ಕೈಯ ತಿಂಡಿಗೆ ನಾಲಿಗೆ ಚಾಚುತ್ತಿದ್ದವು. ಮನೆಯವರು ಈ ಮರಿಗಳಿಗೆ ಬೇಸತ್ತು ಒಂದು ದಿನ ಯಾರಾರಿಗೋ ಐದೂ ಮರಿಗಳನ್ನೂ ಕೊಟ್ಟುಬಿಟ್ಟು ಕೈ ತೊಳೆದುಕೊಂಡರು.

ಮೂತಿ ಸುಡಿಸಿಕೊಂಡ ಚೆನ್ನಿ ಬೀದಿಗೆ ಬಂತು. ಸುಟ್ಟ ಮೂತಿಯನ್ನು ಪದೇ ಪದೇ ನೆಕ್ಕಿಕೊಳ್ಳುತ್ತಿತ್ತು. ಮುಖ ಸುಟ್ಟರೂ ಸುಡಲಿ, ಇಂದು ಹೊಟ್ಟೆ ತುಂಬ ಆಹಾರ ಸಿಕ್ಕಿದೆ, ರಾತ್ರಿ ತನ್ನೈದು ಮರಿಗಳಿಗೂ ಹೊಟ್ಟೆ ತುಂಬ ಹಾಲು ಕುಡಿಸುತ್ತೇನೆ, ಎಂದು ನೋವಿನಲ್ಲಿಯೂ ಸಂತೋಷಪಟ್ಟಿತು. ಆದರೆ ಸಂಜೆಗೆ ಮನೆಗೆ ಬಂದಾಗ ಮರಿಗಳು ಕಾಣಲಿಲ್ಲ. ಕೂಗಿ ಕರೆಯಿತು. ಅವುಗಳ ಸುಳಿವೇ ಇಲ್ಲ. ಮನೆಯನ್ನು ಒಂದು ಸುತ್ತು ಹಾಕಿತು. ಮನೆಯೊಳಗೆ ಹೋಗಿರಬಹುದೆಂದು ಬಗ್ಗಿ ನೋಡಿತು. ಎಲ್ಲಿಯೂ ಕಾಣಲಿಲ್ಲ. ಚೆನ್ನಿಯ ಪರದಾಟವನ್ನು ನೋಡಿ ಮನೆಯವರು ಮುಸಿ ಮುಸಿ ನಕ್ಕರು. ಸ್ವಲ್ಪ ಹೊತ್ತಾದ ಮೇಲೆ ಬಂದರೂ ಬರಬಹುದೆಂದು ಚೆನ್ನಿ ಪೊದೆಯ ಕೆಳಗೆ ಕುಳಿತಿತು. ನಡು ರಾತ್ರಿಯ ವರೆಗೆ ಕಾದ್ದರೂ ಮರಿಗಳ ಸುಳಿವೇ ಇಲ್ಲ. ಈಗ ಅದಕ್ಕೆ ಮರಿಗಳನ್ನು ಯಾರೋ ಹಿಡಿದುಕೊಂಡು ಹೋಗಿರಬಹುದೆಂದು ಅನುಮಾನ ಬಂತು. ಯಾವ ಮರಿಗಳಿಗಾಗಿ ಮೂತಿ ಸುಡಿಸಿಕೊಂಡು ಬಂದಿತ್ತೋ ಆ ಮರಿಗಳು ಮಾಯವಾಗಿವೆ. ಹಾಲು ತುಂಬಿಕೊಂಡು ಎದೆ ಭಾರವಾಯಿತು. ಆದರೆ ಮೊಲೆಯುಣ್ಣುವ ಕಂದಮ್ಮಗಳು ಕಾಣೆಯಾಗಿದ್ದವು. ಇನ್ನು ಯಾರಿಗಾಗಿ ಬಾಳಬೇಕು? ಯಾವ ಸುಖಕ್ಕೆ ಬೀದಿ ಬೀದಿ ತಿರುಗಿ ಆಹಾರ ಸಂಗ್ರಹಿಸಬೇಕು? ಚೆನ್ನಿಯ ಮನಸ್ಸು ಬೆಂದುಹೋಯಿತು. ಚಿಂತಿಸಿ ಚಿಂತಿಸಿ ಹುಚ್ಚು ಹಿಡಿದಂತಾಯಿತು. ಪೊದೆಯಿಂದ ಹೊರಬಂದು ಬೀದಿಯಲ್ಲಿ ಓಡಿತು. ನಾಯಿಯಾದರೇನು ತಾಯಿಯಲ್ಲವೇ ಅದು.

ಪೊದೆಯನ್ನು ತೊರೆದು ಬೀದಿಯಲ್ಲಿ ಹೊರಟ ಚೆನ್ನಿ ಯಾವ ಗುರಿಯಿಲ್ಲದೆ ಎಲ್ಲೆಲ್ಲಿಗೋ ಹೋಯಿತು. ಸಿಟಿ ಬಿಟ್ಟು ಕಂಟೋನ್‌ಮೆಂಟಿನ ಯಾವುದೋ ಬೀದಿಗೆ ಬಂದಿತು. ಹೊಸದಾಗಿ ಬಂದ ಹೆಣ್ಣು ನಾಯನ್ನು ನೋಡಿ ಕಂಟೋನ್‌ಮೆಂಟ್ ನಾಯಿಗಳು ಮೂಸಿ ನೋಡಿ ಚೆನ್ನಿಯ ಹಿಂದೆ ಮುಂದೆ ಸುಳಿದವು. ಚೆನ್ನಿಗೆ ಈಗ ಯಾವ ಭಯವೂ ಇಲ್ಲ, ಲಜ್ಜೆಯೂ ಇಲ್ಲ. ಶೀಲದ ಚಿಂತೆಯೂ ಇಲ್ಲ, ಶಿಥಿಲವಾದ ಮೇಲೆ ಇನ್ನೆಂತಹ ಶೀಲ! ಒಮ್ಮೆಯಂತೂ ಕೆಟ್ಟಿದ್ದಾಗಿದೆ. ಇನ್ನು ಕೆಟ್ಟರೆ ಏನಾಗುತ್ತೆ ಎಂದು ಯೋಚಿಸಿತು. ತನ್ನ ಹತ್ತಿರ ಬಾಲ ನಲಿಸುತ್ತ ಬಂದ ನಾಯಿಗಳನ್ನು ಕಂಡ ಚೆನ್ನಿ ತಾನೂ ಬಾಲವನ್ನಲ್ಲಾಡಿಸಿತು. ಅವುಗಳನ್ನು ಕೆಣಕಿ ಚೆಲ್ಲಾಟವಾಡಿತು. ವಿಧಿಯ ಸಂಚಿಗೆ ಸಿಕ್ಕು ಜಾರಿ ಹೋದ ಚೆನ್ನಿ ಇನ್ನೂ ಕೆಳಗೆ ಜಾರಿ ಬೀದಿ ನಾಯಿಗಳ ಸಮೂಹದಲ್ಲಿ ಸೇಚ್ಛೆಯಿಂದ ಸ್ವಚ್ಛಂದದಿಂದ ಸ್ವಸಂತೋಷದಿಂದ ಬೆರೆಯಿತು. ಚೆನ್ನಿ ಎಲ್ಲ ನಾಯಿಗಳ ಮನದನ್ನೆಯಾಯಿತು. ಆದರೆ ತನು ವಿನಾಸೆಗೆ ಎಲ್ಲ ನಾಯಿಗಳೂ ಅದರ ದಾಸಾನುದಾಸರಾದವು. ಚೆನ್ನಿ ತಾನು ಹೆಣ್ಣೆಂಬುದನ್ನೂ ಮರೆತು ಗಂಡು ನಾಯಿಗಳ ಮೇಲೆರಗಿ ಪೀಡಿಸುತ್ತಿತ್ತು. ಇದರ ಕೀಟಲೆಗೆ ಗಂಡು ನಾಯಿಗಳೇ ನಾಚಿ ನಿಲ್ಲುತ್ತಿದ್ದುವು. ಹಿಂದೆ ಗಂಡು ನಾಯಿಗಳನ್ನು ಕಂಡರೆ ಚೆನ್ನಿ ಹೆದರಿ ರಕ್ಷಣೆಗಾಗಿ ಓಡುತ್ತಿತ್ತು. ಈಗ ಚೆನ್ನಿಯನ್ನು ಕಂಡರೆ ಗಂಡು ನಾಯಿಗಳೇ ಹೆದರಿ ಬಾಲ ಮುದುರಿಕೊಂಡಿರುತ್ತಿದ್ದುವು. ಮಾನನ್ನು ಬಿಟ್ಟವಳು ಊರಿಗೆ

ದೊಡ್ಡವಳಂತೆ. ಚೆನ್ನಿಯ ಪಾಲಿಗಂತೂ ಈ ಮಾತು ನಿಜವಾಗಿತ್ತು.

ಒಂದು ದಿನ ಚೆನ್ನಿ ಯಾವುದೋ ಬೀದಿಯಲ್ಲಿ ಹೋಗುವಾಗ ಒಂದು ದೊಡ್ಡ ಬಂಗಲೆಯ ಬಾಗಿಲಲ್ಲಿ ದಷ್ಟಪುಷ್ಟವಾಗಿ ಬೆಳೆದಿದ್ದ ಬಿಳಿಯ ಗಂಡು ನಾಯಿಯನ್ನು ನೋಡಿತು. ಕಂಪೌಂಡಿನ ಗೇಟಿನ ಬಳಿ ನಿಂತು ಇನ್ನೂ ನೋಡಿತು. ಎಷ್ಟು ನೋಡಿದರೂ ಪದೇ ಪದೇ ನೋಡಬೇಕೆನಿಸಿತು. ಚೆನ್ನಿ ಎಷ್ಟೋ ನಾಯಿಗಳನ್ನು ನೋಡಿತ್ತು. ಆದರೆ ಈ ನಾಯಿಗೂ ಅವುಗಳಿಗೂ ಸಾಟಿಯುಲ್ಲಿ? ತನ್ನನಿಯ ದೋಮನೂ ಇಷ್ಟು ಸುಂದರನಾಗಿರಲಿಲ್ಲ. ಕಣ್ಣು ತಣಿಯುವ ವರೆಗೂ ನೋಡುತ್ತಾ ನಿಂತಿತು. ಹಾಗೆಯೇ ನೋಡುತ್ತಿರುವಾಗ ಕರಿ ಮುಖದ ಪಡ್ಡೆ ಹೆಂಗಸೊಬ್ಬಳು ಆ ನಾಯಿಯನ್ನು ಹಿಡಿದು-ಕೊಂಡು ಕಂಪೌಂಡಿನ ಹೊರಗೆ ಬಂದಳು. ಅವಳು ಅದನ್ನು ಟಾಮಿ ಎಂದು ಕರೆಯುತ್ತಿದ್ದಳು. ಹತ್ತಿರದಲ್ಲಿ ಆ ನಾಯಿಯನ್ನು ನೋಡಿದ ಚೆನ್ನಿಯ ಮನಸ್ಸಿನಲ್ಲಿ ಏನೇನೋ ಭಾವನೆಗಳು ಮೂಡಿ-ದುವು. ಮೈಯಲ್ಲಿ ಆಸೆ ಹರಿದಾಡಿತು. ಕೂಡಿದರೆ ಇಂತಹ ನಾಯಿಯ ಜೊತೆ ಕೂಡಬೇಕೆಂಬ ಬಯಕೆ ಅಂಕುರಿಸಿತು. ಇದನ್ನು ಸಾಧಿಸಿಯೇ ತೀರುತ್ತೇನೆ ಎಂದು ಮನಸ್ಸಿನಲ್ಲಿಯೇ ನಿರ್ಧರಿ-ಸಿತು.

ಆ ಬಂಗಲೆಯುಲ್ಲಿ ಒಬ್ಬ ಇಂಗ್ಲಿಷ್ ದೊರೆ ವಾಸವಾಗಿದ್ದ. ಮನೆಯಲ್ಲಿ ಹೆಂಡತಿ, ಒಂದು ಮಗು, ಇಷ್ಟೇ ಅವನ ಸಂಸಾರ. ಮನೆಗೆಲಸಕ್ಕೆ ಒಬ್ಬಳು ಕಿರುಸ್ತಾನಿ ಆಯಾ ಇದ್ದಳು. ಅಲ್ಲದೆ ರಾತ್ರಿ ಹೊತ್ತು ಬಂಗಲೆ ಕಾಯಲು ಒಬ್ಬ ವಾಚ್‌ಮನ್ ಇದ್ದ. ಅವನು ಸಂಜೆಗೆ ಬಂದು ಬೆಳಗ್ಗೆ ಹೋಗುತ್ತಿದ್ದ. ಗೇಟಿನ ಬಳಿ ಮರದ ಮನೆ ಯಿತ್ತು. ಅದು ವಾಚ್‌ಮನ್ನನ ವಾಸಸ್ಥಾನ. ಆಯಾ ದೊರೆಯ ಮನೆಯಲ್ಲಿಯೇ ಇರುತ್ತಿದ್ದಳು.

ಚೆನ್ನಿ ಸಂಜೆಗೆ ಬಂಗಲೆಯ ಹತ್ತಿರ ಹೋಯಿತು. ಗೇಟಿನಲ್ಲಿ ವಾಚ್‌ಮನ್ ಕುಳಿತಿದ್ದ. ಗೇಟಿನ ಹೊರಗಡೆ ಚೆನ್ನಿ ಸುಮ್ಮನೆ ಮಲಗಿತು. ವಾಚ್‌ಮನ್ ಎಂಟು ಗಂಟೆಗೆ ತನ್ನ ಟಿಫಿನ್ ಕ್ಯಾರಿಯರ್ ಬಿಚ್ಚಿದ. ಚೆನ್ನಿ ಎದ್ದು ನಿಂತು ಬಾಲವಲ್ಲಾಡಿಸಿತು. ವಾಚ್‌ಮನ್ ಊಟವಮಾಡಿ ಚೆನ್ನಿಗೂ ಎರಡು ತುತ್ತು ಹಾಕಿದ. ಹೀಗೆ ಏಳೆಂಟು ದಿನ ಚೆನ್ನಿ ವಾಚ್‌ಮನ್ನನ ಜೊತೆ ಸಂಜೆಯಿಂದ ಮುಂಜಾನೆಯ ವರೆಗೂ ಗೇಟಿನ ಬಳಿ ಇರುತ್ತಿತ್ತು. ಅವನಿಗೂ ಒಂದು ನಾಯಿ ಇದ್ದರೆ ಉತ್ತಮವೆಂದು ತೋರಿತು. ಆತ ಚೆನ್ನಿಯನ್ನು ಕರೆದು ತನ್ನ ಮರದ ಮನೆಯಲ್ಲಿ ಮಲಗಲು ಅವಕಾಶವಿತ್ತ. ಅಂತೂ ಮನೆ ಬಿಟ್ಟ ಮೇಲೆ ಮೊದಲ ಸಲ ಚೆನ್ನಿಗೆ ಆಧಾರ ಸಿಕ್ಕಿತ್ತು. ವಾಚ್‌ಮನ್ ಮನೆಗೆ ಹೋದಾಗಲೂ ಚೆನ್ನಿ ಆ ಮರದ ಮನೆಯಲ್ಲೇ ಇರುತ್ತಿತ್ತು. ಒಮ್ಮೆ ದೊರೆ ಚೆನ್ನಿಯನ್ನು ನೋಡಿ ಇದು ಯಾರ ನಾಯಿಯೆಂದು ಕೇಳಿದಾಗ ವಾಚ್‌ಮನ್, "ನನ್ನದು, ರಾತ್ರಿವೇಳೆ ಜೊತೆಯಲ್ಲಿದ್ದರೆ ಒಳ್ಳೆಯದು," ಎಂದಿದ್ದ. ಆ ಪರಂಗಿ ದೊರೆ ಅದಕ್ಕೆ ಆಕ್ಷೇಪಿಸಲಿಲ್ಲ. ಕೆಲವು ದಿನ ಕಳೆದ ಮೇಲೆ ಚೆನ್ನಿ ಕಂಪೌಂಡಿನಲ್ಲಿ ಅಡ್ಡಾಡುವಷ್ಟು ಸಲಿಗೆಯನ್ನು ಪಡೆದುಕೊಂಡಿತು. ಹಾಗೆ ಅಡ್ಡಾಡುವಾಗ ಮನೆಯಂಗಳದಲ್ಲಿ ರಾಜಕುಮಾರ-ನಂತಿದ್ದ ಟಾಮಿಯನ್ನು ಕದ್ದು ನೋಡುತ್ತಿತ್ತು. ಒಂದು ದಿನ ಟಾಮಿಯೂ ಚೆನ್ನಿಯನ್ನು ನೋಡಿತು. ಆಗ ಚೆನ್ನಿಯ ಮನಸ್ಸು ಪ್ರಫುಲ್ಲಿತ ವಾಗಿ ತನ್ನ ಇಂಗಿತವನ್ನು ತಿಳಿಸಲು ಬಾಲ ವನ್ನಲ್ಲಾಡಿಸಿತು. ಇದನ್ನರಿತ ಟಾಮಿಯೂ ತನ್ನ ಬಾಲವನ್ನಲಾಡಿಸಿತು. ಹೀಗೆ ಚೆನ್ನಿ ತನ್ನ 'ಸಾಧನೆ'ಯಲ್ಲಿ ಹಂತ ಹಂತವಾಗಿ ಮುಂದು ವರೆಯುತ್ತಿತ್ತು. ತನ್ನ ಹಾವಭಾವದ ಬಲೆಯನ್ನು ಆ ಇಂಗ್ಲಿಷ್ ನಾಯಿಯ ಮೇಲೆ ಬೀಸಿತು. ಹೆಣ್ಣಿನ ಮುಖವನ್ನೇ ಕಾಣದ ಟಾಮಿಯು ಚೆನ್ನಿಯ ಬೆಡಗಿನ ನಡುಗೆಗೆ, ಅದರ ಮೈಮಾಟಕ್ಕೆ ಮರುಳಾಯಿತು. ಆದರೆ ಅದನ್ನು ಯಾವಾಗಲೂ ಸರಪಳಿಯಿಂದ ಕಟ್ಟಿರಲಾಗುತ್ತಿತ್ತು. ಆಚೆಗೆ ಹೋಗುವಾಗ ಆಯಾ ಸರಪಳಿಯನ್ನು ಹಿಡಿದುಕೊಂಡೇ ಹೋಗುತ್ತಿದ್ದಳು. ಹೀಗಾಗಿ ಮನಸ್ಸು ಚೆನ್ನಿಯ ಸಂಗಸುಖವನ್ನು ಸವಿಯ-ಬೇಕೆಂದು ತವಕಿಸುತ್ತಿದ್ದರೂ ಅದು ಸಾಧ್ಯವಾಗದೆ ದೂರದಿಂದಲೇ ನೋಡಿ ಜೊಲ್ಲು ಸುರಿಸುತ್ತಿತ್ತು.

ಕ್ರಿಸ್‌ಮಸ್ ಹಬ್ಬಕ್ಕೆ ದೊರೆಸಾನಿ ಮತ್ತು ಮಗ ಇಂಗ್ಲೆಂಡಿಗೆ ಹೊರಟರು. ದೊರೆಯು

ಹೆಂಡತಿ ಮಗುವಿನೊಂದಿಗೆ ಕಾರಿನಲ್ಲಿ ಕುಳಿತನು. ಆಯಾ ಸಾಮಾನುಗಳನ್ನು ಇಟ್ಟುಕೊಂಡು ಹಿಂದುಗಡೆ ಕುಳಿತಳು. ಕಾರು ವಿಮಾನ ನಿಲ್ದಾಣತ್ತ ಹೊರಟಿತು. ಮನೆಯಂಗಳದಲ್ಲಿ ಟಾಮಿಯೊಂದೇ ಇತ್ತು. ಕಾರು ಗೇಟು ದಾಟಿದ ಮೇಲೆ ಚೆನ್ನಿ ಒನಪಿನಿಂದ ಒನೆದಾಡುತ್ತಾ ಮನೆಯಂಗಳಕ್ಕೆ ಕಾಲಿಟ್ಟಿತು. ದೂರದಲ್ಲೇ ನೋಡಿ ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದ ಟಾಮಿಗೆ ಚೆನ್ನಿ ಹತ್ತಿರ ಬಂದಾಗ ತುಸು ಭಯವಾಯಿತು. ಮೈಯಲ್ಲಿ ಚಳಿಗಟ್ಟಿದಂತಾಗಿ ನಡುಕ ಹುಟ್ಟಿತು. ಅದು ಇಷ್ಟು ಹತ್ತಿರ ಬಂದ ಹೆಣ್ಣೊಂದನ್ನು ನೋಡುತ್ತಿರುವುದು ಇದೇ ಮೊದಲು. ಏನು ಮಾಡಲೂ ತೋಚದೆ ಚೆನ್ನಿಯನ್ನೇ ನೋಡುತ್ತ ಸುಮ್ಮನೆ ನಿಂತಿತು. ಚೆನ್ನಿ ಪಳಗಿದ ಹೆಣ್ಣು. ಟಾಮಿಯ ಪುಕ್ಕಲನ್ನು ಅರಿಯಿತು. ಒಂದೊಂದೇ ಹೆಜ್ಜೆಯಿಟ್ಟು ಟಾಮಿಯ ಮೈ ಸೋಂಕುವಂತೆ ನಿಂತಿತು. ಚೆನ್ನಿಯ ಮೈ ಸ್ಪರ್ಶದಿಂದ ಟಾಮಿಯ ದೇಹದಲ್ಲಿ ಕಾವೇರಿತು. ಮೈಚಳಿ ಬಿಟ್ಟು ಮೆಲ್ಲಮೆಲ್ಲನೆ ಧೈರ್ಯ ತಾಳಿತು. ಚೆನ್ನಿಯೂ ಟಾಮಿಯ ಮುಖವನ್ನು ನೆಕ್ಕಿತು. ಟಾಮಿಯೂ ಹಾಗೆಯೇ ಮಾಡಿತು. ಹೀಗೆ ಚೆನ್ನಿ ತನ್ನ ಮೇಲೆ ಕಾಲು ಹಾಕಿದಾಗ ತಾನೂ ಚೆನ್ನಿಯ ಮೇಲೆ ಕಾಲು ಹಾಕಿತು. ಹೀಗೆ ಚೆನ್ನಿ ಟಾಮಿಗೆ ಮದನ ಚೇಷ್ಟೆಗಳನ್ನು ಕಲಿಸಿಕೊಟ್ಟಿತು. ಅಷ್ಟರಲ್ಲಿ ಕಾರು ಬಂದ ಸದ್ದಾಯಿತು. ಚೆನ್ನಿ ಮೆಲ್ಲನೆ ಅಲ್ಲಿಂದ ಹೊರಟು ಸ್ವಲ್ಪ ದೂರದಲ್ಲಿ ನಿಂತಿತು.

ಕಾರು ಮನೆಯಂಗಳದಲ್ಲಿ ನಿಂತಿತು. ದೊರೆ ಮತ್ತು ಆಯಾ ಇಳಿದರು. ಆಯಾ ದೂರದಲ್ಲಿದ್ದ ಚೆನ್ನಿಯನ್ನು ನೋಡಿ ಓಡಿಸಿದಳು. ಟಾಮಿಯ ಮೈದಡವಿ ಒಳ ಹೋದಳು. ಅದೇಕೋ ಚೆನ್ನಿಯನ್ನು ಕಂಡರೆ ಆಯಾ ಸಿಟ್ಟಿಗೇಳುತ್ತಿದ್ದಳು. ಈ ಕಂತ್ರಿ ನಾಯಿ ಎಲ್ಲಿ ಟಾಮಿಯನ್ನು ಕೆಡಿಸಿಬಿಡುತ್ತದೋ ಎಂಬ ಭಯ ಆಕೆಗೆ. ಹೀಗಾಗಿ ಆಕೆ ಅವೆರಡೂ ಹತ್ತಿರ ಬಾರದಂತೆ ಮೈಯೆಲ್ಲ ಕಣ್ಣಾಗಿ ಕಾಯುತ್ತಿದ್ದಳು. ಚೆನ್ನಿಗೆ ಅವಳ ಸಂಶಯದ ಅರಿವಾಯಿತೇನೊ. ದುಡುಕಿದರೆ ಕೆಲಸ ಕೈಗೂಡುವುದಿಲ್ಲವೆಂದು ಕೆಲ ದಿನ ಟಾಮಿಯನ್ನು ನೋಡಿಯೂ ನೋಡದೇ ಇತ್ತು. ದುಡುಕು ಬಲು ಕೆಡಕು. ತಾಳಿದವನು ಬಾಳಿಯಾನೆಂದು ಚೆನ್ನಿ ತಾಳ್ಮೆಯಿಂದ ಯುಕ್ತ ಸಮಯಕ್ಕಾಗಿ ಕಾಯುತ್ತಿತ್ತು.

ಆಯಾ ದುಂಡು ದುಂಡಗೆ ಬೆಳೆದ ಮುದ್ದು ಮುಖದ ಹೆಣ್ಣು. ಅವಳ ತುಂಬು ನಿತಂಬ, ಉನ್ನತ ಕುಚಗಳು, ಮೈಕಟ್ಟು, ದಟ್ಟವಾಗಿ ಬೆಳೆದ ಮಾರುದ್ದದ ಮುಡಿ, ಅವಳ ಅಂಗ ಸೌಷ್ಟವವನ್ನು ಸಾರಿ ಹೇಳುತ್ತಿದ್ದವು. ಶುಭ್ರವಾದ ಬಿಳಿ ಸೀರೆಯುಟ್ಟು, ಬಿಗಿ ಕುಪ್ಪುಸ ತೊಟ್ಟು, ಮುಡಿಯನ್ನು ಗಂಟುಹೂಡಿ ಹೂ ಮುಡಿದಾಗ ಅವಳ ಅಂಗ ರಚನೆ ಸುಸ್ಪಷ್ಟವಾಗಿ ತೋರುತಿತ್ತು. ಆದರೆ ಅವಳ ಮೈಬಣ್ಣ ಮಾತ್ರ ಇದ್ದಲೂ ನಾಚುವಷ್ಟು ಕಪ್ಪು. ಹೀಗಾಗಿ ಅವಳು ಬಿಳೀ ಸೀರೆಯುಟ್ಟಾಗ ಅವಳ ಕರಿ ಮುಖ ಮತ್ತಷ್ಟು ಕಪ್ಪಾಗಿ ಮಿನುಗುತಿತ್ತು. ಅವಳು ನಕ್ಕಾಗ ದಂತಪಂಕ್ತಿ ಕಾರ್ಮೋಡಗಳ ಮಧ್ಯೆ ಇಣುಕಿ ನೋಡುವ ಚಂದ್ರರೇಖೆಯಂತೆ ಕಾಣುತ್ತಿತ್ತು.

ದೊರೆಸಾನಿ ಇಂಗ್ಲೆಂಡಿಗೆ ಹೋದ ಮೇಲೆ ಆಯಾ ಬಂಗಲೆಯ ಯಜಮಾನಿಯಾದಳು. ಅವಳ ನಡೆನುಡಿಯಲ್ಲಿ, ಒನಪು ಒಯ್ಯಾರದಲ್ಲಿ ಶೃಂಗಾರದಲ್ಲಿ ಬದಲಾವಣೆಯಾಯಿತು. ದಿನಕ್ಕೆ ಎರಡು ಬಾರಿ ಸ್ನಾನ ಮಾಡುತ್ತಿದಳು. ಇದೂ ಅಲ್ಲದೆ ಹತ್ತು ಸಾರಿ ಮುಖ ತೊಳೆಯುವಳು. ತೊಳೆದಷ್ಟೂ ಅವಳ ಮುಖದಲ್ಲಿ ಕಪ್ಪೇರುತ್ತಿತ್ತು. ಆ ಕಪ್ಪನ್ನು ಮುಚ್ಚಲು ಸ್ನೋ ಬಳಿಯುತ್ತಿದ್ದಳು. ದಟ್ಟವಾಗಿ ಪೌಡರ್ ಸುರಿದುಕೊಳ್ಳುತ್ತಿದ್ದಳು. ಅವಳು ಶೃಂಗಾರ ಮಾಡಿಕೊಂಡ ಕೆಲ ನಿಮಿಷ ಅವಳ ಮುಖ ನೋಡುವಂತಿರುತ್ತಿತ್ತು. ನಂತರ ತನ್ನ ಸಹಜ ಬಣ್ಣಕ್ಕೆ ತಿರುಗುತ್ತಿತ್ತು. ಆದುದರಿಂದ ಅವಳು ಹತ್ತತ್ತು ನಿಮಿಷಕ್ಕೆ ಪೌಡರ್ ಬಳಿಯುತ್ತಿದ್ದಳು.

ದೊರೆ ಎಷ್ಟು ದಿನ ತಾನೆ ಏಕಾಂಗಿಯಾಗಿದ್ದಾನು! ಅವನ ಮನಸ್ಸು ಆಗಾಗ ಮಿಡಿಯುತ್ತಿತ್ತು. ಆದರೆ ಬೆಂಗಳೂರು ಅವನಿಗೆ ಪರದೇಶ. ಎಂದೂ ಅಲ್ಲಿ ಇಲ್ಲಿ ಹೋದವನಲ್ಲ. ಸಾಲದ್ದಕ್ಕೆ ಅಂಜಿಕೆ ಬೇರೆ. ಹೀಗೆ ಪೇಚಾಡುವಾಗ ಆಯಾ ಕಾಫಿಯ ಟ್ರೇ ತಂದು, ಮೇಜಿನ ಮೇಲಿಟ್ಟು, ಶೃಂಗಾರಭಂಗಿಯಲ್ಲಿ ನಿಂತು, ಕಾಫಿಗೆ ಹಾಲು,

ಸಕ್ಕರೆ ಬೆರೆಸುತ್ತಿದ್ದಳು. ದೊರೆ ಅವಳ ಅಂಗ ಸೌಷ್ಟವವನ್ನು ಅನಿಮೇಷನಾಗಿ ನೋಡಿದ. ದೊರೆ ಹೀಗೆ ನೋಡುವುದನ್ನು ಅವಳೂ ನೋಡಿದಳು. ಆ ಪರಂಗಿ ದೊರೆಯ ಇಂಗಿತವನ್ನು ಈ ಕರೇ ಪರಂಗಿ ಆಯಾ ಅರಿತಳು. ಕಾಫಿ ಕೊಟ್ಟು ತುಟಿಯಲ್ಲೆ ನಕ್ಕು ಹೊರಟಳು. ದೊರೆ ಅವಳ ಸೆರಗು ಹಿಡಿದು ಎಳೆದ. ಅವಳ ಸೆರಗು ಜಾರಿ ಅವಳ ಕುಂಭದಂತಹ ಸ್ತನಗಳು ಪುಟಿದೆದ್ದುವು. ದೊರೆಯು ಕೈ ಹಿಡಿದು ಮೈ ಮುಟ್ಟಿದಾಗ 'ಉ' ಎನ್ನದೆ 'ಉಹು' ಎನ್ನದೆ ಕಾಲ್ಬೆರಳಿನಿಂದ ನೆಲವನ್ನು ಗೀರುತ್ತಾ ದೊರೆಯೆದೆಗೆ ಬೆನ್ನನ್ನು ಆನಿಸಿಕೊಂಡು ನಿಂತಳು. ದೊರೆಯು ಅವಳ ಅಂಗಸೌಷ್ಟವಕ್ಕೆ ಮಾರು ಹೋದರೂ ಅವಳ ಮೈ ಬಣ್ಣ ಜಿಗುಪ್ಸೆ ಹುಟ್ಟಿಸಿತು. ತನ್ನ ಮನಸ್ಸನ್ನು ತಡೆಹಿಡಿದು ತನ್ನ ಆತುರದ ನಡತೆಗೆ ತಾನೇ ನಾಚಿ ಸುಮ್ಮನಾದ.

ಆಯಾ ಹೊರಗೆ ಹೋದ ಮೇಲೆ ದೊರೆ ಹಾಸಿಗೆಯ ಮೇಲೆ ಉರುಳಿದ. ಆತನ ತಲೆಯಲ್ಲಿ ನೂರಾರು ಚಿಂತೆಗಳು ತುಂಬಿಕೊಂಡವು. ತನ್ನ ತಳಮಳವನ್ನು ಶಮನಮಾಡಲು ಲೋಟಕ್ಕೆ ಬ್ರಾಂದಿ ಬಗ್ಗಿಸಿಕೊಂಡು ಕಂಠ ಪೂರ್ತಿ ಕುಡಿದ. ಸಲ್ಲದ ಯೋಚನೆಗಳು ಮೂಡಿದಾಗ, ಹೀನ ಕಾರ್ಯಕ್ಕೆ ಕೈಯಿಡುವಾಗ ಮದ್ಯ ಉತ್ತೇಜನ ಕೊಡುತ್ತದೆ, ಪ್ರೋತ್ಸಾಹ ನೀಡುತ್ತದೆ, ಧೈರ್ಯವೀಯುತ್ತದೆ. ಕಾರ್ಯ ಎಷ್ಟೇ ಹೀನ ವಾಗಿರಲಿ, ಅದನ್ನು ಸಮರ್ಥಿಸಲು ಉಪಾಯ ಗಳನ್ನು ಸೂಚಿಸುತ್ತದೆ.

ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ದೊರೆಗೆ ಆಯಾಳ ತುಂಬಿದ ದೇಹವೇ ಕಾಣುತ್ತಿತ್ತು. ಅಂತಹ ಮೈಕಟ್ಟಿನ ನಿತಂಬಿನಿಯನ್ನು ಅವನು ನೋಡಿಯೇ ಇರಲಿಲ್ಲ. ಅಷ್ಟೇಕೆ, ದೊರೆಸಾನಿ ಯನ್ನುಳಿದು ಅವನು ಯಾವ ಹೆಣ್ಣನ್ನೂ ನೋಡಿರಲಿಲ್ಲ. ಅವನ ಚಿತ್ತ ಕಲಕಿತು. ಅವಳು ಕಪ್ಪಾಗಿದ್ದರೇನು? ಅವಳಷ್ಟು ದೃಢವಾದ ಅಂಗಾಂಗಗಳು ಯಾರಿಗಿವೆ? ಸಕ್ಕರೆಯಂತೆ ಬೆಲ್ಲ ಬೆಳ್ಳಗಿಲ್ಲ ನಿಜ. ಆದರೆ ರುಚಿಯಲ್ಲಿ ಕೊರತೆ ಇದೆಯೇ? ಸಕ್ಕರೆ ಇಲ್ಲದಾಗ ಬೆಲ್ಲವನ್ನು ಬಳಸುವುದಿಲ್ಲವೆ? ಮಲ್ಲಿಗೆಗೆ ಬಣ್ಣವೂ ಇದೆ, ಮಧುರ ವಾಸನೆಯೂ ಇದೆ. ಮರುಗ ಮಲ್ಲಿಗೆ ಯಂತಿರದಿದ್ದರೂ ತನ್ನದೇ ಆದ ಸುವಾಸನೆ ಯನ್ನು ಬೀರುತ್ತದೆ. ಸೌಂದರ್ಯ ಎಂದರೇನು? ಕೇವಲ ಮೈಬಣ್ಣ ಸೌಂದರ್ಯವೇ? ಕುರೂಪಿಯು ಎಷ್ಟೇ ಬೆಳ್ಳಗಿದ್ದರೂ ಸುಂದರಿಯೆನಿಸಿಕೊಳ್ಳು ವಳೇ? ಇನ್ನೂ ಹೀಗೆಯೆ ತರ್ಕಿಸುತ್ತ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದ.

ಬಂಗಲೆಯ ಬಾಗಿಲು ಮುಚ್ಚಿತು. ನಡು ಹಗಲು. ಚೆನ್ನಿ ಮೆಲ್ಲನೆ ಬಂಗಲೆಯ ಹತ್ತಿರ ಬಂತು. ಚೆನ್ನಿಯನ್ನು ಕಂಡು ಟಾಮಿ ನಾಲಿಗೆ ಸವರಿಕೊಳ್ಳುತ್ತಾ ಎದ್ದು ನಿಂತಿತು. ಚೆನ್ನಿ ಮಂದಗಮನದಿಂದ ಟಾಮಿಯ ಹತ್ತಿರ ಹೋಗಿ ಮೈ ಮುಟ್ಟುವಂತೆ ನಿಂತಿತು. ಅದರ ಮೂತಿಗೆ ತನ್ನ ಮೂತಿಯನ್ನು ಹಿಡಿದಿತ್ತು.

ಇತ್ತ ಹಾಸಿಗೆಯಲ್ಲಿ ಮಲಗಿದ್ದ ದೊರೆಗೆ ಅದಾವ ಬೆಳಕು ಹೊಳೆಯಿತೋ, ಎದ್ದು "ಆಯಾ" ಎಂದು ಕೂಗಿದ. ಆಯಾ ನಾಚೆಯಂತೆ ತೇಲಿ ಬಂದು ಬಾಗಿಲಲ್ಲಿ ನಿಂತಳು. ಅವಳ ಬಲದೋಳು ಬಾಗಿಲನ್ನು ಹಿಡಿದಿತ್ತು. ಎಡ ದೋಳು ಸೊಂಟದ ಮೇಲಿತ್ತು. ದೇಹ ಬಲಗಡೆ ವಾಲಿತ್ತು. ದೊರೆ ಅವಳ ಒಯ್ಯಾರಕ್ಕೆ ಮಾರು ಹೋದ. ಅವಳ ಭಂಗಿಗೆ ಮಂಗನಂತಾದ. ಅವಳು ಮನೆಯ ಆಳು ಎಂಬುದನ್ನು ಯೋಚಿಸ ಲಿಲ್ಲ. ಅವಳ ಮೈಬಣ್ಣವಾಗಲಿ ಸ್ಥೂಲತೆಯಾಗಲಿ ಹೇಯವೆನಿಸಲಿಲ್ಲ. ಅವಳ ಮೃದು ಕಠಿಣ ಸ್ಥೂಲ ದೇಹವನ್ನು ತನ್ನ ಬಾಹುಗಳಿಂದ ಬಂಧಿಸಿದ. ಕೈಗಳಿಂದ ಅವಳ ವಿಸ್ತಾರವಾದ ಬೆನ್ನನ್ನು ಸವರಿದ. ಅವನ ಕೈಗಳು ಬೆನ್ನಿನಿಂದ ಸೊಂಟಕ್ಕೆ, ಸೊಂಟದಿಂದ ಕೆಳಗಿಳಿದಾಗ ಆಯಾ ಕಿಲಕಿಲನೆ ನಕ್ಕಳು. ಇವಳ ನಗು ಹೊರಗಡೆಯಿದ್ದ ಟಾಮಿಗೂ ಕೇಳಿತು. ಇವಳ ನಗುವಿನಿಂದ ಉತ್ತೇಜನ ಗೊಂಡ ಟಾಮಿ ಚೆನ್ನಿಗೆ ತೆಕ್ಕೆಬಿತ್ತು. ಚೆನ್ನಿಯ ಆಸೆ ಕೈಗೂಡಿತು. ಬಂಗಲೆಯ ಒಳಗೂ ಹೊರಗೂ ಅನಂಗನ ಆಟ ನಡೆಯಿತು.

ಆಯಾ ಹೊರಬಂದಾಗ ಅವಳ ಮುಖದ ಮೇಲಿನ ಪೌಡರ್ ಅಲ್ಲಲ್ಲಿ ಒರೆಸಿ ಹೋಗಿ ಮಡಕೆಯ ಮೇಲೆ ಸುಣ್ಣ ಚಿಮುಕಿಸಿದಂತೆ ಕಾಣುತ್ತಿತ್ತು. ಅವಳ ಮುಂಗೂದಲು ಕೆದರಿ

ಹಾರಾಡುತಿತ್ತು. ಗಂಜಿ ಹಾಕಿ ಇಸ್ತ್ರಿ ಮಾಡಿದ್ದ ಅವಳ ಸೀರೆ ಸುಕ್ಕು ಸುಕ್ಕಾಗಿತ್ತು. ಸೀರೆಯನ್ನು ಸರಿ ಮಾಡಿಕೊಳ್ಳುತ್ತಾ ಆಯಾ ಮುಂದಿನ ಬಾಗಿಲು ತೆರೆದಳು. ಹೊರಗಿನ ದೃಶ್ಯವನ್ನು ನೋಡಿ ಹೌಹಾರಿದಳು. ಕೊನೆಗೂ ಟಾಮಿಯನ್ನು ಕಂತ್ರಿ ನಾಯಿ ಕೆಡಿಸಿಬಿಟ್ಟಿತ್ತು. ಕೋಪದಿಂದ ಅವಳ ಕರಿಯ ಮುಖವೂ ಕೆಂಪಾಯಿತು. ಒಳಗೆ ಹೋಗಿ ಒಂದು ಕೋಲನ್ನು ತಂದು ಚೆನ್ನಿಯನ್ನು ಬಲವಾಗಿ ಬಡಿದಳು. ಇಹವನ್ನೇ ಮರೆತು ಸಗ್ಗದ ಸಿಹಿಗನಸು ಕಾಣುತ್ತಿತ್ತು ಟಾಮಿ. ಆಯಾಳ ಕರಾಳ ಮುಖವನ್ನು ಕಂಡು ಅದರ ಸರ್ವಾಂಗಗಳೆಲ್ಲವೂ ಸಂಕುಚಿತಗೊಂಡು ನಡುಗತೊಡಗಿದವು. ಚೆನ್ನಿಯು ತೆಕ್ಕೆಯಿಂದ ಬಿಡಿಸಿಕೊಂಡು ಕಯ್ಯ್ಯಯ್ಯಾ ಎಂದು ಅರಚುತ್ತಾ ದೂರ ಹೋಯಿತು. ಆಯಾ ಅದನ್ನು ಓಡಿಸಿಕೊಂಡು ಹೋಗಿ ಗೇಟಿನಿಂದ ಆಚೆ ಅಟ್ಟಿದಳು.

ತಾನು ಕಂತ್ರಿಯೆಂಬುದನ್ನು ಮರೆತು ದೊರೆಯೊಂದಿಗೆ ಬೆರೆತಳು. ಆದರೆ ಅವಳೇ ಚೆನ್ನಿಯನ್ನು ಕಂತ್ರಿಯೆಂದು ಹೊಡೆದಟ್ಟಿದಳು. ಇದೆಂತಹ ನ್ಯಾಯ! ಮೂಕ ಪ್ರಾಣಿಯಾದರೇನಾಯಿತು? ಅದಕ್ಕೂ ಹೃದಯವಿರುವುದಿಲ್ಲವೆ? ಹೃದಯ ಮಿಡಿಯುವುದಿಲ್ಲವೇ? ಈ ತಾರತಮ್ಯವೇಕೆ? ಈ ಆತ್ಮವಂಚನೆಯೇಕೆ?

ಚೆನ್ನಿ ಗೇಟಿನಾಚೆ ರಸ್ತೆಯ ಮತ್ತೊಂದು ಪಕ್ಕದಲ್ಲಿ ಕುಳಿತಿತ್ತು. ಏಟು ಬಲವಾಗಿ ಬಿದ್ದಿತ್ತು. ಅದರ ಒಂದು ತೊಡೆ ಜಜ್ಜಿ ಹೋಗಿತ್ತು. ನಡೆಯಲಾಗುತ್ತಿರಲಿಲ್ಲ. ನೋವಿನಿಂದ ನರಳುತ್ತ ಮಲಗಿತು. ಸಂಜೆಯಾಯಿತು. ವಾಚ್‌ಮನ್ ಬಂದ. ಆಯಾ ಅವನನ್ನು ಕರೆದು, "ಆ ಕಂತ್ರಿಯ ನಾಯಿಯನ್ನು ಒಳಗೆ ಬಿಡಬೇಡ. ನಮ್ಮ ಟಾಮಿಯನ್ನು ಕೆಡಿಸಿ ಬಿಡುತ್ತೆ," ಎಂದು ಹುಕುಂ ಮಾಡಿದಳು. ವಾಚ್‌ಮನ್ ತಲೆಯಲ್ಲಾಡಿಸಿದ. ಅವಳು ಬಂಗಲೆಗೆ ಹೋದ ಮೇಲೆ "ಈ ಮುಂಡೆ ಕಂತ್ರಿ ಅಲ್ವೇನೋ," ಎಂದು ಗೊಣಗಿಕೊಂಡ. ದೂರದಲ್ಲಿ ಮಲಗಿದ್ದ ಚೆನ್ನಿಗೆ ಸ್ವಲ್ಪ ಅನ್ನ ಹಾಕಿದ. ಚೆನ್ನಿ ಏಳಲಾರದೇ ಮಲಗಿಕೊಂಡೇ ಅನ್ನವನ್ನು ತಿಂದು ರಾತ್ರಿ ಕಳೆಯಿತು.

ಮರುದಿನ ಸ್ವಲ್ಪ ಚೇತರಿಸಿಕೊಂಡಿತು. ಬಂಗಲೆಗೆ ಹೋಗುವಂತಿಲ್ಲ. ಗೇಟಿನಲ್ಲೇ ಇಣಕಿ ನೋಡಿತು. ಆಯಾ ಟಾಮಿಗೆ ಬಿಸ್ಕತ್ತು ತಿನ್ನಿಸುತ್ತಿದ್ದಳು. ಅದರ ಮೈದಡವಿ. "ಅಂತಾ ಕಂತ್ರಿ ನಾಯಿ ಸಂಗ ಮಾಡಬಾರದು ಟಾಮಿ. ಮೈ ಕೆಡುತ್ತೆ," ಎಂದು ಮುದ್ದಿಸುತ್ತಿದ್ದಳು. ಏಕೋ ಗೇಟಿನ ಕಡೆ ನೋಡಿದಾಗ ಅವಳ ಸದ್ದಿನ ಕಣ್ಣಿಗೆ ಚೆನ್ನಿ ನಿಂತಿರುವುದು ಕಾಣಿಸಿತು. ರಾಕ್ಷಸಿಯಂತೆ ಕೋಲು ಹಿಡಿದುಕೊಂಡು ಗೇಟಿಗೆ ಬಂದಳು. ಕುಂಟುತ್ತಲೇ ಚೆನ್ನಿ ಓಡಿಹೋಯಿತು. ಬೀದಿ ತಿರುಗಿ ಹೊಟ್ಟೆ ತುಂಬಿಸಿಕೊಂಡಿತು. ಕಾಲೆಳೆದುಕೊಂಡು ಕುಂಟುತ್ತಾ ನಡೆಯುವ ಚೆನ್ನಿಯನ್ನು ಕಂಡು ಯಾವ ಬೀದಿ ನಾಯಿಯೂ ಮೂಸಿ ನೋಡಲಿಲ್ಲ. ತಾನೇ ಹತ್ತಿರ ಹೋದರೂ ಮುಖ ತಿರುವಿಕೊಂಡು ಹೋಗುತ್ತಿದ್ದುವು. ಹರೆಯವಿದ್ದಾಗ ರಾಣಿಯಂತೆ ಮೆರೆದ ವೇಶ್ಯೆ ಮುಪ್ಪಿನಲ್ಲಿ ರೋಗಕ್ಕೆ ತುತ್ತಾಗಿ ಎಲ್ಲರಿಂದಲೂ




"ಇನ್ನೂ ನಾಲ್ಕು ಕಡೆ ಗಿಡ ನೆಡುವ ಕಾರ್ಯಕ್ರಮವಿರುವುದರಿಂದ ಇಲ್ಲಿಯ ಕಾರ್ಯಕ್ರಮವನ್ನು ಅವಸರವಾಗಿ ಮುಗಿಸಬೇಕಾಯ್ತು ಅಷ್ಟೆ."

ತಿರಸ್ಕೃತಳಾಗಿ ಕೊನೆಗೆ ಭಿಕ್ಷೆ ಬೇಡುವಂತಾಗಿತ್ತು ಚೆನ್ನಿಯ ಸ್ಥಿತಿ.

ಒಂದು ರಾತ್ರಿ ಚೆನ್ನಿ ತನ್ನ ಗತಜೀವನವನ್ನು ಮೆಲುಕು ಹಾಕಿತು. ತಾನು ಮಾಡಿದ ತಪ್ಪೇನು, ಯಾವ ಅಪರಾಧಕ್ಕಾಗಿ ಈ ಶಿಕ್ಷೆ ಎಂದು ಯೋಚಿಸತೊಡಗಿತು. 'ನಾನೂ ಇನಿಯ ದೋಮನೂ ಜೀವದ ಹಂಗು ತೊರೆದು ತೋಳದೊಡನೆ ಹೋರಾಡಿ ಅದನ್ನು ಕೊಂದು ಹಾಕಿದೆವು. ಆ ಹೋರಾಟದಲ್ಲಿ ದೋಮ ಸತ್ತು ಹೋದದ್ದು ನನ್ನ ತಪ್ಪೆ? ಚನ್ನೇಗೌಡರ ಮಗನ ನಾಯಿ ತಾನೇ ಮೇಲೆ ಬಿದ್ದು, ಕೆಣಕಿ, ಚೆಲ್ಲಾಟವಾಡಿ ಕೊನೆಗೆ ನನ್ನನ್ನು ಮನೆಯಿಂದ ಹೊರಗಟ್ಟುವಂತೆ ಮಾಡಿತು. ಇದು ನನ್ನ ತಪ್ಪೆ? ತರಗುಪೇಟೆಯಲ್ಲಿ ಧಡಿಯ ನಾಯಿಯ ಬಲಾತ್ಕಾರಕ್ಕೆ ಬಸುರಿಯಾದದ್ದು ನನ್ನ ತಪ್ಪೆ? ಮಕ್ಕಳ ಹಾಲಿಗಾಗಿ ಕದ್ದು ಒಬ್ಬಟ್ಟು ಕದ್ದದ್ದು ನಿಜ. ಆದರೆ ಲೋಕದಲ್ಲಿ ನಡೆಯುವುದೇನು? ಅನ್ನವಿಲ್ಲದವರು ಒಂದಾಗಿ ಯಾರ ಮನೆಯನ್ನೋ ಹಾಡಹಗಲಿನಲ್ಲಿ ಲೂಟಿ ಮಾಡುವುದಿಲ್ಲವೆ? ನಾನು ಮಾತ್ರ ಒಬ್ಬಟ್ಟು ತಿಂದುದು ತಪ್ಪೆ? ಹೆತ್ತು, ಹೊತ್ತು ಸಾಕಿದ ನನ್ನೈದು ಮರಿಗಳನ್ನು ಯಾರಾರಿಗೋ ಕೊಟ್ಟು ತಾಯಿಯಿಂದ ಮಕ್ಕಳನ್ನು ಅಗಲಿಸಿದರಲ್ಲಾ, ಅದು ಧರ್ಮವೇ? ಬಂಗಲೆಯಲ್ಲಿ ತಾನು ಮಾಡಬಾರದ ಕೆಲಸ ಏನು ಮಾಡಿದ್ದು? ಎಲ್ಲರೂ ಮಾಡುವುದನ್ನೇ ನಾನೂ ಮಾಡಿದೆ. ವಯೋಧರ್ಮಕ್ಕನುಗುಣವಾಗಿ ಆಶೆಪಟ್ಟಿದ್ದು ತಪ್ಪೆ? ಹಾಗೆ ನಾನು ಮಾಡಿದ್ದು ತಪ್ಪಾದರೆ ಆ ಕರಿ ಮುಂಡೆ ಆಯಾ ಮಾಡಿದ್ದು ನ್ಯಾಯವೇ? ತಲೆಯ ತುಂಬ ಪ್ರಶ್ನೆಗಳೇ ತುಂಬಿದುವು. ಅವಕ್ಕೆಲ್ಲ ಉತ್ತರ ಕೊಡುವವರಾರು? ಚೆನ್ನಿ ಪದೆ ಪದೆ ಅದೇ ಪ್ರಶ್ನೆಗಳನ್ನು ತನಗೆ ತಾನೇ ಹಾಕಿಕೊಂಡಿತು. ಪ್ರಶ್ನೆಗಳು ಬಗೆಹರಿಯುವ ಬದಲು ಚೆನ್ನಿಯನ್ನು ಮುತ್ತಿ, ಕಾಡಿ, ಅದರ ಮಿದುಳನ್ನು ತಿಂದುವು. ಚೆನ್ನಿಗೆ ಬುದ್ಧಿವಿಕಲ್ಪವಾಯಿತು. ಅದರ ಮುಖ ವಿಕಾರವೂ ರೌದ್ರವೂ ಆಯಿತು. ಮನಬಂದಂತೆ ಬೊಗಳುತ್ತಾ ಓಡಿತು. ದಾರಿಯಲ್ಲಿ ಸಿಕ್ಕಿದವರನ್ನು ಕಚ್ಚಿತು. ಮುನಿಸಿಪಾಲಿಟಿಯವರು ಬಂದು ಚೆನ್ನಿಯನ್ನು ಹಿಡಿದುಕೊಂಡು ಹೋದರು.

*

ರಸ್ತೆಯಲ್ಲಿ ನಗರಸಭೆಯ ನಾಯಿಗಾಡಿ ಹೋಗುತ್ತಿತ್ತು. ಕಬ್ಬಿಣದ ಕಂಬಿಗಳ ಹಿಂದೆ ಚೆನ್ನಿ ನಿಂತು ಹೊರಪ್ರಪಂಚವನ್ನು ಶೂನ್ಯಭಾವದಿಂದ ನೋಡುತ್ತಿತ್ತು. ನಾಯಿಗಾಡಿಯ ಹಿಂದೆ ಒಂದು ಕಪ್ಪುವ್ಯಾನು. ಅದರ ತುಂಬ ವಿವಿಧ ವಯಸ್ಸಿನ, ವಿವಿಧ ಉಡುಗೆ ತೊಟ್ಟ ವಿವಿಧ ರೂಪದ ಹೆಂಗಸರು, ಅವರೆಲ್ಲ ಹೋಟೆಲುಗಳಲ್ಲಿ, ಮನೆಗಳಲ್ಲಿ ವ್ಯಭಿಚಾರ ಮಾಡುತ್ತಿದ್ದ ಹೆಂಗಸರು. ಪೋಲೀಸರು ಅವರನ್ನೆಲ್ಲಾ ಹಿಡಿದು ಕೇಸು ಹಾಕಿ ಕೋರ್ಟಿನ ತೀರ್ಪಿನಂತೆ ರಕ್ಷಣಾಗೃಹಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಚೆನ್ನಿ ಅವರನ್ನು ನೋಡಿತು. 'ಅವರ ಬಾಳೂ ನನ್ನ ಬಾಳೂ ಒಂದೇ. ಆದರೆ ಅವರು ಬಾಳಲು ಹೋಗುತ್ತಿದ್ದಾರೆ; ನಾನು ಸಾಯಲು ಹೋಗುತ್ತಿದ್ದೇನೆ. ಅವರು ಮಾಡಿದ ಪುಣ್ಯವೇನು? ನಾನು ಮಾಡಿದ ಪಾಪವೇನು?' ಎಂದು ತನ್ನಲ್ಲಿಯೇ ಹೇಳಿಕೊಂಡಿತು. ಕಣ್ಣಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿತ್ತು.

---

ಸಾಹುಕಾರ ಮೂಲಧನವನ್ನು ಸಾಲಗಾರನ ಜಮೀನಿನಲ್ಲಿ ಬಿತ್ತಿದ ನಂತರ ಬಡ್ಡಿ ಖರ್ಜೂರದ ಮರದಂತೆ ತಲೆಯೆತ್ತಿ ಬೆಳೆಯತೊಡಗಿತು. ಇದನ್ನು ಕಂಡು ಮೂಲಧನಕ್ಕೆ ಭಯವಾಗಿ ಬಡ್ಡಿಯೊಂದಿಗೆ ಹೀಗೆಂದಿತು: "ತಮ್ಮಾ, ಇಷ್ಟು ವೇಗವಾಗಿ ಬೆಳೆಯಬೇಡ. ಸಾಲ ಹೇಗಿದೆ ಎನ್ನುವುದನ್ನು ಸ್ವಲ್ಪ ನೋಡು. ಹೀಗೇ ಬೆಳೆಯುತ್ತಾ ಇದ್ದರೆ ಸರಕಾರ ಅಪ್‌ಲಿಫ್ಟ್ ಎಂದು ಮೂಲವನ್ನೇ ಕಿತ್ತೊಗೆಯುತ್ತದೆ. ಮೂಲಧನ ಮತ್ತು ಬಡ್ಡಿ ಎರಡನ್ನೂ ವಜಾ ಮಾಡಿಬಿಡುತ್ತದೆ."

ಮೂಲ: ಸತೀಶ್ ರಾಠಿ

ಕನ್ನಡಕ್ಕೆ: ಎಸ್. ವಿ. ಸುಜಾತ

